# ವಿದ್ಯಾರ್ಥಿಗಳಿಗಾಗಿ, ಶಿಕ್ಷಕರಿಗಾಗಿ, ಸಾಮಾನ್ಯ ಓದುಗರಿಗಾಗಿ ಇತಿಹಾಸದ ಪುಸ್ತಕಗಳು



₹ 110



₹ 300



₹ 250



₹ 90



₹ 100



₹ 250



₹ 60



₹ 40



₹ 125



₹ 60



₹ 100



₹ 100



₹ 50



₹ 50



₹ 50



₹ 50



₹ 200



₹ 120

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ.

ನಿವ್ವಳ ₹300ಕ್ಕಿಂತ ಕಡಿಮೆ ಮೊತ್ತದ ಬೇಡಿಕೆಗಳಿಗೆ ಅಂಚೆ/ಕೊರಿಯರ್ ವೆಚ್ಚ ₹40 ಪ್ರತ್ಯೇಕ

ಆನ್‌ಲೈನ್ ಮೂಲಕವೂ ಲಭ್ಯ 

www.navakarnataka.com




ಹಣವನ್ನು ಡಿ.ಡಿ., ಎಂ.ಒ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com http://navakarnataka.blogspot.in

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರ್ಗಿ ✆ 224302

# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ವಿ. ಗೋಪಾಲ್, ರವಿ ಹೆಗ್ಗಡಿ, ತನು, ಸ್ಮಿತಾ ಕೌಶಿಕ್, ಕಮಲಂ ಅರಸು, ಗೋಪಿ, ಜಿಎಂಬೊ

**ಮುಖಪುಟ :** ಕಾರ್ಮಿಕ ಕಾನೂನು ತಿದ್ದುಪಡಿ ಕುರಿತು

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಎರಡೂವರೆ ದಶಕಗಳ ಹಿಂದೆ ಜನತಾಪರಿವಾರ ಒಂದುಗೂಡಿತ್ತು, ವಿ. ಪಿ. ಸಿಂಗ್‌ರ ನೇತೃತ್ವದಲ್ಲಿ. ೧೯೮೯ರಲ್ಲಿ ನಡೆದ ಲೋಕಸಭಾ ಚುನಾವಣೆಗಳಿಗೆ ಮುನ್ನ ಹೆಣೆದುಕೊಂಡ ವಿವಿಧ ಪಕ್ಷಗಳ ಈ ಒಕ್ಕೂಟ ಸರಕಾರ ರಚಿಸುವುದರಲ್ಲೂ ಯಶಸ್ವಿಯಾಗಿತ್ತು. ಎರಡು ವರ್ಷಗಳಲ್ಲಿ ಮೂವರು ಪ್ರಧಾನಿಗಳನ್ನು ನೀಡಿ ಅಸ್ಥಿರತೆ ಮೆರೆಯಿತು ಈ ಹೊಂದಾಣಿಕೆ. ಈ ಪ್ರಯೋಗ ದಿಂದಲೇ ಭಾರತೀಯ ಜನತಾ ಪಾರ್ಟಿ ಗೌರವ ಸ್ಥಾನ ಪಡೆದುಕೊಂಡಿದ್ದು ಮತ್ತು ಹೆಚ್ಚು ಲೋಕಸಭಾ ಸ್ಥಾನಗಳನ್ನು ಪಡೆದುಕೊಂಡಿದ್ದು. ಆಗಲೇ ಎಡಪಕ್ಷಗಳು ಜನತಾ ಪ್ರಯೋಗದ ಸರಕಾರಕ್ಕೆ ಬೆಂಬಲ ನೀಡಿತ್ತು. ಆಗ ಎಡಪಕ್ಷಗಳು ಐವತ್ತಕ್ಕೂ ಹೆಚ್ಚು ಸ್ಥಾನಗಳನ್ನು ಪಡೆದಿದ್ದವು. ಇಪ್ಪತ್ತೈದು ವರ್ಷಗಳಲ್ಲಿ ದೇಶದ ರಾಜಕೀಯದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಒಂದೇ ಪಕ್ಷದ ಆಡಳಿತ ಹೋಗಿ ಸಮ್ಮಿಶ್ರ ಸರಕಾರದ ಯುಗ ನಡೆದಿದೆ. ಈಗ ಮತೀಯವಾದಿ ಬಲಪಂಥೀಯ ಭಾಜಪ ಲೋಕಸಭೆಯಲ್ಲಿ ಬಹುಮತ ಪಡೆದುಕೊಂಡಿದೆ. ಹೆಸರಿಗೆ ಮಾತ್ರ ಎನ್‌ಡಿಎ ಸಮ್ಮಿಶ್ರ ಸರಕಾರ ಇದೆ. ಚುನಾವಣೆಗಳಲ್ಲಿ ಕಾಂಗ್ರೆಸ್ ನೆಲಕಚ್ಚಿದೆ, ಕೇವಲ ೪೪ ಸ್ಥಾನಗಳನ್ನು ಪಡೆದುಕೊಂಡು. ಸ್ವಾತಂತ್ರ್ಯಾನಂತರದಲ್ಲಿ ಕಾಂಗ್ರೆಸ್ ಪಡೆದ ಕನಿಷ್ಠ ಸಂಖ್ಯೆ ಇದು. ಮಹಾರಾಷ್ಟ್ರ ಮತ್ತು ಹರಿಯಾಣಗಳಲ್ಲೂ ಕಾಂಗ್ರೆಸ್ ಅಧಿಕಾರ ಕಳೆದುಕೊಂಡಿದೆ. ಈಗ ಮತ್ತೆ ಜನತಾ ಪರಿವಾರವನ್ನು ಪುನರುಜ್ಜೀವಗೊಳಿಸಲು ಪ್ರಯತ್ನ ನಡೆದಿದೆ. ಸಮಾಜವಾದಿ ಪಾರ್ಟಿ, ಜನತಾದಳ ಯುನೈಟೆಡ್, ರಾಷ್ಟ್ರೀಯ ಜನತಾದಳ, ಜನತಾದಳ (ಸೆಕ್ಯುಲರ್), ಇಂಡಿಯನ್ ನ್ಯಾಷನಲ್ ಲೋಕದಳ, ಸಮಾಜವಾದಿ ಜನತಾಪಾರ್ಟಿ – ಈ ಎಲ್ಲ ಪಾರ್ಟಿಗಳೂ ಒಂದಾಗಲು ಮುಂದಾಗಿವೆ. ಲೋಕಸಭೆಯಲ್ಲಿ ೧೫ ಸ್ಥಾನಗಳನ್ನು ಹೊಂದಿರುವ ಈ ಪರಿವಾರ ರಾಜ್ಯಸಭೆಯಲ್ಲಿ ೨೫ ಸ್ಥಾನಗಳನ್ನು ಹೊಂದಿದೆ. ಮುಖ್ಯವಾಗಿ ಮುಂಬರುವ ಉತ್ತರ ಪ್ರದೇಶ, ಬಿಹಾರ ಚುನಾವಣೆಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಈ ವ್ಯವಸ್ಥೆಯನ್ನು ಹೊಸೆಯಲಾಗುತ್ತಿದೆ. ಅದು ಅಧಿಕಾರ ಗ್ರಹಣ ಮಾಡುವುದರಲ್ಲಿ ಎಷ್ಟು ಸಫಲವಾದೀತೋ ಈಗಲೇ ಹೇಳಬರುವುದಿಲ್ಲ. ಈ ಪ್ರಯೋಗಕ್ಕೆ ಎಡಪಕ್ಷಗಳ ಬೆಂಬಲವೂ ಇದೆ. ಕಾಂಗ್ರೆಸ್ ಮತ್ತು ಭಾಜಪಗಳಿಗೆ ಪ್ರತಿಯಾಗಿ ತೃತೀಯರಂಗವೊಂದು ಅಸ್ತಿತ್ವಕ್ಕೆ ಬರುವುದು ಆಯ್ಕೆಯ ದೃಷ್ಟಿಯಿಂದ ಒಳ್ಳೆಯದೆ. ಆದರೆ ಜಿಡ್ಡು ಹಿಡಿದ ಸಂದರ್ಭ ಸಾಧಕರುಗಳೇ ನಾಯಕತ್ವದಲ್ಲಿರುವ ಈ ವ್ಯವಸ್ಥೆ ಎಷ್ಟುಮಟ್ಟಿಗೆ ಪರ್ಯಾಯ ವಾದೀತು ಎಂಬುದೇ ಸಂದೇಹ. ಉತ್ತರ ಪ್ರದೇಶದ ಮುಲಾಯಮ್ ಸಿಂಗ್, ಜೆಡಿಯುನ ಶರದ್ ಜೋಷಿ, ಕರ್ನಾಟಕದ ಜೆ.ಡಿ.ಎಸ್. ನಾಯಕ ದೇವೇಗೌಡ, ಬಿಹಾರದ ನಿತೀಶ್ ಕುಮಾರ್, ಲಾಲು ಪ್ರಸಾದ್ ಯಾದವ್ ಮುಂತಾದವರೆಲ್ಲ ಕಪ್ಪೆ ತಕ್ಕಡಿಗೆ ಹಾಕಿದಹಾಗೆ. ಯಾವ ಸಮಯದಲ್ಲಿ ಹೇಗೆ ಹೊರಳುವರೆಂದು ಹೇಳಲಾಗದು. ಆದರೂ ಈ ಪ್ರಯೋಗದಿಂದ ಏನಾಗುತ್ತದೋ ! ಸದ್ಯಕ್ಕಂತೂ ಭಾಜಪವನ್ನು ಕೇಂದ್ರದಲ್ಲಿ ಅಲುಗಾಡಿಸಲಾಗದು.

* * *

ಸೋಲಿನ ಮೇಲೆ ಸೋಲು ಅನುಭವಿಸುತ್ತಿರುವ ಕಾಂಗ್ರೆಸ್ ಈಗ ಕಂಗಾಲಾಗಿದೆ. ನರೇಂದ್ರ ಮೋದಿ ಅಬ್ಬರದಲ್ಲಿ ದಿಕ್ಕು ಕಾಣದಂತಾಗಿದೆ. ಅಮ್ಮ ಮಗ ಇಬ್ಬರೂ ಪಕ್ಷಕ್ಕೆ ಅಗತ್ಯವಾದ ನಾಯಕತ್ವ ನೀಡಲಾಗದೆ ಒದ್ದಾಡುತ್ತಿದ್ದಾರೆ. ಮೂರನೆಯ ಮುಖ ಮಗಳು ಪ್ರಿಯಾಂಕಳನ್ನು ಗಾದಿಗೆ ತಂದರೆ ಸಮಸ್ಯೆ ಬಗೆಹರಿದೀತು ಎಂದು ಕೆಲ ಕಾಂಗ್ರೆಸ್ ನಾಯಕರೂ ಗಾಂಧಿ ಕುಟುಂಬದ ಭಂಟರು ಕನಸು ಕಾಣುತ್ತಿದ್ದಾರೆ. ಕಾರ್ಯಕರ್ತರನ್ನು ಚುರುಕುಗೊಳಿಸಲು (ಈಗ ಕಾಂಗ್ರೆಸ್‌ನಲ್ಲಿ ಕಾರ್ಯಕರ್ತರೇ ಇಲ್ಲವಾಗಿದ್ದಾರೆ. ಎಲ್ಲ ನಾಯಕರದೇ ದರ್ಬಾರು) ಕ್ರಮ ತೆಗೆದುಕೊಳ್ಳದೇ ತೇಪೆ ಹಾಕಲು ನೋಡುತ್ತಿದೆ. ಭಾಜಪದ ದಾಳಿ ಎದುರು ಕಾಂಗ್ರೆಸ್ ನಾಯಕತ್ವ ತತ್ತರಿಸುತ್ತಿದೆ. ಕ್ರಮಬದ್ಧವಾದ ರೀತಿಯಲ್ಲಿ ಮೂರು ದಶಕಗಳಿಗೂ ಹೆಚ್ಚುಕಾಲ ಸ್ವತಂತ್ರ ಭಾರತದ ಆಡಳಿತದ ಚುಕ್ಕಾಣಿ

**(೭ನೇ ಪುಟಕ್ಕೆ)**




ಸಂಪುಟ-೧೬ ಸಂಚಿಕೆ-೫ ಡಿಸೆಂಬರ್ ೨೦೧೪

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ಆರ್. ಉಡುಪ

■ *ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಫಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು – ೫೬೦ ೦೫೮
ದೂರವಾಣಿ: ೨೮೩೯೭೪೨೬

■ *ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http ://navakarnataka.blogspot.in**
**http ://hosathumonthly.blogspot.in**




# ಸಂಪಾದಕೀಯ

## ಅಂಬೇಡ್ಕರ್ ಪ್ರಸ್ತುತತೆ

ಮಹಾನ್ ವ್ಯಕ್ತಿಗಳ ಹುಟ್ಟು ಮತ್ತು ಸಾವಿನ ಸಂದರ್ಭದಲ್ಲಿ ಅವರ ಕುರಿತು ಒಂದು ಕಾರ್ಯಕ್ರಮವನ್ನೋ, ಅವರ ಪ್ರತಿಮೆಗಳಿಗೆ ಮಾಲಾರ್ಪಣೆಯನ್ನೋ ಮಾಡಿ ಸರಕಾರಗಳು ಕೈ ತೊಳೆದುಕೊಳ್ಳುತ್ತವೆ. ಹೆಚ್ಚೆಂದರೆ, ಪತ್ರಿಕೆಗಳಿಗೆ ಜಾಹಿರಾತು ನೀಡಿ ಮುಖ್ಯಮಂತ್ರಿ, ಸಂಬಂಧಪಟ್ಟ ಇಲಾಖೆಯ ಮಂತ್ರಿ, ಅಧಿಕಾರಿಗಳ ಭಾವಚಿತ್ರವೇ ರಾರಾಜಿಸುವಂತೆ ನೋಡಿಕೊಳ್ಳುತ್ತವೆ. ಉಳಿದ ಸಮಯಗಳಲ್ಲಿ ದೇಶಕ್ಕಾಗಿ, ಮಾನವ ಕುಲದ ಏಳ್ಗೆಗಾಗಿ ಚಿಂತಿಸಿದ, ತ್ಯಾಗ ಬಲಿದಾನ ಮಾಡಿದ ಮಹಾನ್ ವ್ಯಕ್ತಿಗಳನ್ನು ಮರೆಗೆ ಸರಿಸಿ ಆ ವ್ಯಕ್ತಿಗಳ ಆಶಯ ಚಿಂತನೆಗೆ ವಿರುದ್ಧವಾಗಿ ನಡೆದುಕೊಳ್ಳುತ್ತವೆ. ಗಾಂಧೀಜಿಯನ್ನು ಕೊಲೆಗೈದವರೇ ಇಂದು ತಮ್ಮ ಸ್ವಚ್ಛ ಭಾರತ ಕಾರ್ಯಕ್ರಮಕ್ಕಾಗಿ ಅದೇ ಗಾಂಧೀಜಿಯನ್ನು ಪ್ರಚಾರ ರಾಯಭಾರಿಯಂತೆ ಬಳಸುತ್ತಿದ್ದಾರೆ. ಅದೇರೀತಿ ತನ್ನ ಹುಟ್ಟಿದ ದಿನವನ್ನೇ ಮಕ್ಕಳ ದಿನಾಚರಣೆಯನ್ನಾಗಿಸಿದ ನೆಹರೂ ಸ್ಮರಣೆಯ ಸಂದರ್ಭದಲ್ಲಿಯೇ ಮಕ್ಕಳ ಮೇಲಿನ ಅತ್ಯಾಚಾರ ತಡೆಗಟ್ಟಲಾಗದ ಸರಕಾರಗಳು ನೆಹರೂ ನೆನಪನ್ನು ಶಾಸ್ತ್ರೀಯವಾಗಿ ನಡೆಸಿಬಿಡುತ್ತವೆ. ಇದೇ ಸಂದರ್ಭದಲ್ಲಿ ನೆಹರೂ ಕಾಲದ ದೇಶದ ನೀತಿಗಳನ್ನು ಟೀಕೆಗೊಳಪಡಿಸಲಾಗುತ್ತಿದೆ. ಖಂಡಿತವಾಗಿ ನೆಹರೂ ಕಾಲದ ಆರ್ಥಿಕ, ಸಾಮಾಜಿಕ, ರಾಜಕೀಯ ಯೋಜನೆಗಳು ಕಲ್ಯಾಣ ರಾಜ್ಯದ ಕನಸನ್ನು ಹೊತ್ತಿದ್ದವು. ಆದರೆ ಇಂದಿನ 'ಕಂಪನಿ ಕಲ್ಯಾಣ' ನೀತಿಯ ಸರಕಾರಗಳಿಗೆ ಆ ಯೋಜನೆಗಳು ಪಥ್ಯವಾಗುತ್ತಿಲ್ಲ. ಆ ಕಾರಣಕ್ಕೆ ನೆಪಕ್ಕೆ ಮಾತ್ರ ನೆಹರೂ ಸ್ಮರಣೆ ನಡೆದು ಹೋಗುತ್ತದೆ. ಇಂಥ ಅಪಾಯಕ್ಕೆ ಹೆಚ್ಚು ಗುರಿಯಾಗುವ ವ್ಯಕ್ತಿ ಡಾ॥ ಬಾಬಾಸಾಹೇಬ್ ಅಂಬೇಡ್ಕರ್. ಅವರ ಚಿಂತನೆಗಳ ಮೇಲೆ ದಾಳಿ ಮಾಡುತ್ತಲೇ ಅವರ ಮೂರ್ತಿಯನ್ನು ಆರಾಧಿಸುವ ಕೆಲಸ ನಿರಂತರವಾಗಿ ನಡೆದೇ ಇದೆ.

ಜೀವನಪರ್ಯಂತ ವರ್ಣಾಶ್ರಮ ವ್ಯವಸ್ಥೆಯ ದಾಳಿಗೊಳಗಾಗಿ ಅಂಥ ಅಮಾನವೀಯ ವ್ಯವಸ್ಥೆಯನ್ನೇ ಕಿತ್ತು ಹಾಕಲು ಶ್ರಮಿಸಿ, ಹಿಂದೂ ಆಗಿ ಹುಟ್ಟಿದ್ದೇನೆ, ಹಿಂದೂ ಆಗಿ ಸಾಯಲಾರೆ ಎಂದು ಹೇಳಿ ಬದುಕಿನ ಕೊನೆಯಲ್ಲಿ ಬುದ್ಧ ಧರ್ಮಕ್ಕೆ ಮತಾಂತರಗೊಂಡ ಅಂಬೇಡ್ಕರ್ ಅವರ ಭಾವಚಿತ್ರ ಹಿಂದೂ ಸಮಾಜೋತ್ಸವದಲ್ಲಿ ರಾರಾಜಿಸುತ್ತದೆ. ಇನ್ನು ಸರಕಾರಗಳಂತೂ ಅಂಬೇಡ್ಕರ್ ಅವರ ಆಶಯಗಳನ್ನು ಕಾನೂನುಬದ್ಧವಾಗಿಯೇ ಹೊಸಕಿಹಾಕುತ್ತಿವೆ. ಹೀಗೆ ಅಂಬೇಡ್ಕರ್ ಅವರ ಚಿಂತನೆಗಳನ್ನು ಅಪ್ರಸ್ತುತಗೊಳಿಸಲು ಯತ್ನಿಸುವ ಮನಸುಗಳೇ ಅವರ ಜನ್ಮ, ನಿಧನದ ದಿನಗಳ ಸಂದರ್ಭದಲ್ಲಿ ಮೂರ್ತಿ ಪೂಜೆಗಿಳಿಯುತ್ತವೆ. ಇಂಥ ವಿರೋಧಾಭಾಸಕ್ಕೆ ಗುರಿಯಾದವರಲ್ಲಿ ಅಂಬೇಡ್ಕರ್ ಮೊದಲಿಗರು ಮತ್ತು ಹೆಚ್ಚು ದುರ್ಬಳಕೆಗೊಳಗಾದವರು.

ಅಂಬೇಡ್ಕರ್ ಅವರ ಮರಣದ ದಿನವನ್ನು ಸ್ಮರಿಸುವ ಸಂದರ್ಭದಲ್ಲಿ ಸರಕಾರಗಳು ಹೇಗೆ ನಡೆದುಕೊಳ್ಳುತ್ತವೆಯೋ ಅದು ಬೇರೆ ಸಂಗತಿ. ಆದರೆ ಸಾಮಾಜಿಕ ಹೋರಾಟಗಾರರು, ವಿವಿಧ ಚಳುವಳಿಗಾರರು ಅಂಬೇಡ್ಕರ್ ಅವರ ಚಿಂತನೆಗಳನ್ನು ನಿಜಾರ್ಥದಲ್ಲಿ ಕ್ರಿಯಾರೂಪಕ್ಕಿಳಿಸುವ ರೀತಿಯಲ್ಲಿ ಸ್ಮರಿಸಿಕೊಳ್ಳಬೇಕಾದ ಅವಶ್ಯಕತೆ ಹಿಂದೆಂದಿಗಿಂತಲೂ ಇಂದಿದೆ.

ದೈಹಿಕವಾಗಿ ಅಂಬೇಡ್ಕರ್ ಅಂತ್ಯವಾಗಿರಬಹುದು. ಆದರೆ ಚಿಂತಕರಾಗಿ ಇಂದಿಗೂ ನಮ್ಮ ಮಧ್ಯೆ ಇದ್ದಾರೆ. ಮಾನವನ ಪ್ರಗತಿಗಾಗಿ ಚಿಂತಿಸಿದ ಚಿಂತಕರಿಗೆ ಸಾವಿರುವುದಿಲ್ಲ. ಅವರು ತಮ್ಮ ಚಿಂತನೆಗಳ ಪ್ರಖರತೆಯಿಂದ ಸದಾ ಜೀವಂತವಾಗಿರುತ್ತಾರೆ. ಬುದ್ಧ, ಬಸವ, ಟೀಪೂ, ಚನ್ನಮ್ಮ, ಅಂಬೇಡ್ಕರ್ ಅಂಥವರನ್ನು ಒಂದು ಧರ್ಮಕ್ಕೆ, ಒಂದು ಜಾತಿಗೆ ಸೀಮಿತಗೊಳಿಸುವಲ್ಲಿ ನಮಗಿರುವ 'ಸಾಮರ್ಥ್ಯ' ಇನ್ನಾರಿಗೂ ಇಲ್ಲ. ಇಂದು ಅಂಬೇಡ್ಕರ್ ಅವರನ್ನು ಒಂದು ಜಾತಿ, ಅಥವಾ ದಲಿತವರ್ಗದ ನಾಯಕ ಎಂದು ಸೀಮಿತಗೊಳಿಸಿಬಿಟ್ಟರೆ ಅಷ್ಟರಮಟ್ಟಿಗೆ ಅಂಬೇಡ್ಕರ್ ಸಮಾಜದ ಬಹುಜನ ಸಮುದಾಯದಿಂದ ದೂರವಾಗುತ್ತಾರೆ ಎಂಬ ಕುತಂತ್ರ ಇದರ ಹಿಂದಿದೆ. ಅಂಬೇಡ್ಕರ್ ಖಂಡಿತವಾಗಿಯೂ ದಲಿತ. ಅಸ್ಪೃಶ್ಯರ ವಿಮೋಚನೆಗಾಗಿ ತಮ್ಮ ಬದುಕನ್ನು ಮೀಸಲಾಗಿಟ್ಟರು. ಆದರೆ ಅದೇ ಸಂದರ್ಭದಲ್ಲಿ ಒಂದು ಸಮಾನ ಅವಕಾಶಗಳಿರುವ ಸಮಾಜ ನಿರ್ಮಾಣವಾಗದೇ ಅಸ್ಪೃಶ್ಯರ ವಿಮೋಚನೆಯಾಗುವುದಿಲ್ಲ ಎಂಬ ಸತ್ಯ ಅವರಿಗೆ ಗೊತ್ತಿತ್ತು. ಆ ಕಾರಣಕ್ಕೇ ಅವರು ಇತರ ಶೋಷಿತ ವರ್ಗಗಳಾದ ಕಾರ್ಮಿಕ, ರೈತ, ಮಹಿಳೆ ಹೀಗೆ ಎಲ್ಲ ಜಾತಿಗಳ ಶೋಷಿತ ವರ್ಗಗಳ ಪರವಾಗಿ ಹೋರಾಡಿದರು. ಅದರ ಭಾಗವಾಗಿಯೇ ಮಹಾರಾಷ್ಟ್ರದ ರತ್ನಗಿರಿ, ಥಾಣ ಪ್ರದೇಶದಲ್ಲಿ ೧೯೨೯ರಲ್ಲಿ ಉಳುಮೆದಾರರ ರಕ್ತ ಹೀರುತ್ತಿದ್ದ ಖೋತಿ ಪದ್ಧತಿಯ ವಿರುದ್ಧ ಹೋರಾಡುತ್ತಾರೆ. ಕೇವಲ ಹೋರಾಟ ಮಾತ್ರವಲ್ಲ ಮುಂದೆ ೧೯೩೭ರಲ್ಲಿ ಬಾಂಬೆ ಅಸೆಂಬ್ಲಿಯಲ್ಲಿ ಖೋತಿ ಪದ್ಧತಿ, ವತನ್‌ದಾರ ಪದ್ಧತಿಗಳಂಥ ರೈತ ವಿರೋಧಿ ನೀತಿಗಳ ರದ್ಧತಿಗೆ ಕಾನೂನು ಬರಲು ಕಾರಣರಾಗುತ್ತಾರೆ. ಉಳುಮೆಗಾರರಿಗೂ ಸರಕಾರಕ್ಕೂ ಮಧ್ಯೆ ಇರುವ ಮಧ್ಯವರ್ತಿಗಳನ್ನು ತೆಗೆದುಹಾಕಿ ನೇರ ಸಂಪರ್ಕವೇರ್ಪಡಲು ಶ್ರಮಿಸುತ್ತಾರೆ. ಅಂಬೇಡ್ಕರ್ ಅವರ ಸಂಶೋಧನಾ ಪ್ರಬಂಧವೇ ಸಣ್ಣ ಹಿಡುವಳಿಗಳ ಆರ್ಥಿಕತೆ ಕುರಿತಾದದ್ದು. ಅದೇ ಬಾಂಬೆ ಶಾಸನಸಭೆಯಲ್ಲಿ ಕಾರ್ಮಿಕವರ್ಗಕ್ಕಿರುವ ಮುಷ್ಕರದ ಹಕ್ಕಿನ ಪರವಾಗಿ ಧ್ವನಿ ಎತ್ತುತ್ತಾರೆ. ಜೀವಿಸುವ ಹಕ್ಕು ದೈವದತ್ತವಾಗಿದ್ದರೆ ಮುಷ್ಕರದ ಹಕ್ಕೂ ದೈವದತ್ತವಾದದ್ದು ಎಂದು ಪ್ರತಿಪಾದಿಸುತ್ತಾರೆ. ಅವರು

೧೯೩೬ರಲ್ಲಿ ಸ್ಥಾಪಿಸಿದ ರಾಜಕೀಯ ಪಕ್ಷದ ಹೆಸರೇ ಸ್ವತಂತ್ರ ಕಾರ್ಮಿಕ ಪಕ್ಷ (ಇಂಡಿಪೆಂಡೆಂಟ್ ಲೇಬರ್ ಪಾರ್ಟಿ) ಈ ಪಕ್ಷದ ಆರ್ಥಿಕ ನೀತಿಗಳಲ್ಲಿ ಕೃಷಿ ಮತ್ತು ಕೈಗಾರಿಕೆಗಳನ್ನು ಯಾವ ರೀತಿ ಬೆಳೆಸಬೇಕು, ಉತ್ಪಾದನೆಯ ಹೆಚ್ಚಳ ಮತ್ತು ಅದರ ಬಳಕೆಯ ವಿಧಾನವನ್ನು ಹೇಳುತ್ತಾರೆ. ಇಲ್ಲಿ ಅವರ ದೃಷ್ಟಿಯಲ್ಲಿ ಕೇವಲ ದಲಿತರಿಲ್ಲ. ದೇಶದ ರೈತ, ಕಾರ್ಮಿಕ, ಹೀಗೆ ಎಲ್ಲ ವರ್ಗದ ಜನರೂ ಇದ್ದಾರೆ. ೧೯೪೬ರಲ್ಲಿ ಘಟನಾ ಸಭೆಗೆ ಸಲ್ಲಿಸಿದ ವಿಜ್ಞಾಪನಾ ಪತ್ರ ಕೇವಲ ಮನವಿಯಾಗಿರಲಿಲ್ಲ. ಅದು ಸ್ವಸ್ಥ ಸಮಾಜ ನಿರ್ಮಾಣಕ್ಕೆ ಪೂರಕವಾದ ವಿಧಿಗಳನ್ನೊಳಗೊಂಡ ಸಂವಿಧಾನದ ಕರಡು ಆಗಿತ್ತು. ಇಂಥ ಮಹಾನ್ ಚಿಂತಕನೊಬ್ಬನನ್ನು ಇಂದು ಕೇವಲ ಪರಿಶಿಷ್ಟ ಜಾತಿಯ ನಾಯಕನನ್ನಾಗಿಸಿದ್ದು ನಾವು ಇತಿಹಾಸಕ್ಕೆ ಬಗೆವ ದ್ರೋಹವಾಗುತ್ತದೆ. ಅಂಬೇಡ್ಕರ್ ಅವರ ಅನುಯಾಯಿಗಳೂ ಸಹ ಕೇವಲ ಜಾತಿ, ಮೀಸಲಾತಿ ವಿಷಯಗಳ ಕುರಿತೇ ಪ್ರಸ್ತಾಪಿಸುತ್ತ ಸಮಗ್ರ ಅಂಬೇಡ್ಕರ್ ವ್ಯಕ್ತಿತ್ವವನ್ನು ಸೀಮಿತಗೊಳಿಸಿದ್ದಾರೆ. ಅಂಬೇಡ್ಕರ್ ಅವರು ಆಶಿಸಿದ್ದ 'ಪ್ರಭುತ್ವ ಸಮಾಜವಾದ'ದ ಕನಸು ಇಂದು ನಾಶವಾಗಿದೆ. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಸಮಾಜವಾದವೇ ಅಪ್ರಸ್ತುತ ಎನ್ನುವ ಪ್ರಚಾರ ಜೋರಾಗಿ ನಡೆದಿದೆ. ಜಗತ್ತಿನ ಪ್ರಜೆಗಳೆಲ್ಲ ಗ್ರಾಹಕರು ಎನ್ನುವ ವಿಶ್ವ ವ್ಯಾಪಾರ ಸಂಘಟನೆಯ ಆಶಯಗಳಿಗೆ ಪೂರಕವಾಗಿ ನಮ್ಮ ಸರಕಾರಗಳು ಆಡಳಿತ ಮಾಡುತ್ತಿವೆ. ಕಲ್ಯಾಣ ರಾಜ್ಯದ ಕಲ್ಪನೆಯೇ ಮಾಯವಾಗುತ್ತಿದೆ. ಇಂಥ ಸಂದರ್ಭದಲ್ಲಿ ಅಂಬೇಡ್ಕರ್ ಅಧ್ಯಕ್ಷತೆಯಲ್ಲಿ ರಚಿಸಿದ ಸಂವಿಧಾನವೇ ತಿದ್ದುಪಡಿಗೊಂಡು ಅದರ ಮೂಲ ಆಶಯಕ್ಕೆ ಧಕ್ಕೆ ತರುತ್ತಿದೆ. ಅಂಬೇಡ್ಕರ್ ಅವರ ಚಿಂತನೆಯ ದಮನ ವ್ಯವಸ್ಥಿತವಾಗಿ ನಡೆಯುತ್ತಿದೆ. ಅಂಬೇಡ್ಕರ್ ದೈಹಿಕವಾಗಿ ಅಂದು ನಿಧನರಾಗಿರಬಹುದು ಆದರೆ ಅವರ ಆಶಯಗಳು ಅಂತ್ಯವಾಗಲು ಬಿಡಕೂಡದು.

ಸಿದ್ದನಗೌಡ ಪಾಟೀಲ

## ಸ್ವಾವಲಂಬನೆಯಿಂದ ಪರಾವಲಂಬನೆಗೆ

**ಜಾ**ಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳಕ್ಕೆ ಅನಿರ್ಬಂಧ ಅವಕಾಶ ಇವೆಲ್ಲ ಪ್ರಾರಂಭವಾಗಿ ಇಪ್ಪತ್ತೈದು ವರ್ಷಗಳಾಯಿತು. ಆಗಲೇ ಪ್ರಾರಂಭವಾದದ್ದು ಸಾರ್ವಜನಿಕ ಉದ್ಯಮಗಳ, ಎಂದರೆ ಸರಕಾರೀ ಕ್ಷೇತ್ರದಲ್ಲಿರುವ ಉದ್ಯಮಗಳ ಖಾಸಗೀಕರಣ ಪ್ರಕ್ರಿಯೆ. ಭಾಜಪ ನೇತೃತ್ವದ ಮೊದಲ ಎನ್‌ಡಿಎ ಸರಕಾರ ಅಸ್ತಿತ್ವಕ್ಕೆ ಬಂದಾಗ ಬಂಡವಾಳ ಹರಣಕ್ಕಾಗಿ ವಿಶೇಷ ಮಂತ್ರಾಲಯವನ್ನೇ ಹುಟ್ಟುಹಾಕಿತು. ಈಗ ಅಧಿಕಾರಗ್ರಹಣ ಮಾಡಿರುವ ಮೋದಿ ಸರಕಾರ ಬಂದ ಮೇಲೆ ಅದು ವಿಪರೀತದ ಮಟ್ಟಕ್ಕೆ ಹೋಗುತ್ತಿದೆ. ಪ್ರಾರಂಭದಲ್ಲಿ ನಷ್ಟ ಅನುಭವಿಸುತ್ತಿದ್ದ ಕಂಪೆನಿಗಳ ಷೇರುಗಳನ್ನು ಮಾತ್ರ ಅತ್ಯಂತ ಕಡಿಮೆ ಬೆಲೆಗೆ ಸರಕಾರ ಮಾರಾಟ ಮಾಡಿತು. ಈಗ ಲಾಭದಾಯಕ ಉದ್ಯಮಗಳ ಷೇರುಗಳನ್ನು ಅಗ್ಗ ದರದಲ್ಲಿ ಮಾರಾಟ ಮಾಡಲಾಗುತ್ತಿದೆ. ೧೯೯೧-೯೨ರಲ್ಲಿ ಸಾರ್ವಜನಿಕ ಉದ್ಯಮಗಳ ಷೇರುಗಳ ವಿಕ್ರಯದಿಂದ ಸರಕಾರಕ್ಕೆ ೩,೦೩೭ ಕೋಟಿ ರೂ.ಗಳ ವರಮಾನ ಬಂದಿತು. ಈಗ ೨೦೧೪-೧೫ರಲ್ಲಿ ೪೩,೪೨೫ ಕೋಟಿ ರೂ.ಗಳನ್ನು ನಿರೀಕ್ಷಿಸಲಾಗಿದೆ. ಎರಡನೇ ಪಂಚವಾರ್ಷಿಕ ಯೋಜನೆಯ ಕಾಲದಲ್ಲಿ ದೇಶದ ಔದ್ಯೋಗೀಕರಣಕ್ಕೆ ಯಾರೂ ಮುಂದೆ ಬರದಿದ್ದಾಗ ಸರಕಾರವೇ ಬಂಡವಾಳ ಹೂಡಿ ಕೈಗಾರಿಕೆಗಳನ್ನು ಸ್ಥಾಪಿಸಿದಾಗ ಖಾಸಗಿ ಕ್ಷೇತ್ರದ ಉದ್ಯಮಿಗಳೂ ವಿದೇಶೀ ಬಂಡವಾಳಗಾರರು ಹುಯಿಲೆಬ್ಬಿಸಿದ್ದುದನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಅನಂತರದ ವರ್ಷಗಳಲ್ಲಿ ಸಾರ್ವಜನಿಕ ಕ್ಷೇತ್ರ ವಿಸ್ತಾರಗೊಂಡಿದ್ದು ಸರಕಾರಕ್ಕೆ ಡಿವಿಡೆಂಡ್‌ಗಳಿಂದ ಸಾಕಷ್ಟು ವರಮಾನ ಬರುತ್ತಿತ್ತು. ಕೆಲವು ಉದ್ಯಮಗಳು ಲಾಭದಾಯಕವಾಗಿರಲಿಲ್ಲ, ದಕ್ಷತೆಯಿಂದ ಕಾರ್ಯನಿರ್ವಹಿಸುತ್ತಿರಲಿಲ್ಲ ಎನ್ನುವುದು ಬೇರೆ ವಿಚಾರ. ಹಾಗಂತ ನೆಗಡಿ ಬಂತು ಎಂದು ಮೂಗನ್ನೇ ಕತ್ತರಿಸಬೇಕಾಗಿಲ್ಲ ಅಲ್ಲವೇ? ಭಾರತದ ಸಾರ್ವಜನಿಕ ಉದ್ಯಮಗಳಿಂದ ಸರಕಾರದ ಖಜಾನೆಗೆ ಬರುತ್ತಿದ್ದ ವರಮಾನ ಕಡಿಮೆಯೇನೂ ಆಗಿರಲಿಲ್ಲ. ಅದು ಪ್ರತಿವರ್ಷ ಸುಮಾರು ಒಂದೂವರೆ ಲಕ್ಷ ಕೋಟಿಗೂ ಅಧಿಕವಾಗಿತ್ತು. ಸ್ವಾತಂತ್ರ್ಯಾನಂತರದಲ್ಲಿ ಸ್ವಾವಲಂಬನೆ ಸಾಧಿಸಲು ಅಸ್ತಿತ್ವಕ್ಕೆ ಬಂದುವು ಈ ಉದ್ಯಮಗಳು. ಈಗ ಅರವತ್ತು ವರ್ಷಗಳಾದ ಮೇಲೆ ಈ ದೇಶ ಪರಾವಲಂಬನೆಯ ಹಾದಿಯಲ್ಲಿ ಹೊರಟಿದೆ. ಖಾಸಗೀಕರಣ, ವಿದೇಶೀ ಬಂಡವಾಳಕ್ಕೆ ಮುಕ್ತ ಅವಕಾಶ ನೀಡಿ.

ಮೋದಿ ಸರಕಾರ ಬಂದಮೇಲೆ 'ಭಾರತದಲ್ಲೇ ತಯಾರಿಸಿ' ಎಂಬ ಘೋಷಣೆ ಪ್ರಾರಂಭವಾಗಿದೆ. ಪ್ರಧಾನಮಂತ್ರಿ ಹೋದ ಕಡೆಯಲ್ಲೆಲ್ಲ, ಪ್ರಧಾನವಾಗಿ ವಿದೇಶೀ ಯಾತ್ರೆಯಲ್ಲಿ ವಿದೇಶೀ ಬಂಡವಾಳಗಾರರನ್ನು ಆಕರ್ಷಿಸಲು ಈ ಘೋಷಣೆಯನ್ನು ಪುನರುಚ್ಚರಿಸುತ್ತಾರೆ. 'ನೂರು ಕೋಟಿಗೂ ಅಧಿಕ ಜನರಿರುವ ಭಾರತದ ಮಾರುಕಟ್ಟೆ ನಿಮಗಾಗಿ ತೆರೆದಿದೆ. ಬನ್ನಿ, ಇಲ್ಲೇ ಬಂಡವಾಳ ಹೂಡಿ ತಯಾರಿಸಿ.' ಇದು ಈಚೆಗೆ ಆಸ್ಟ್ರೇಲಿಯಾಗೆ ಭೇಟಿ ನೀಡಿದ್ದಾಗ ಮೋದಿ ಭಾಷಣದ ಸಾರ. 'ನಮ್ಮ ಸರಕಾರ ನಿಮಗೆ ಬೇಕಾದ ಅನುಕೂಲ ಮಾಡಿಕೊಡಲು ಸಿದ್ಧ' ಎಂದೂ ಘೋಷಿಸಿದ್ದಾರೆ. ಇದರ ನಿಜವಾದ ಅರ್ಥ ದೇಶದ ಆರ್ಥಿಕ ವ್ಯವಹಾರಗಳಲ್ಲಿ ವಿದೇಶೀ ಬಂಡವಾಳಕ್ಕೆ ಆಧಿಪತ್ಯ. ಇದರ ಪರಿಣಾಮ ಏನಾಗುತ್ತದೆ ವಿಚಾರ ಮಾಡಿನೋಡಿ. ವ್ಯಾಪಾರಕ್ಕಾಗಿ ಬಂದ ಬ್ರಿಟಿಷರು ದೇಶವನ್ನೇ ದಾಸ್ಯಕ್ಕೆ ದೂಡಿದ್ದನ್ನು ನಾವು ಮರೆಯಲಾಗದು. ಸ್ವಾತಂತ್ರ್ಯಾನಂತರ 'ಭಾರತದಲ್ಲಿ ತಯಾರಾದುದು' ಎನ್ನುವುದು ಆರ್ಥಿಕ ಸ್ವಾವಲಂಬನೆಯ ಮೂಲಮಂತ್ರವಾಗಿತ್ತು. ದೇಸೀ ಬಂಡವಾಳ ರೂಢಿಸಿ, ನಮ್ಮದೇ ಸರಕುಗಳನ್ನು ತಯಾರಿಸುವುದು ಹೆಮ್ಮೆಯ ವಿಷಯವಾಗಿತ್ತು. ವಿದೇಶೀ ಬಂಡವಾಳ ಹೂಡಿಕೆಯ



ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



■ *ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ₹ ೧೫/- |
| ವಾರ್ಷಿಕ ಚಂದಾ | ₹ ೨೦೦/- |
| ಮೂರು ವರ್ಷಕ್ಕೆ | ₹ ೪೫೦/- |

■ *ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರ್ಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಮೇಲೆ ಅದೇ ಉದ್ದೇಶದಿಂದಲೇ ನಿರ್ಬಂಧಗಳನ್ನು ಹೇರಲಾಗಿತ್ತು. ಯಾವುದೇ ಕಾರಣಕ್ಕೂ ವಿದೇಶೀ ಬಂಡವಾಳದ ಪ್ರಮಾಣ ಶೇ. ೪೯ಕ್ಕಿಂತ ಹೆಚ್ಚಾಗಕೂಡದು ಎಂದಿತ್ತು. ಈಗ ಎಲ್ಲ ಬದಲಾಗಿದೆ. ಎಲ್ಲ ನಿರ್ಬಂಧಗಳೂ ಮರೆಯಾಗಿ ವಿದೇಶೀ ಬಂಡವಾಳಕ್ಕೆ ಮಣೆ ಹಾಕಲಾಗುತ್ತಿದೆ. ಭಾರತದಲ್ಲೇ ತಯಾರಿಸಿ ಎಂದರೆ ಈಗ ಮಾರುಕಟ್ಟೆಗೆ ತಂದು ಸುರಿಯುತ್ತಿರುವ ಐಷಾರಾಮಿ ಸರಕುಗಳನ್ನು ಇಲ್ಲೇ ತಯಾರಿಸಿ ಮಾರಾಟ ಮಾಡಿ ಎಂದರ್ಥ. ಹಾಗಾದಲ್ಲಿ ಇಲ್ಲಿನ ಪ್ರಜೆಗಳಿಗೆ ಉದ್ಯೋಗ ದೊರೆಯುತ್ತದೆ ಎನ್ನುವುದು ಮೋದಿ ಸರಕಾರದ ಲೆಕ್ಕಾಚಾರ. ಇದು ಎಷ್ಟುಮಟ್ಟಿಗೆ ಕಾರ್ಯಗತವಾಗುವುದು, ಪರಿಣಾಮಗಳೇನು ಎನ್ನುವುದನ್ನು ಕಾದು ನೋಡಬೇಕು. ಸದ್ಯಕ್ಕಂತೂ ವಿದೇಶೀ ಬಂಡವಾಳದ ಗುಲಾಮರಾಗಲು ನಾವು ಸಿದ್ಧವಾಗಿದ್ದೇವೆ ಎಂದು ಘೋಷಿಸಿಯಾಗಿದೆ. ಜೀವವಿಮೆಯನ್ನು ಕೂಡ ವಿದೇಶೀಯರಿಗೆ ಒಪ್ಪಿಸುತ್ತಿದ್ದೇವೆ.

ಸಾರ್ವಜನಿಕ ಆಸ್ತಿಯ ಮಾರಾಟ ಒಂದು ಕಡೆ, ವಿದೇಶೀ ಬಂಡವಾಳಕ್ಕೆ ಆಮಂತ್ರಣ ಇನ್ನೊಂದು ಕಡೆ, ಇದರಿಂದಾಗಿ ಭಾರತ ಸರಕಾರ ಇಂದು ಅಂಗಲಾಚಿ ಬೇಡುವ ಸ್ಥಿತಿ ತಲುಪಿದೆ ವಿದೇಶೀಯರ ಮುಂದೆ. ಈಚೆಗೆ ಆಸ್ಟ್ರೇಲಿಯದ ಬ್ರಿಸ್ಬೇನ್‌ನಲ್ಲಿ ಜರುಗಿದ ಜಿ. ೨೦ ಶೃಂಗಸಭೆಯಲ್ಲಿ ಪ್ರಧಾನಿ ಮೋದಿ ನಡೆದುಕೊಂಡ ರೀತಿ ಅಂಥದ್ದಾಗಿತ್ತು. ಕಪ್ಪು ಹಣ ವಿದೇಶಗಳಿಂದ ವಾಪಸ್ಸು ತರುವ ಕನಸು ಕಾಣುತ್ತಿರುವ ಮೋದಿ ಸರಕಾರ ಈ ಶೃಂಗಸಭೆಯಲ್ಲಿ ಭಾಗವಹಿಸಿದ್ದ ದೇಶಗಳ ಸಹಕಾರ ಕೋರಿದ್ದು, ಅದನ್ನು ಭಾರತದ ನಿಲುವಿಗೆ ಸಂದ ಜಯ ಎಂದು ಪ್ರಚಾರ ನಡೆಸಿದ್ದು ತಿಳಿದಿರುವ ವಿಷಯ. ಚುನಾವಣೆಯ ಸಮಯದಲ್ಲಿ ನೀಡುವ ಇಂಥ ಅಬ್ಬರದ ಘೋಷಣೆಗಳು ಕಾಗದದ ಮೇಲೇ ಉಳಿಯುವಂಥವು. ದೇಶದಲ್ಲೇ ಇರುವ ಕಪ್ಪುಹಣದ ಪ್ರಭಾವವನ್ನು ಮಟ್ಟಹಾಕಲು ಸರಕಾರಗಳಿಗೆ ಇದುವರೆಗೆ ಸಾಧ್ಯವಾಗಿಲ್ಲ. ದೇಶದ ಆರ್ಥಿಕ ವಲಯದಲ್ಲಿ ಕಪ್ಪುಹಣದ ವ್ಯವಹಾರ ಸಮಾನಾಂತರವಾಗಿ ಚಲಾವಣೆಯಲ್ಲಿದೆ. ಮೊದಲು ಸರಕಾರ ಅದಕ್ಕೆ ಕಡಿವಾಣ ಹಾಕಲಿ. ಸಾಕಷ್ಟು ಬಹುಮತ ಹೊಂದಿರುವ ಎನ್‌ಡಿಎ ಸರಕಾರ ಇದಕ್ಕಾಗಿ ಅಗತ್ಯವಾದ ಕಾನೂನು ಕ್ರಮವನ್ನು ಕೈಗೊಳ್ಳಬಹುದಾಗಿದೆ. ಕಪ್ಪುಹಣದ ದಾಸ್ತಾನಿರುವುದು ಶ್ರೀಮಂತ ಬಂಡವಾಳಗಾರರ ಬಳಿ ಅಲ್ಲವೆ. ಆದರೆ ಅದನ್ನು ಮಾಡಿದರೆ ಸರಕಾರಕ್ಕೇ ಆಪತ್ತು ಹೆಚ್ಚು. ಅದರಿಂದಲೇ ಜನರ ಗಮನವನ್ನು ಬೇರೆ ಕಡೆ ಸೆಳೆಯಲು ಕಪ್ಪು ಹಣ ವಾಪಸ್ಸು ತರುವ ನಾಟಕ.

ಅಧಿಕಾರಕ್ಕೇರಿ ಇನ್ನೇನು ಆರು ತಿಂಗಳಾಗುತ್ತಿರುವ ಮೋದಿ ಸರಕಾರದ ಸಾಧನೆಗಳೆಲ್ಲ ಬರೀ ಘೋಷಣೆಗಳ, ಯೋಜನೆಗಳ ಸರಮಾಲೆಯೇ ಆಗಿದೆ. ಭಾರತವನ್ನು ಸ್ವಚ್ಛಗೊಳಿಸಿ, ಗಂಗಾ ನದಿಯ ಪವಿತ್ರ ಜಲವನ್ನು ಶುದ್ಧೀಕರಿಸಿ, ದೇಶದ ಅಮೂಲ್ಯವಾದ ಆಸ್ತಿಯನ್ನು ಕರಗಿಸಿ, ಭಾರತದಲ್ಲೇ ತಯಾರಿಸಿ ಎಂದು ವಿದೇಶೀ ಬಂಡವಾಳಗಾರರಿಗೆ ಪಟ್ಟಾಭಿಷೇಕ ಮಾಡುವುದೇ ಸರಕಾರದ ಗುರಿ ಎಂದು ತೋರುತ್ತದೆ. ಅಂತೂ ಸ್ವಾತಂತ್ರ್ಯಾನಂತರದ ಈ ಅರವತ್ತಕ್ಕೂ ಹೆಚ್ಚು ವರ್ಷಗಳ ಅವಧಿಯಲ್ಲಿ ಸ್ವಾವಲಂಬನೆಯಿಂದ ಪರಾವಲಂಬನೆಗೆ ಜಾರಿರುವುದೇ ಸಾಧನೆ ಎಂದರೆ ಉತ್ಪ್ರೇಕ್ಷೆಯಲ್ಲ.

## ‘ಹೊಸತು’ ಚಂದಾದಾರ / ಓದುಗರಿಗೆ ಮಾಹಿತಿ

ಜನವರಿ ೨೦೧೫ರ ‘ಹೊಸತು’ ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿದ್ದು ಓದುಗರಿಗೆ ಸಾಹಿತ್ಯದ ಸುರಿಮಳೆ ! ಲೇಖನಗಳ ಆಯ್ಕೆ / ಪರಿಷ್ಕರಣೆ ಮುಂತಾದ ಕೆಲಸಗಳಿಗೆ ಹೆಚ್ಚಿನ ಕಾಲಾವಕಾಶ ಬೇಕಿರುವುದರಿಂದ ಓದುಗರಿಗೆ ಸಂಚಿಕೆ ತಲುಪುವುದು ತಡವಾಗಬಹುದು. ೨೦೧೫ ಜನವರಿ ೧೫ರೊಳಗೆ ನಿರೀಕ್ಷಿಸಿ. ಓದುಗರು ಸಹಕರಿಸಬೇಕಾಗಿ ವಿನಂತಿ.

## ನಾಳಿನ ಚಿಂತೆಯಲ್ಲಿ




ನಾವೆಲ್ಲ ಬಹಳ ಬಿಜಿ
ಬೆಳಗೆದ್ದು ಜಿಮ್ಮಿಗೆ ದೌಡು
ಮಾಡು ಕಸರತ್ತು ಇಳಿಸಿಕೊ ತೂಕ
ಓಡು ಕಛೇರಿಗೆ ಡಬ್ಬಿ ಹಿಡಿದು
ದಿನವೆಲ್ಲ ಗಣಕಯಂತ್ರದ,
ಜಂಗಮ ವಾಣಿಯ ಗುಂಡಿಗಳ
ಅದುಮುವುದೆ ಬದುಕು
ಆಲ್ಫ, ಬೀಟ, ಗ್ಯಾಮ
ಡಾಲರ್, ಪೌಂಡ್, ರೂಪಾಯಿಗಳ
ಲೆಕ್ಕಾಚಾರದಲ್ಲಿ ತಲೆಬಿಸಿ
ಜೋಮು ಹಿಡಿದ ಕೈಕಾಲುಗಳು
ಮುಂಜಾನೆ ಅವಸರವಿತ್ತು
ಸರಿಯಾಗಿ ತಿನ್ನಲಾಗಲಿಲ್ಲ
ಮಧ್ಯಾಹ್ನ ಕೆಲಸದ ಗಡಿಬಿಡಿ
ಸಂಜೆ ಟ್ರ್ಯಾಫಿಕ್ ಜ್ಯಾಮ್‌ನ ಮಧ್ಯೆ
ಗುಡುಗುಡುಸುತ್ತ ಗಾಡಿಯನು
ಗೂಡ ಸೇರುವ ತವಕ
ಕದವ ತೆರೆಯಲು ಹೆಂಡತಿಯಿಲ್ಲ
ಆಕೆಯಿನ್ನೂ ಮನೆಗೆ ಮರಳಿಲ್ಲ
ಸಪ್ಪೆ ಮುಖ ಹೊತ್ತ ಮಗು
ಹೋಂವರ್ಕ್ ಮಾಡುವುದರಲ್ಲಿ ಬಿಜಿ
ಮೂವರಿಗೂ ಬಿಡುವಾದಾಗ
ಘಂಟೆ ಹೊಡೆದಿದೆ ಹತ್ತು
ಈಗಿನ್ನೇನು ಹೊರಗೆ ಸುತ್ತಾಡುವುದು !
ತೆಗೆ ಹೊರಗೆ ಮತ್ತೆ ಲ್ಯಾಪ್‌ಟಾಪ್
ಮಾತಾಡು ಬಂಧುಬಾಂಧವರೊಡನೆ
ಫೇಸ್ ಬುಕ್ಕು, ವಾಟ್ಸಪ್‌ನಲ್ಲಿ
ನೋಡು ಅವರ ಮುಖಗಳ
ಅವರ ಭಾವಚಿತ್ರಗಳಲ್ಲಿ
“ಎಂದಾದರೊಮ್ಮೆ ಬಿಡುವಾದಾಗ ಸಿಕ್ಕೋಣ”
ಎಂದು ಆಕಳಿಸುತ್ತ ,
ಕಂಬಳಿಯ ಹೊದ್ದು ಬೆಚ್ಚಗೆ ಮಲಗಿದರೂ
ನಿದ್ದೆ ಹತ್ತುವುದಿಲ್ಲ ಕಣ್ಣಳಿಗೆ
ಏಕೆಂದರೆ ನಾವು ಬಹಳ ಬಿಜಿ
ನಾಳೆಯ ಯೋಚನೆಯಲ್ಲಿ.



**ಸರೋಜ ಕೃಷ್ಣಮೂರ್ತಿ**
ಫ್ಲ್ಯಾಟ್ ನಂ. ಸಿ–೧೧, ‘ಸಿಲಿಕಾನ್ ಸ್ಪ್ಲೆಂಡರ್’ ೨ನೆಯ ಮುಖ್ಯರಸ್ತೆ
ರಾಮಾಂಜನೇಯ ನಗರ ಚಿಕ್ಕಲ್ಲಸಂದ್ರ, ಬೆಂಗಳೂರು – ೫೬೦ ೦೬೧

ಈ ತಿಂಗಳು (೩ನೇ ಪುಟದಿಂದ)

ಹಿಡಿದಿದ್ದ ಪಂಡಿತ ಜವಹರಲಾಲ್ ನೆಹರೂ ಮತ್ತು ಇಂದಿರಾ ಗಾಂಧಿಯ ವ್ಯಕ್ತಿತ್ವಕ್ಕೆ ಧಕ್ಕೆ ತರುವಂಥ ದಾಳಿ ನಡೆಯುತ್ತಿದ್ದರೂ ಉತ್ತರ ನೀಡಲಾಗದೆ ಇರುವ ಸ್ಥಿತಿ ಕಾಂಗ್ರೆಸ್ಸಿನದಾಗಿದೆ. ಸರ್ದಾರ್ ಪಟೇಲರನ್ನು ಎತ್ತಿಕಟ್ಟುವ ಕೆಲಸವನ್ನು ಭಾಜಪ ಮುಂದುವರಿಸಿದೆ. ವಿರೋಧ ಪಕ್ಷದ ನಾಯಕತ್ವಕ್ಕಾಗಿ ನಡೆಸಿದ ಪ್ರಯತ್ನ ವಿಫಲಗೊಂಡು ಕೈ ಸುಟ್ಟುಕೊಂಡ ಮೇಲೆ ಕಾಂಗ್ರೆಸ್ ಈಗ ಬ್ರಿಟನ್ನಿನ ಮಾದರಿಯಲ್ಲಿ ಸರಕಾರದ ವಿವಿಧ ಶಾಖೆಗಳನ್ನು ತರಾಟೆಗೆ ತೆಗೆದುಕೊಳ್ಳಲು 'ನೆರಳಿನ ಸಂಪುಟ' ರಚಿಸಿಕೊಂಡಿದೆ. ಇದು ಎಷ್ಟರಮಟ್ಟಿಗೆ ಫಲಕಾರಿಯಾದೀತೋ ಹೇಳಲಾಗದು. ಸಂಘಟನೆಯೇ ಮುರಿದು ಬಿದ್ದಿರುವಾಗ ಏನು ತಾನೆ ಮಾಡಲು ಸಾಧ್ಯವಾದೀತು. ಸಂಘಪರಿವಾರದ ನಾಯಕರುಗಳು ಮಾತ್ರ ಅವಕಾಶ ಸಿಕ್ಕಿದಾಗಲೆಲ್ಲ ಕಾಂಗ್ರೆಸ್ಸಿನ ಪೂರ್ವ ಚರಿತ್ರೆಯನ್ನು ಕೆದಕಿ ಅವಹೇಳನ ಮಾಡುತ್ತಿದ್ದಾರೆ. ಕಾಂಗ್ರೆಸ್ಸಿನಿಂದ ಅದಕ್ಕೆ ಪ್ರತಿಕ್ರಿಯೆಯೇ ಇಲ್ಲವಾಗಿದೆ. ಒಂದೊಂದಾಗಿ ನೆಹರೂ ಯುಗದ ಸಂಸ್ಥೆಗಳನ್ನೆಲ್ಲ ಮೋದಿ ಸರಕಾರ ಕಿತ್ತೊಗೆಯುತ್ತಿದೆ. ನೆಹರೂ ೧೨೫ನೇ ಜನ್ಮದಿನಾಚರಣೆ ವೈಖರಿಯನ್ನು ನೋಡಿದ್ದಾಯಿತು ಈಗ ತಾನೆ. ಮುಂದೆ ಇನ್ನೂ ಏನು ಕಾದಿದೆಯೋ.

* * *

ಕಾಂಗ್ರೆಸ್ಸಿನ ದೌರ್ಬಲ್ಯದ ಪರಿಣಾಮ ಸಿದ್ದರಾಮಯ್ಯ ಸರಕಾರದ ಮೇಲೂ ಆಗಿರುವುದು ಅನಿವಾರ್ಯ. ಹೈಕಮಾಂಡ್ ಎನ್ನುವುದು ಮಂಕಾಗಿರುವುದರಿಂದ ಎಲ್ಲವೂ ಮುಂದೆ ಹೋಗುತ್ತಿದೆ. ಅಧಿಕಾರ ವಹಿಸಿಕೊಂಡು ಒಂದೂವರೆ ವರ್ಷದ ಮೇಲಾದರೂ ಇನ್ನೂ ಕೂಡ ನಿಗಮ ಮಂಡಳಿಗಳಿಗೆ ನೇಮಕ ಮಾಡಲು ಸರಕಾರಕ್ಕೆ ಸಾಧ್ಯವಾಗಿಲ್ಲ. ಹಾಗೆಯೇ ಸಂಪುಟದ ವಿಸ್ತರಣೆ ಪ್ರಕ್ರಿಯೆ ಕೂಡ ನೆನೆಗುದಿಗೆ ಬಿದ್ದಿದೆ. ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆ ಕಾಪಾಡುವುದರಲ್ಲಿ ಸರಕಾರದ ಕಾರ್ಯವೈಖರಿ ಸಮಂಜಸವಾಗಿಲ್ಲ. ಕರ್ನಾಟಕಕ್ಕೆ 'ರೇಪ್ ರಾಜ್ಯ' ಎಂದೇ ಹೆಸರು ಬಂದಿದೆ. ದಿನನಿತ್ಯ ಪತ್ರಿಕೆ ಹಾಳೆ ತಿರುವಿದರೆ, ಟೆಲಿವಿಷನ್ ಸುದ್ದಿ ಆಲಿಸಿದರೆ ಕಾಣುವುದು, ಕೇಳುವುದು ಅತ್ಯಾಚಾರ ಪ್ರಕರಣದ ವರದಿಗಳೇ. ಒಂದು ರೀತಿಯಲ್ಲಿ ಸಿದ್ದರಾಮಯ್ಯ ನೇತೃತ್ವದ ಸರಕಾರ ಹಿಂದೆ ಮುಂದೆ ಏನೂ ದಾರಿ ತೋರದೆ ನಿಷ್ಕ್ರಿಯಗೊಂಡಿದೆ ಎಂದೇ ಹೇಳಬೇಕು. ಚುನಾವಣೆಗಳ ಕಾಲದಲ್ಲಿ ನೀಡಿದ್ದ ಆಶ್ವಾಸನೆಗಳನ್ನು ಪೂರೈಸುವುದು ಕನಸೇ ಸರಿ. ಈ ಮಧ್ಯೆ ಸಚಿವರುಗಳ ಮೇಲೆ ಆರೋಪಗಳು ಬರುತ್ತಲೇ ಇವೆ. ಗೃಹ ಸಚಿವ ಜಾರ್ಜ್ ಕಾರ್ಯವೈಖರಿ ಬಯಲಾಗಿದೆ. ಕಳಂಕಿತ ಸಚಿವ ಶಿವಕುಮಾರ್ ಮೇಲೆ ಭ್ರಷ್ಟಾಚಾರದ ಆರೋಪಗಳು ಹೆಚ್ಚುತ್ತಲೇ ಇವೆ. ಇದುವರೆಗೆ ಶುದ್ಧ ಹಸ್ತ ಎನಿಸಿಕೊಂಡಿದ್ದ ಸಚಿವ ದಿನೇಶ ಗುಂಡೂರಾವ್ ಮೇಲೆ ಈಗ ಭೂಕಬಳಿಕೆ ಆರೋಪ ಬಂದಿದೆ. ಭಾಜಪದವರು ಸರಕಾರದ ವೈಫಲ್ಯಗಳನ್ನು ಉಪಯೋಗಿಸಿಕೊಂಡು ರಾಜ್ಯಾದ್ಯಂತ ಚಳವಳಿ ನಡೆಸಲು ಸಿದ್ಧತೆ ನಡೆಸಿದ್ದಾರೆ. ಮಾಜಿ ಸಚಿವ ಈಶ್ವರಪ್ಪನಂಥವರು ನಾಲಿಗೆ ಹರಿಯಬಿಟ್ಟು ಬಾಯಿಗೆ ಬಂದ ಹಾಗೆ ಮಾತನಾಡಿದರೂ ಕಾಂಗ್ರೆಸ್ಸಿನಿಂದ ಬಲವಾದ ಪ್ರತಿಕ್ರಿಯೆ ಬರಲಿಲ್ಲ. ಭೂಕಬಳಿಕೆ ಆರೋಪಗಳು ದಿನೇ ದಿನೇ ಹೆಚ್ಚುತ್ತಿವೆಯೇ ಹೊರತು ಕಮ್ಮಿ ಏನಾಗುತ್ತಿಲ್ಲ. ಬೆಂಗಳೂರು ನಗರದಲ್ಲಿ ೩೪,೧೧೧ ಎಕರೆ ಸರಕಾರಿ ಭೂಮಿ ಒತ್ತುವರಿಯಾಗಿದೆ ಎಂದು ಏಳು ವರ್ಷಗಳ ಹಿಂದೆಯೇ ಎ. ಟಿ. ರಾಮಸ್ವಾಮಿ ನೇತೃತ್ವದ ಸದನ ಸಮಿತಿ ಸರಕಾರಕ್ಕೆ ವಿವರವಾದ ವರದಿ ಸಲ್ಲಿಸಿತ್ತು. ಅದರಲ್ಲಿ ಹಲವು ಪ್ರಭಾವಿ ಆರೋಪಿಗಳ ಹೆಸರುಗಳನ್ನು ಬಹಿರಂಗ ಪಡಿಸಲಾಗಿತ್ತು. ಇದುವರೆಗೆ ಆ ವರದಿಯ ಮೇಲೆ ಸರಕಾರ ಸೂಕ್ತವಾದ ಕ್ರಮ ಕೈಗೊಂಡಿಲ್ಲ. ನೂರಾರು ಕೋಟಿ ಒತ್ತುವರಿ ಪ್ರದೇಶವನ್ನು ವಶಪಡಿಸಿಕೊಳ್ಳಲಾಗಿದೆ ಎಂದು ವರದಿಗಳೇನೋ ಪ್ರಕಟವಾಗುತ್ತವೆ. ಅವೆಲ್ಲ ಏನಾದವು ಎಂಬುದು ಮಾತ್ರ ತಿಳಿಯದು. ಮತ್ತೆ ಭೂಕಬಳಿಕೆದಾರರ ಮೇಲೆ ಏನು ಕ್ರಮ ಕೈಗೊಳ್ಳಲಾಗಿದೆ ಎಂಬುದರ ಮಾಹಿತಿಯೂ ಇಲ್ಲ. ಅಂತೂ ಸಿದ್ದರಾಮಯ್ಯ ಸರಕಾರ ನಿರೀಕ್ಷಿತವಾದ ಮುನ್ನಡೆಯನ್ನೇನೂ ಸಾಧಿಸಿಲ್ಲ. ಅವರ ಅಧಿಕಾರ ಇನ್ನೆಷ್ಟು ದಿನ ಮುಂದುವರಿಯುವುದು ಎನ್ನುವುದನ್ನು ಪರಮೇಶ್ವರನೇ ಬಲ್ಲ.

* * *

ಮಾನ್ಯ ಪ್ರಧಾನ ಮಂತ್ರಿಗಳು ತಮ್ಮ ಭಾಷಣಗಳ ಸುರಿಮಳೆಯ ನಡುವೆ ಒಮ್ಮೆ ಪ್ರಾಚೀನ ಭಾರತದ ಅನನ್ಯ ಹೆಗ್ಗಳಿಕೆಗಳ ಬಗ್ಗೆ ಮಾತನಾಡಿದರು. ಯಥಾಪ್ರಕಾರ ಅವರ ಕೇಳುಗರು ಮತ್ತು ಪ್ರಚಾರಕರು ಹ್ಲೂಗುಟ್ಟಿದರು. ದ್ರೋಣ ಮತ್ತು ಗಣಪತಿ ಜನನಗಳ ವೈಶಿಷ್ಟ್ಯವನ್ನು ಕುರಿತಾದದ್ದು ಆ ಮಾತು. ಕಡಿದ ತಲೆಯನ್ನು ದೇಹಕ್ಕೆ ಮತ್ತೆ ಅಂಟಿಸುವ ವೈದ್ಯಕೀಯ ನೈಪುಣ್ಯಕ್ಕೆ ಗಣಪತಿ ಸಾಕ್ಷಿಯೆಂದೂ, ಸ್ಟೆಮ್ ಸೆಲ್ ಸಂಶೋಧನೆಗೆ ದ್ರೋಣನು ದೃಷ್ಟಾಂತವೆಂದೂ ಅವರು ತಮ್ಮ ವಿದ್ವತ್ತು ಮತ್ತು ದೇಶಭಕ್ತಿಯನ್ನು ಪ್ರಕಟಿಸಿದರು. ಇದು ಅವರ ಹೊಸ ಕಾಣ್ಕೆಯಲ್ಲ. ಅವರಿಗೂ ಮುಂಚೆ ಅವರಂತಹ ಬೇರೆ "ವಿದ್ವಾಂಸರು" ಇವೇ ನಿದರ್ಶನಗಳನ್ನು ನೀಡಿ ಭಾವಪರವಶರಾಗುತ್ತಿದ್ದುದು ಅಪರೂಪವಲ್ಲ. ಈಗ ಪ್ರಧಾನಿಯವರು ಹೇಳಿದ್ದರಿಂದ ಅದು ಗಂಭೀರ ಚರ್ಚೆಗೆ ಯೋಗ್ಯವೆಂದು ಕೆಲವು ಮಾಧ್ಯಮಗಳು ಬಿಂಬಿಸಿದ್ದರಿಂದ ಕೆಲವು ವಿಜ್ಞಾನಿಗಳೂ ಸೇರಿದಂತೆ ಹಲವರು ಚರ್ಚೆಯಲ್ಲಿ ಪಾಲ್ಗೊಂಡಿದ್ದಾರೆ. ಪ್ರಧಾನಿಯೇ ಹೇಳಿದರೂ ಅದು ಚರ್ಚೆಗೆ ಗ್ರಾಸವಾಗಬೇಕಾಗಿಲ್ಲ. ಅಷ್ಟು ಹಳಸಿದ ಮತ್ತು ಶುದ್ಧ ಪುರಾವೆಯು ಸಾಧ್ಯವೇ ಇಲ್ಲದ ಅನೈತಿಹಾಸಿಕ ತಿಳಿವಳಿಕೆ ಅದು. ಆದರೆ ಟೀವಿ ಮತ್ತು ಪತ್ರಿಕೆಗಳಲ್ಲಿ ಅಭಿಪ್ರಾಯಗಳು ಹೇರಳವಾಗಿ ವ್ಯಕ್ತವಾಗಿವೆ. ತಮಾಷೆಯ ವಿಷಯವೆಂದರೆ ದ್ರೋಣ ಮತ್ತು ಗಣಪತಿಯನ್ನು ಬಿಟ್ಟು ಬೇರೊಂದು ನಿದರ್ಶನ ನೀಡಲು ಸಾಧ್ಯವಾಗಿಲ್ಲ. ಒಂದು ಐತಿಹ್ಯದ ಸೃಷ್ಟಿಯಾದ ನಂತರ ಅದನ್ನೇ ಹೇಳುತ್ತಿರುವುದು ರೂಢಿಯೇ ವಿನಾ ಮತ್ತೊಂದು ಅಂಥದೇ ಐತಿಹ್ಯವನ್ನು ಸೃಷ್ಟಿಸುವುದು ನಮ್ಮ ಪುರಾಣಗಳ ಪದ್ಧತಿಯಲ್ಲ! ಒಬ್ಬಳೇ ಪೂತನಿ, ಒಬ್ಬನೇ ಜರಾಸಂಧ, ಒಬ್ಬನೇ ಶಿಶುಪಾಲ, ಒಬ್ಬನೇ ಕುಂಭಕರ್ಣ, ಹೀಗೆ. ವಾಸ್ತವ ಅಪೂರ್ವ ವೈಜ್ಞಾನಿಕ ಮತ್ತು ವೈದ್ಯಕೀಯ ಸಾಧನೆಗಳಿಗೆ ನಮ್ಮ ಪ್ರಾಚೀನ ಇತಿಹಾಸದಲ್ಲಿ ಕೊರತೆ ಇಲ್ಲ. ಅದೇಕೆ ಅವು ಮೋದಿಯಂಥವರಿಗೆ ಅಸಾಧಾರಣವೆನಿಸುವುದಿಲ್ಲವೋ ತಿಳಿಯದು. ಚರಕ–ಸುಶ್ರುತರಂತಹ ನಿಷ್ಣಾತರು ವಿಶ್ವದ ಬೇರೆಲ್ಲೂ ಅವರ ಸಮಕಾಲೀನರಾಗಿರಲಿಲ್ಲ. ಅವರು ಬೆಳೆಸಿದ ಪದ್ಧತಿ ಸಹ ಅಪ್ರತಿಮವಾದ್ದು. ಆದರೆ ಅವರಿಬ್ಬರೂ ದ್ರೋಣ–ಗಣಪತಿಗಳ ಪ್ರಸ್ತಾಪ ಏಕೆ ಮಾಡಲಿಲ್ಲವೆಂದು ಒಮ್ಮೆಯಾದರೂ ಮೋದಿ ಅಂಥವರು ಯೋಚಿಸಿದಂತೆ ಕಾಣುವುದಿಲ್ಲ. ಮೋದಿ ಸಿದ್ಧಾಂತವನ್ನು ಗಂಭೀರವಾಗಿ ಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂಬುದಕ್ಕೆ ಅದೊಂದೇ ಪುರಾವೆ ಸಾಕು. ನೈಜ ವಿಜ್ಞಾನಿಗಳು ಇಂಥವನ್ನು ಚರ್ಚಿಸಿ ಕಾಲಹರಣ ಮಾಡಬೇಕಾಗಿಲ್ಲವೆಂಬ ಭಾವನೆ ಏಕೆ ಸಹಜವೆಂದರೆ ವಿಜ್ಞಾನ, ಇತಿಹಾಸ ಮತ್ತು ಪುರಾಣ ಎಲ್ಲವೂ ಒಂದೇ ಶಿಸ್ತಿನ ಭಾಗಗಳಲ್ಲ. ವಿಜ್ಞಾನ ಮತ್ತು ಇತಿಹಾಸಗಳ ಪರಿಧಿಗೆ ಸೇರಿದುವೇನೋ ಎಂದೆನಿಸುವ ವಿಷಯಗಳು ಮತ್ತು ಘಟನೆಗಳು ಪುರಾಣಗಳಲ್ಲಿ ಬೇಕಾದಷ್ಟಿವೆ. ಮಾನವನ ಮನಸ್ಸಿನ ಹರಹಿನ ಸೂಚನೆ ಅದು. ಕಲ್ಪನೆ ಮತ್ತು ಕನಸುಗಳಿಲ್ಲದೆ ಮಾನವನ ಜೀವನ ಬರಡಾಗಿ ಬಿಡುವ ಸಾಧ್ಯತೆ ಇರುತ್ತದೆ. ನಾರದನೇಕೆ ಗಗನ ಸಂಚಾರಿ ? ಹಾಗೆ ಸಂಚರಿಸಲು ಸಾಧ್ಯವಾದರೆ ಎಷ್ಟು ಸೊಗಸಾಗಿರುತ್ತದೆ ಎನಿಸುವುದಿಲ್ಲವೆ ? ಹಾಗೆಂದು ಪ್ರಾಚೀನ ಭಾರತದಲ್ಲಿ ವ್ಯಕ್ತಿಯೊಬ್ಬ ತಂಬೂರಿ ಹಿಡಿದು ಆಕಾಶದಲ್ಲೆಲ್ಲಾ ಬೇಕೆಂದಹಾಗೆ ವಿಹರಿಸಲು ಸಮರ್ಥನಿರುತ್ತಿದ್ದನೆಂದು ಅರ್ಥವಲ್ಲ. ಖ್ಯಾತ ಕಲಾವಿದ ಜಾಮಿನಿ ರಾಯ್ ಹೇಳುತ್ತಿದ್ದರು, "ನಮ್ಮ ಹನುಮಂತ ಎಷ್ಟು ಅದ್ಭುತ, ಬೇಕೆನಿಸಿದಾಗ ಬೃಹತ್ತಾಗಿ ಬೆಳೆದು ಬಿಡುತ್ತಾನೆ, ಅಷ್ಟೇ ಸುಲಭವಾಗಿ ಒಂದು ಕಣದಷ್ಟು ಚಿಕ್ಕದಾಗಿ ಬಿಡುತ್ತಾನೆ," ಎಂದು. ಪುರಾಣಗಳ 'ಫ್ಯಾಂಟಸಿ' ಅದು. ಅದನ್ನು ವಾಸ್ತವ, ಇತಿಹಾಸ, ವಿಜ್ಞಾನ, ಎಂದೆಲ್ಲಾ ವ್ಯಾಖ್ಯಾನಿಸುವುದು ಬಾಲಿಶತನ.

* * *

ಮಹಾರಾಷ್ಟ್ರದ ಮಾಜಿ ಮುಖ್ಯಮಂತ್ರಿ ಪೃಥ್ವೀರಾಜ ಚವಾಣ್ ಈಚಿನ ಶಾಸನಸಭಾ ಚುನಾವಣೆಯ ನಂತರ ಹೇಳಿದ್ದುದು ಇದು : "ಆದರ್ಶ ಹೌಸಿಂಗ್ ಸೊಸೈಟಿ ಬಾಬ್ತು ಕಾಂಗ್ರೆಸ್ ಮಂತ್ರಿಗಳು ಪ್ರಶ್ನಾರ್ಹ ತೀರ್ಮಾನ ಕೈಗೊಂಡಿದ್ದುದು ನಿಜ. ತನಿಖೆ ಇನ್ನೂ ಮುಂದುವರಿದಿದ್ದರೆ ಇಬ್ಬರು ಸಚಿವರು ಖಂಡಿತವಾಗಿಯೂ ಜೈಲಿಗೆ ಹೋಗಬೇಕಾಗಿ ಬರುತ್ತಿತ್ತು. ಆದ್ದರಿಂದ ನಾನೇ ತನಿಖೆಯನ್ನು ನಿಲ್ಲಿಸುವ ಏರ್ಪಾಟು ಮಾಡಿದೆ." ಅಧಿಕಾರ ಕಳೆದುಕೊಂಡಾದ ಮೇಲಾದರೂ ಒಂದು ಸತ್ಯ ನುಡಿದಿದ್ದು ಚವಾಣರ ಘನತೆಯೋ, ಬುದ್ಧಿವಂತಿಕೆಯೋ ಅಥವಾ ಕಿತಾಪತಿಯೋ ನಾವೇ ತೀರ್ಮಾನಿಸಿಕೊಳ್ಳಬೇಕು. ಈಗಿನ ಶಾಸನಸಭೆಯಲ್ಲಿ ಸಂವಿಧಾನ ಕ್ರಮವನ್ನು ಪಕ್ಕಕ್ಕೆ ತಳ್ಳಿ ಮುಖ್ಯಮಂತ್ರಿಯಾಗಿ ಫಡ್ನವೀಸ್ ಬಹುಮತ ಸಾಬೀತು ಮಾಡಿದ್ದಾರೆ. ಅವರಾದರೂ

ಜೈಲಿಗೆ ಹೋಗಬೇಕಾಗಿದ್ದ ಮಂತ್ರಿಗಳನ್ನು ಜೈಲಿಗೆ ಕಳಿಸುತ್ತಾರೋ ಅಥವಾ ಆದರ್ಶ ಹಗರಣದಲ್ಲಿ ತಮ್ಮವರದೂ ಪಾಲಿದೆ ಎಂದೇನಾದರೂ ಕಡತವನ್ನು ಮುಚ್ಚಿಡುತ್ತಾರೋ ಕಾದು ನೋಡಬೇಕು. ಚವಾಣ್ ಮತ್ತು ಫಡ್ನವೀಸ್ ಒಂದೇ ದೋಸೆಯ ಎರಡು ಮುಖಗಳು : ಎರಡು ಕಡೆಯೂ ತೂತುಗಳಿವೆ !

✶ ✶ ✶

ಡಾ॥ ಮನಮೋಹನ ಸಿಂಗ್ ಸರ್ಕಾರದ ಆರ್ಥಿಕ ನೀತಿಗಳನ್ನು ಅರುಣ್ ಜೇಟ್ಲಿ ಗಂಭೀರವಾಗಿ ಎಂದೂ ವಿರೋಧಿಸಿರಲಿಲ್ಲ. ಅವರಿಬ್ಬರೂ ಒಂದೇ ಕುಟುಂಬದ ದಾಯಾದಿಗಳು ಎಂದು ತಿಳಿದದ್ದೇ. ಈಗ ಜೇಟ್ಲಿ ಹೇಳುತ್ತಾರೆ, "ಆರ್ಥಿಕತೆಯು ಉತ್ತಮ ಸ್ತರಗಳಿಗೇರಲು ಸಮಯ ಹಿಡಿಯುತ್ತದೆ, ಕಪ್ಪು ಹಣವನ್ನು ವಿದೇಶಿ ಬ್ಯಾಂಕುಗಳಲ್ಲಿಟ್ಟಿರುವವರ ಹೆಸರುಗಳನ್ನು ಬಹಿರಂಗ ಗೊಳಿಸಲು ತೊಡಕುಗಳಿವೆ," ಎಂದು. ಒಬ್ಬ ಹಿರಿಯ ಪಾರ್ಲಿಮೆಂಟ್ ಸದಸ್ಯರಾಗಿ ಈ ಮಹಾಶಯರಿಗೆ ಇದು ಸಿಂಗ್ ಸರ್ಕಾರವಿದ್ದಾಗ ತಿಳಿದಿರಲಿಲ್ಲವೆ ? ಅಂದು ಅಬ್ಬರಿಸಿ, ಇಂದು ಬಾಲ ಅಲ್ಲಾಡಿಸುವುದು ಯಾವ ಪ್ರಾಣಿಯ ಸಹಜ ಸ್ವಭಾವವೋ ತಿಳಿಯದು. ಒಟ್ಟಿನಲ್ಲಿ ಒಂದೇ ಆಳುವ ವರ್ಗದ ಎರಡು ಶಾಖೆಗಳು ಬಿಜೆಪಿ ಮತ್ತು ಕಾಂಗ್ರೆಸ್ ಎಂಬುದು ನಿಶ್ಚಿತ. ಒಬ್ಬರು ಹಿಂದುತ್ವದ ಘೋಷಣೆ ಕೊಡುತ್ತಾರೆ, ಇನ್ನೊಬ್ಬರು ಪ್ರಿಯಾಂಕ ಹಿಂದೆ ಅಡಗಿಕೊಳ್ಳಲು ಕಾತುರರಾಗಿದ್ದಾರೆ. ಪ್ರಿಯಾಂಕಳ ಅಂಕ (ಸಂಸ್ಕೃತದಲ್ಲಿ ಅದರರ್ಥ ಮುಖ ಎಂದು; ಕನ್ನಡದಲ್ಲಿ ಏನೇನು ಅರ್ಥಗಳಿವೆ ಎಂಬುದಕ್ಕೆ ಸಾಹಿತ್ಯ ಪರಿಷತ್ತಿನ 'ಕನ್ನಡ ರತ್ನಕೋಶ' ನೋಡಿ; ಅಲ್ಲಿ ಮೊಟ್ಟ ಮೊದಲ ಪದವೇ 'ಅಂಕ') ಪ್ರಿಯವಾಗಿರಬಹುದು, ಆದರೆ ಕೆಲವರಿಗೆ ಮಾತ್ರ. ಜನಕ್ಕೆ ಅವಳು ಪ್ರಿಯಳೆ, ಎಂಬುದು ಮುಖ್ಯವಾದ ಪ್ರಶ್ನೆ. ಜನದ ಬಳಿಗೆ ಹೋಗಿ ಅವರ ಪರವಾಗಿ ಚಿಂತನೆ ಮತ್ತು ಹೋರಾಟ ಕಾಂಗ್ರೆಸ್‌ಗೆ ಬೇಡ, ಅದು ಅಪಥ್ಯ. ಪ್ರಿಯಾಂಕ ಧಾವಿಸಿಬಂದರೆ ತನ್ನ ಪುರುಷಾರ್ಥ ನೆರವೇರುತ್ತದೆಂಬ ಮೂರ್ಖತನ ಕಾಂಗ್ರೆಸ್ ಪಕ್ಷದ್ದು. ಜನರ ಬಳಿಗೆ ಹೋಗಲು ಧೈರ್ಯವೇ ಇಲ್ಲವೇನೊ ! ಮಾನ್ಯ ಸಿದ್ದರಾಮಯ್ಯ ನವರಿಗೆ ಎರಡು ವರ್ಷದ ಆಳ್ವಿಕೆಯಲ್ಲಿ ನಿಗಮಗಳಿಗೆ ಅಧ್ಯಕ್ಷರನ್ನು ನೇಮಿಸಲು ಸಾಧ್ಯವಾಗಿಲ್ಲ. ಅದರರ್ಥ ಅವರಿಗೂ ಕಾಂಗ್ರೆಸ್ ಅಧ್ಯಕ್ಷರಿಗೂ ಭಿನ್ನಾಭಿಪ್ರಾಯ ಇದೆ ಎಂದಲ್ಲ, ಯಾವ ನಿಗಮದಲ್ಲಿ ಎಷ್ಟು ನುಂಗಬಹುದು ಎಂದು ಕಾದು ಕೂತಿರುವ ಸ್ಪರ್ಧಿಗಳು ಅಷ್ಟೊಂದು ಜನರಿದ್ದಾರೆ ! ಪಾಪ, ಜನರ ಸೇವೆಗೆ, ನಿಗಮಗಳ 'ಅಭಿವೃದ್ಧಿ'ಗೆ ಎಲ್ಲರೂ ಪರಮ ಆಕಾಂಕ್ಷಿಗಳೇ ! ಇಂಥವರು ಜನತೆಯ ಎದುರು ಹೇಗೆ ತಾನೆ ಮುಖ ತೋರಿಸಿಯಾರು !! ಯಡಿಯೂರಪ್ಪ ನವರ ಪಕ್ಷದ ನುಂಗಣ್ಣಗಳ ಹೆಸರುಗಳನ್ನು ಜನ ಈಗಾಗಲೇ ಮರೆತುಬಿಟ್ಟಿದ್ದಾರಾದ್ದರಿಂದ ಮುಂದಿನ "ಸದವಕಾಶ" (ಜನರ 'ಶೇವ್' ಮಾಡಲು !) ತಮ್ಮದೇ ಎಂದು ಯಡಿಯೂರಪ್ಪನವರು ಹುರುಪಿನಿಂದ ಓಡಾಡುತ್ತಿದ್ದಾರೆ.

✶ ✶ ✶

ನಮ್ಮ ದೇಶದ ಗೃಹಸಚಿವರಿಗೆ ವಿದೇಶಗಳಲ್ಲಿ ಏನು ಕೆಲಸ ? ಶ್ರೀಮತಿ. ಸುಷ್ಮಾ ಸ್ವರಾಜ್ ವಿದೇಶಾಂಗ ಮಂತ್ರಿ. ಆದರೆ ಅವರಿಗಿಂತಲೂ ಮುಂಚೆ ಆರೆಸ್ಸೆಸ್ ಧುರೀಣ ರಾಜನಾಥಸಿಂಗ್ ಇಸ್ರೇಲಿಗೆ ಹೋಗಿಬಂದಿದ್ದಾರೆ. ಜೆರುಸಲೆಮ್ಮಿನ ಗೋಡೆಗೆ ಸಂಪ್ರದಾಯದಂತೆ ಅವರೂ ತಲೆ ಚಚ್ಚಿಕೊಂಡರೆಂಬುದು ವರದಿಯಾಯಿತು, ಆದರೆ ಇಸ್ರೇಲಿನ ಪ್ರಧಾನಿ ಮತ್ತಿತರ ಸಚಿವರೊಡನೆ ಇವರು ಯಾವ ವಿಷಯಗಳನ್ನು ಚರ್ಚಿಸಿ ಹೊಸ ಪಾಠಗಳನ್ನು ಕಲಿತುಕೊಂಡು ಬಂದರೆಂದು ವರದಿಯಾಗಲಿಲ್ಲ. ಇಸ್ರೇಲಿನ ಗುಪ್ತದಳ ಮತ್ತು ಧಾಳಿ ನಡೆಸುವ ಉಗ್ರತೆ ಎರಡೂ ಪ್ರಸಿದ್ಧ. ಒಂದರ್ಥದಲ್ಲಿ ಇಸ್ರೇಲ್ ಒಂದು ಪ್ರಮುಖ ಭಯೋತ್ಪಾದಕ ರಾಷ್ಟ್ರ. ಆ ದೇಶದ ಸರ್ಕಾರಕ್ಕೆ ಮಾನವೀಯ ಗುಣಗಳು ಅತ್ಯಲ್ಪ. ದೊಡ್ಡಣ್ಣ ಅಮೆರಿಕಾ ತನ್ನನ್ನೆಂದೂ ಬಿಟ್ಟುಕೊಡಲಾರನೆಂಬ ಖಾತ್ರಿ ಇಸ್ರೇಲಿಗಿದೆ. ಇವುಗಳಲ್ಲಿ ಯಾವ ಲಕ್ಷಣವನ್ನು ನಮ್ಮದನ್ನಾಗಿಸಿಕೊಳ್ಳುವ ಉದ್ದೇಶ ಮಾನ್ಯ ರಾಜನಾಥ ಸಿಂಗ್ ಅವರಿಗಿದೆ ? ಬಹುಶಃ ಉತ್ತರವನ್ನು ಇಸ್ರೇಲ್‌ನ 'ಮೊಸ್ಸಾದ್' (ಗುಪ್ತದಳ) ಮಾತ್ರವೇ ನೀಡಬಹುದು. ಅದೇನು ಕಾಕತಾಳೀಯವೋ ಏನೋ, ಕೇಂದ್ರ ಗೃಹಸಚಿವರಾಗಿದ್ದಾಗ ಶ್ರೀ. ಎಲ್. ಕೆ. ಅದ್ವಾನಿ ಅವರೂ ಸಚಿವರಾದ ಕೆಲವೇ ದಿನಗಳಲ್ಲಿ ಇಸ್ರೇಲಿಗೆ ಭೇಟಿ ನೀಡಿದ್ದರು. 'ನಮ್ಮಿಬ್ಬರ ಶತ್ರುವೂ ಒಂದೇ ಮತದವನು' ಎಂಬ ಸೂತ್ರವು ಅವರನ್ನು ಜೊತೆಯಾಗಿಸಿಲ್ಲವೆಂದು ಭಾವಿಸೋಣ.

✶ ✶ ✶

ರಾಷ್ಟ್ರೀಯ ಸ್ವಯಂಸೇವಕ ಸಂಘದ ಸರಸಂಚಾಲಕ ಶ್ರೀ. ಮೋಹನ್ ಭಾಗವತ್ ಅವರು ದೂರದರ್ಶನ ಮತ್ತು ಆಕಾಶವಾಣಿಯಲ್ಲಿ ಭಾಷಣ ಮಾಡಲು ಅವಕಾಶ ಕಲ್ಪಿಸಿದ್ದು ಸರಿಯೋ ತಪ್ಪೋ ಎಂದು ಕೆಲವು ಪಕ್ಷಗಳು ಮತ್ತು ಮಾಧ್ಯಮಗಳು ಚರ್ಚಿಸುತ್ತಾ ಬಂದಿವೆ. ಆದರೆ ಖಂಡಿತಕ್ಕೂ ಅಕ್ರಮವಾದ ಒಂದು ಪದ್ಧತಿಯನ್ನು ಮಾನ್ಯ ಭಾಗವತ್ ಅವರ ಸಂಘವು ಜಾರಿಗೆ ತಂದಿದೆ. ಮೊದಲಿನಿಂದಲೂ ತಾನು "ಸಾಂಸ್ಕೃತಿಕ ಚಿಂತನೆ ಮತ್ತು ಚಟುವಟಿಕೆಗಳಿಗೆ ಮೀಸಲಾದ ಸಂಸ್ಥೆ" ಎಂದು ಹೆಡ್ಗೆವಾರ್ ಮತ್ತು ಗೋಲ್ವಾಲ್ಕರ್ ಅವರ ಕಾಲದಿಂದಲೂ ಹೇಳಿಕೊಂಡು ಬಂದಿದೆ. ಈಗ ಮುಖ್ಯಮಂತ್ರಿಗಳು, ಸಚಿವರು ಮತ್ತು ಪ್ರಧಾನಿ "ಸಾಂಸ್ಕೃತಿಕ" ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಆ ಪದವಿಗಳಿಗೇರಿದ್ದಾರೆ ಮತ್ತು ಶ್ರೀ. ರಾಮ ಮಾಧವ್ ಭಾಜಪದ ಪ್ರಧಾನ ಕಾರ್ಯದರ್ಶಿಯಾಗಿದ್ದಾರೆ. ಆ ಸ್ಥಾನಗಳಲ್ಲಿ ಇವರು ಯಾರೂ 'ರಾಜಕೀಯ' ಮಾಡುವುದಿಲ್ಲ ಎನ್ನುವು ದಾದರೆ ಏನು ಮಾಡಲು ಅವರಲ್ಲಿಗೆ ಹೋಗಿದ್ದಾರೆ ? ರಾಜಕೀಯ ಅಧಿಕಾರಕ್ಕೆ ಬರುವುದು ಅವರ ಹಕ್ಕು, ಮತದಾರರ ಪೈಕಿ ಶೇ. ೩೦ಕ್ಕೂ ಹೆಚ್ಚು ಮಂದಿ ಅವರನ್ನಾರಿಸಿದ್ದಾರೆ. ನಮ್ಮ ಅನರ್ಥಕ ಚುನಾವಣಾ ವ್ಯವಸ್ಥೆಯಲ್ಲಿ ಶೇ. ೩೦ರಷ್ಟು ಮತ ಬಂದರೂ ಅಧಿಕಾರಕ್ಕೆ ಬರಬಹುದು. ಆದ್ದರಿಂದಲೇ ಭಾಜಪ ಮತ್ತು ಕಾಂಗ್ರೆಸ್ ಅನುಪಾತ ಆಧಾರಿತ ಪ್ರಾತಿನಿಧ್ಯದ ಸೂತ್ರದ ಹೆಸರು ಕೇಳಿದರೆ ಬೆಚ್ಚಿಬೀಳುತ್ತಾರೆ. ಇರಲಿ, ಶ್ರೀ. ಮೋಹನ್ ಭಾಗವತ್ ಆರಂಭಿಸಿರುವ ಅಕ್ರಮವನ್ನು ಪರಿಶೀಲಿಸೋಣ. ಕೇಂದ್ರ ಸರ್ಕಾರದ ಹಲವು ವಿಭಾಗಗಳ ಮುಖ್ಯಸ್ಥರನ್ನು ಹಾಗೂ ಕೆಲವು ಸ್ವಾಯತ್ತ ಸಂಸ್ಥೆಗಳ ಅಧ್ಯಕ್ಷರನ್ನು ಭಾಗವತ್ ತಾವು ಆಯ್ದುಕೊಂಡ ಜಾಗದಲ್ಲಿ ಒಂದು ಸಭೆಗೆ ಬರಬೇಕೆಂದು ಸರ್ಕಾರಿ ವಲಯಗಳ ಮೂಲಕ ಆಹ್ವಾನಿಸಿದರು. ಸರ್ಕಾರಿ ಅಧಿಕಾರಿಗಳ ಬಳಿ ಕೆಲಸವಿದ್ದರೆ ಇವರೇ ಅವರ ಕಚೇರಿಗಳಿಗೆ ಹೋಗಬೇಕಿತ್ತು. ಇಂಥ ಕಡೆಗೆ ಬಂದು "ನನಗೆ ನಿಮ್ಮ ವಿಭಾಗದ ವಿಷಯಗಳನ್ನು ತಿಳಿಸು" ಎಂದು ಹೇಳುವ ಹಕ್ಕು ಶ್ರೀ. ಭಾಗವತ್ ಅವರಿಗಿಲ್ಲ. ಅಧಿಕಾರಿಗಳು ಅವರು ಕರೆದ ಕೂಡಲೆ ಸಭೆಗೆ ಓಡಬೇಕಾಗಿರಲಿಲ್ಲ. "ನಮ್ಮ ಕಚೇರಿಗೆ ಬಂದು ನಿಮ್ಮ ವಿಚಾರವೇನಿದೆಯೋ ಅದನ್ನು ಮಾತನಾಡಿ" ಎಂದು ಹೇಳಬೇಕಾಗಿತ್ತು. ಆದರೆ ವಿಶ್ವವಿದ್ಯಾ ನಿಲಯಗಳ ಧನಸಹಾಯ ಆಯೋಗದ ಅಧ್ಯಕ್ಷ ವೇದಪ್ರಕಾಶ್ ಸೇರಿದಂತೆ ಕೇಂದ್ರ ಸರ್ಕಾರದ ೪೦ ಉನ್ನತ ಮಟ್ಟದ ಅಧಿಕಾರಿಗಳು ಸಭೆಗೆ ಹೋದರು. ಭಾಗವತ್ ಏನು ಪ್ರಶ್ನೆ ಕೇಳಿದರು, ಇವರೆಲ್ಲಾ ಏನು ಹೇಳಿದರು, ಸರ್ಕಾರಿ ನೀತಿ ಹೇಗಿರಬೇಕೆಂದು ಸರಸಂಘ ಚಾಲಕರು ಹೇಳಿದರೆ, ಇದೆಲ್ಲಾ ನಮಗೆ ತಿಳಿದಿಲ್ಲ. ಅಂದರೆ, ಅದೊಂದು ಖಾಸಗಿ ಗುಪ್ತ ಸಭೆ. ವೇದಪ್ರಕಾಶ್ ಆ ತಿಮಿರ ಸಭೆಗೆ ಹೋದದ್ದು ನಿಯಮಬಾಹಿರವಾದ್ದು. ಸಂಜಯ ಗಾಂಧಿಯನ್ನು ಭೂಪೇಶ ಗುಪ್ತ ಅವರು "ಸಂವಿಧಾನೇತರ ಪ್ರಾಧಿಕಾರ" ಎಂದು ಕರೆದಿದ್ದರು. ಈಗ ಶ್ರೀ. ಮೋಹನ್ ಭಾಗವತ್ ಅವರು ಆ ಸ್ಥಾನವನ್ನು ಸೆಳೆದುಕೊಂಡಿದ್ದಾರೆ. ಅಂದು ಸಂಜಯ ಗಾಂಧಿಯನ್ನು ಟೀಕಿಸಿದ ಭಾಜಪದ ನಾಯಕರ ಬಾಯಿ ಕಟ್ಟಿಹೋಗಿದ್ದೇಕೆ ? ಇದು ಯೋಚಿಸಬೇಕಾದ ವಿಚಾರ. ಶ್ರೀ. ಭಾಗವತ್ ಅವರಿಗೆ ಭಾರತದ ಸಂವಿಧಾನವು ಅನ್ವಯವಾಗುವುದಿಲ್ಲವೆ ? ನಾಳೆ ನಾವು ವೇದಪ್ರಕಾಶ್ ಅವರನ್ನು 'ಹೊಸತು' ಕಚೇರಿಗೆ ಕರೆದು ಅವರ ಆಯೋಗದ ಕೆಲಸವನ್ನು ಕುರಿತು ವರದಿ ಕೊಡಿರೆಂದರೆ ಕೊಡುತ್ತಾರೆಯೆ ? ಇಲ್ಲವಾದರೆ ಶ್ರೀ. ಭಾಗವತ್ ಕರೆದ ಬಳಿಗೆ ಇವರೇಕೆ ಹೋದರು ? ಹಾಗೆ ಇವರೆಲ್ಲಾ ಹೋಗಿದ್ದರೆಂದು "ದಿ ಹಿಂದು" ಪತ್ರಿಕೆಯು ವರದಿ ಮಾಡಿತ್ತು. ವರದಿಯು ಸುಳ್ಳು ಸುದ್ದಿ ಕೊಟ್ಟಿದ್ದರೆ ಸರ್ಕಾರವಾಗಲಿ, ಶ್ರೀ. ಭಾಗವತ್ ಅವರಾಗಲಿ ಅದನ್ನು ತಿಳಿಸಬೇಕಿತ್ತು. ತಿಳಿಸಿಲ್ಲ ದಿರುವುದರ ಅರ್ಥ ಒಂದೇ : ನಮ್ಮ ದೇಶದಲ್ಲಿ ಈಗ ಸಂವಿಧಾನೇತರ ವಲಯವು ಸರ್ಕಾರದ ನೀತಿ ಮತ್ತು ಕೆಲಸಗಳಲ್ಲಿ ಮೂಗು ತೂರಿಸುತ್ತಿದೆ; ಅದು ಪ್ರಜಾಪ್ರಭುತ್ವ ವಿರೋಧಿ ಅಕ್ರಮ.

ನಮ್ಮ ರಾಜಕೀಯ ಶಾಸ್ತ್ರಜ್ಞರು, ಪಂಡಿತರು, ಮಾಧ್ಯಮ ವೀರರು ಏಕೆ ಕಣ್ಣು ಮುಚ್ಚಿಕೊಂಡಿದ್ದಾರೆ ? "ದಿ ಹಿಂದು" ವರದಿಯು ಸುಳ್ಳಾದರೆ 'ಹೊಸತು' ಶ್ರೀ. ಭಾಗವತರ ಕ್ಷಮೆ ಕೇಳಲು ಸಿದ್ಧವಿರುತ್ತದೆ. ವರದಿಯು ನಿಜವಾದರೆ ಜನತೆಯ ಪ್ರತಿಕ್ರಿಯೆ ಏನು ?

●




**ಇಂದಿನ ಶಿಕ್ಷಣ ಮಾರುಕಟ್ಟೆಯ ಸರಕೆ ?**

ವಿದ್ಯೆ ಒಂದು ತಪಸ್ಸು, ಅದಕ್ಕಾಗಿ ತ್ಯಾಗ, ಕಠಿಣ ಶ್ರಮ ಅತ್ಯಗತ್ಯ. ನಂತರ ಬೇರೆ ಬೇರೆ ದೇಶಗಳಿಂದ ಬಂದ ಅನೇಕರು ಅವರವರ ರೀತಿರಿವಾಜುಗಳನ್ನು ತಮ್ಮ ಭಾಷೆಗಳನ್ನು ಇಲ್ಲಿ ಪರಿಚಯಿಸಿ ಪ್ರೋತ್ಸಾಹಿಸಿದರು. ಇನ್ನು ಆಂಗ್ಲರ ಆಗಮನದಿಂದ ಪಾಶ್ಚಾತ್ಯ ರೀತಿಯ ಶಿಕ್ಷಣ ಜಾರಿಗೊಂಡಿತು.

ಸ್ವಾತಂತ್ರ್ಯದ ನಂತರದ ದಿನಗಳಲ್ಲಿ ಆದ್ಯತೆ ಕೊಡುವುದಾಗಿ ಸರ್ಕಾರಗಳು ಭರವಸೆ ನೀಡುತ್ತಾ ಬರುತ್ತಿವೆ ಹಾಗೂ ಅದಕ್ಕಾಗಿ ಪ್ರತಿ ವರ್ಷ ಹಣ ಮಂಜೂರಾಗುತ್ತಿದೆ. ಆದರೆ ಅದು ಎಷ್ಟರಮಟ್ಟಿಗೆ ಜನರಿಗೆ ಮುಟ್ಟುತ್ತಿದೆ ? ಅದರಿಂದ ನಿಜವಾಗಿ, ಉಳಿದಿದೆ ? ಸತ್ಯ ಸಂಗತಿ ಎಂದರೆ ಸರ್ಕಾರಿ ಶಾಲೆಗಳಿಗೆ ಒದಗಿಸುತ್ತಿರುವ ಶಿಕ್ಷಣ ಸಂಬಂಧ ಮೂಲಭೂತ ಸೌಕರ್ಯಗಳನ್ನು ನಿಷ್ಠೆಯಿಂದ ಜಾರಿಗೊಳಿಸಿದರೆ ಸರ್ಕಾರಿ ಶಾಲೆಗಳನ್ನು ಯಾವ ಖಾಸಗಿ ಶಾಲೆಗಳೂ ಮೀರಿಸುತ್ತವೆ. ಆದರೆ ಮಂಜಾರಾಗುತ್ತಿರುವ ಹಣದ ಸೋರಿಕೆ ಹಾಗೂ ಜಾಗತೀಕರಣ ನೀತಿಗೆ ಅನುಗುಣವಾಗಿ, ಶಿಕ್ಷಣವನ್ನು ಆಳುವ ಸರ್ಕಾರದಲ್ಲಿರುವವರು ತೀವ್ರವಾಗಿ ಬದಲಿಸುತ್ತಿದ್ದಾರೆ.

ಮುಂದಿನ ತಲೆಮಾರುಗಳನ್ನು, ನಾಗರಿಕತೆಯನ್ನು, ಸಂಸ್ಕೃತಿಯನ್ನು ಪೋಷಿಸಬೇಕಾದ ಶಿಕ್ಷಣ ಎಂಥ ಪ್ರಮುಖ ಕ್ಷೇತ್ರವಲ್ಲವೇ ? ಆದರೆ ಇದರ ಬಗ್ಗೆ ಆಳುವ ವರ್ಗಗಳು ಅಧ್ಯಯನ ನಡೆಸುವಲ್ಲಿ ಸೋತಿವೆ. ಇದರ ಪರಿಣಾಮ ರಾಜ್ಯದ ಎಷ್ಟೋ ಹಳ್ಳಿಗಳ ಶಾಲೆಗಳಲ್ಲಿ ಶಿಕ್ಷಕರಿಲ್ಲ. ಸರಿಯಾದ ಕಟ್ಟಡಗಳಿಲ್ಲ. ಇದರಿಂದಾಗಿ ಸರ್ಕಾರಿ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಗಣನೀಯವಾಗಿ ಇಳಿಯುತ್ತಿದೆ. ಈ ಪರಿಸ್ಥಿತಿಯನ್ನು ಸರಿಪಡಿಸುವ ಬದಲು ಇದನ್ನೇ ನೆಪ ಮಾಡಿಕೊಂಡು ಸರ್ಕಾರ ಹಲವು ಸರ್ಕಾರಿ ಶಾಲೆಗಳನ್ನು ಮುಚ್ಚುವ ಯೋಚನೆಯಲ್ಲಿದೆ ಹಾಗೂ ನೂರಾರು ಕೋಟಿ ವೆಚ್ಚದಲ್ಲಿ ಕಂಪ್ಯೂಟರ್ ಅಳವಡಿಕೆಯ ಯೋಜನೆಯನ್ನು ಜಾರಿಗೊಳಿಸಿದೆ. ಶಿಕ್ಷಣವು ಸರಕಾಗುತ್ತಿದೆ. 'ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು' ಎಂಬಂತಿದೆ ಸರ್ಕಾರದ ನೀತಿ. ಇನ್ನೊಂದೆಡೆ ಡೊನೇಷನ್ – ದುಬಾರಿ ಶುಲ್ಕ ಆಧಾರಿತ ಖಾಸಗಿ ಶಾಲೆಗಳು ನಾಯಿಕೊಡೆಗಳಂತೆ ಬೆಳೆಯುತ್ತಿದ್ದು ಜನರ ಹಣವನ್ನು ಲೂಟಿ ಮಾಡುತ್ತಿವೆ, ಈ ಖಾಸಗಿ ಸಂಸ್ಥೆಗಳು ಸಾಮಾನ್ಯ ಜನರನ್ನು ಹಿಂಡಿ ಹಿಪ್ಪೆಗೊಳಿಸುತ್ತಿವೆ. ದುಡಿಮೆಯಲ್ಲಿ ಮುಕ್ಕಾಲು ಭಾಗ ಮಕ್ಕಳು ಶಿಕ್ಷಣಕ್ಕೆ ವಿನಿಯೋಗಿಸುವ ಸ್ಥಿತಿ ಬಂದೊದಗಿದೆ. ಇದರಿಂದಾಗಿ ಮಧ್ಯಮ ಹಾಗೂ ಕೆಳಮಧ್ಯಮ ವರ್ಗದ ಜನರ ಸ್ಥಿತಿ ಏನಾಗಬೇಕು ?

ಶಿಕ್ಷಣವು ಮೂಲಭೂತ ಹಕ್ಕು ಎಂದು ಸಂವಿಧಾನದಲ್ಲಿ ಸೇರಿಸಿರುವ ಸರಕಾರ ಇದರ ಬಗ್ಗೆ ಯಾವ ಕಾಳಜಿಯನ್ನೂ ತೋರಿಸದೆ ಮಲತಾಯಿ ಧೋರಣೆಯನ್ನು ತೋರಿಸುತ್ತಿರುವುದು ನಿಜಕ್ಕೂ ಒಂದು ವಿಪರ್ಯಾಸ, ಇಂದಿನ ಮಾರುಕಟ್ಟೆಯ ಹಿತಾಸಕ್ತಿಗಳಿಗೆ ಹೊಂದುವಂತೆ ಶಿಕ್ಷಣವನ್ನು ಬದಲಾಯಿಸಲಾಗುತ್ತಿದೆ. ಶಿಕ್ಷಣ ಕ್ಷೇತ್ರವನ್ನು ಮಾರುಕಟ್ಟೆಯನ್ನಾಗಿಸಿ ಕೈಗಾರಿಕಾ ಉದ್ಯಮಿಗಳು ಹಾಗೂ ರಾಜಕಾರಣಿಗಳು ಬಂಡವಾಳ ಹೂಡಲು ಅವಕಾಶ ನೀಡಲಾಗುತ್ತಿದೆ.

'ಶಿಕ್ಷಣ ಮೂಲಭೂತ ಹಕ್ಕು' ಎಂಬುದನ್ನು ನಿಜವಾಗಿ ಜಾರಿಗೊಳಿಸಿದಾಗ ಮಾತ್ರ ಪ್ರಪಂಚದ ದೊಡ್ಡ ಪ್ರಜಾಪ್ರಭುತ್ವದ ದೇಶವಾಗಿರುವ ನಮ್ಮ ಭಾರತದ ಎಳೆಯ ತಲೆಮಾರಿನವರಿಗೆ ಉತ್ತಮ ಭವಿಷ್ಯವನ್ನು ರೂಪಿಸಲು ಸಾಧ್ಯ.

*ಶಂಕರಘಟ್ಟ* **ಮಹಾಂತೇಶದುರ್ಗ ಎಚ್. ಇ.**




**ಫುಕುಷಿಮಾ ಅಣು ದುರಂತದಿಂದ ಇನ್ನೂ ಕಲಿಯದ ಪಾಠಗಳು**

ಪ್ರಧಾನಿ ನರೇಂದ್ರ ಮೋದಿಯ ಇತ್ತೀಚಿನ ಜಪಾನ್ ಭೇಟಿ ಮತ್ತು ಆಸ್ಟ್ರೇಲಿಯ ಪ್ರಧಾನಿ ಟೋನಿ ಅಬೋಟ್‌ರ ಭಾರತ ಭೇಟಿಯು ನಮ್ಮ ದೇಶದ ಆತಂಕಗಳನ್ನು ದ್ವಿಗುಣಗೊಳಿಸಿದೆ. ಕಾರಣ, ಈ ಎರಡು ಭೇಟಿಯ ಅಜೆಂಡಾ ಅಣು ಒಪ್ಪಂದವಾಗಿತ್ತು. ಭಾರತದ ಸಿವಿಲ್ ಅಗತ್ಯತೆಗಳಿಗೆ ಬೇಕಾದ ಅಣುಸ್ಥಾವರಗಳ ನಿರ್ಮಾಣಕ್ಕಾಗಿ ಸಹಕಾರ ಒಪ್ಪಂದಗಳಿಗೆ ಸಹಿಯಾಗಿದೆ. ಜಪಾನ್‌ನಿಂದ ತಂತ್ರಜ್ಞಾನ. ಆಸ್ಟ್ರೇಲಿಯಾದಿಂದ ಯುರೇನಿಯಂ !

ಆಸ್ಟ್ರೇಲಿಯಾ ಪ್ರಧಾನಿಯ ಭಾರತ ಭೇಟಿ ಸಂದರ್ಭದಲ್ಲಿ ನಡೆದ ಭಾರತ–ಆಸ್ಟ್ರೇಲಿಯಾ ಯುರೇನಿಯಂ ವ್ಯಾಪಾರ ಒಪ್ಪಂದದ ವಿರುದ್ಧ ಭಾರತದಲ್ಲಿ ನಡೆದ ಪ್ರತಿಭಟನೆಗಳಿಗೆ ಸಹಮತ ಸೂಚಿಸಿ ಆಸ್ಟ್ರೇಲಿಯಾದ ಅಣು ವಿರೋಧಿ ಸಂಘಟನೆಗಳು ಸಹಮತ ವ್ಯಕ್ತಗೊಳಿಸಿವೆ.

ಭಾರತದ ೧೯ ಅಣುಸ್ಥಾವರಗಳ ನೌಕರರಲ್ಲಿ ಕಳೆದ ೨೦ ವರ್ಷಗಳಲ್ಲಿ ಮರಣಹೊಂದಿದ್ದ ಶೇ. ೭೦ ರಷ್ಟು ಮಂದಿಗೆ ಅರ್ಬುದ ಕಾಯಿಲೆ ಇತ್ತು ಎಂಬ ಬೆಚ್ಚಿ ಬೀಳಿಸುವಂತಹ ಸುದ್ದಿ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆ ಪ್ರಕಟಿಸಿತ್ತು. ಮಾಹಿತಿ ಹಕ್ಕು ಅಧಿನಿಯಮದಡಿ ಸಾಮಾಜಿಕ ಕಾರ್ಯಕರ್ತ ಚೇತನ್ ಕೋಠಾರಿಗೆ ದೊರೆತ ದಾಖಲೆಯಲ್ಲಿ ಇತ್ತು. ಭಾರತದಲ್ಲಿ ಯುರೇನಿಯಂ ಗಣಿಗಾರಿಕೆ ನಡೆಯುವ ಜಾರ್ಖಂಡಿನ ಜದುಗೂಡಾದಲ್ಲಿ ಅಣುವಿಕಿರಣದಿಂದ ಅಲ್ಲಿನ ಗ್ರಾಮೀಣ ಜನತೆ ಮಾರಕ ಕಾಯಿಲೆಗಳಿಗೆ ತುತ್ತಾಗಿದ್ದಾರೆ ಎಂದು ಅಧ್ಯಯನಗಳಿಂದ ತಿಳಿದಿದೆ. ಪೊಖ್ರಾನಿನಲ್ಲಿ ಮೊದಲನೆಯ ಅಣುಬಾಂಬ್ ಪ್ರಯೋಗ ನಡೆದು ೪೨ ವರ್ಷ ಕಳೆದರೂ ಅಲ್ಲಿ ಸುತ್ತಮುತ್ತ ಜನರಲ್ಲಿ ಅರ್ಬುದ ಮರಣಗಳು ನಿರಂತರವಾಗಿ ವರದಿಯಾಗುತ್ತಲೇ ಇವೆ.

ಹಿರೋಷಿಮಾ, ನಾಗಸಾಕಿ, ಚೆರ್ನೋಬಿಲ್, ತ್ರೀಮೈಲ್ ಐಲಂಡ್, ಫುಕುಷಿಮಾ, ಜದುಗೂಡಾ, ಪೊಖ್ರಾನ್ ಇಂತಹ ಉದಾಹರಣೆಗಳು ಬೇಕಾದಷ್ಟಿವೆ. ಆದರೆ, ಸಿವಿಲ್ ಅಗತ್ಯಗಳಿಗೆಂದು ನೆಪ ಹೇಳಿ ಭಾರತವು ಹೊಸ ಒಪ್ಪಂದಕ್ಕೆ ಕೈ ಹಾಕುತ್ತಲೇ ಇದೆ. ಅಮೆರಿಕ, ಫ್ರಾನ್ಸ್‌ನಂತಹ ರಾಷ್ಟ್ರಗಳು ಹೊಸ ಅಣುಸ್ಥಾವರಗಳ ನಿರ್ಮಾಣವನ್ನು ಸ್ಥಗಿತಗೊಳಿಸಿವೆ. ಅಲ್ಲಿ ಉಳಿದಿರುವ ಅಣುತ್ಯಾಜ್ಯಗಳನ್ನು ತಂತ್ರಜ್ಞಾನದ ಹೆಸರಿನಲ್ಲಿ ಭಾರತದಂತಹ ರಾಷ್ಟ್ರಗಳಿಗೆ ಮಾರಾಟ ಮಾಡಲಾಗುತ್ತಿದೆ. ಅಣುತಂತ್ರಜ್ಞಾನದ ಭಕ್ತರಾದ ನಮ್ಮ ದೇಶದ ನಾಯಕರು ಅಭಿವೃದ್ಧಿಯ ನೆಪದಲ್ಲಿ ಅದನ್ನು ಕೈಚಾಚಿ ಬಾಚಿಕೊಳ್ಳುತ್ತಿದ್ದಾರೆ.

ಆಸ್ಟ್ರೇಲಿಯಾದ ಮಿರಾರ್ ಬುಡಕಟ್ಟುಗಳಲ್ಲಿ ಯುರೇನಿಯಂ ಬಗ್ಗೆ ಒಂದು ಗಾದೆ ಇದೆ. ಅದರ ಸಾರ ಹೀಗಿದೆ : "ವಿಷಸರ್ಪವನ್ನು ಹೊರತೆಗೆಯಬೇಡಿ. ಅದು ಎಲ್ಲವನ್ನೂ ನುಂಗಿಹಾಕುತ್ತದೆ. ಅದು ಭೂಮಿಯ ಒಳಗೆ ಇರಲಿ." ಯುರೇನಿಯಂ ಗಣಿಗಾರಿಕೆಯಿಂದ ಅಲ್ಲಿನ ಆದಿವಾಸಿ ಜನತೆ ತತ್ತರಿಸಿ ಹೋಗಿದ್ದಾರೆ. ಜಾರ್ಖಂಡಿನ ಬುಡಕಟ್ಟುಗಳು ಮತ್ತು ಗ್ರಾಮೀಣರು ಎದುರಿಸುವ ಅದೇ ಸಮಸ್ಯೆಗಳನ್ನು ಆಸ್ಟ್ರೇಲಿಯಾದ ಬುಡಕಟ್ಟು ಜನರೂ ಎದುರಿಸುತ್ತಿದ್ದಾರೆ. ಕರ್ನಾಟಕದ ಯಾದಗಿರಿ ಜಿಲ್ಲೆಯ ಗೋಗಿ ಗ್ರಾಮದಲ್ಲಿ ಯುರೇನಿಯಂ ಗಣಿಗಾರಿಕೆ ಪ್ರಾರಂಭವಾಗಿದೆ. ಅಲ್ಲಿನ ಜನರಲ್ಲಿ ಹಲವು ರೀತಿಯ ಕಾಯಿಲೆಗಳು ಪ್ರತ್ಯಕ್ಷವಾಗಿರುವ ವರದಿಗಳು ಇವೆ. ಗಣಿಗಾರಿಕೆ ವಿರುದ್ಧ ಮಾಜಿ ಸಚಿವ ರಾಜೂಗೌಡ ಅವರ ನೇತೃತ್ವದಲ್ಲಿ ಗುಲ್ಬರ್ಗಾದಲ್ಲಿ ಪ್ರತಿಭಟನೆಗಳು ನಡೆದವು.

ದುರಂತವೇನೆಂದರೆ, ಅಣುಸ್ಥಾವರಗಳು ಮತ್ತು ಯುರೇನಿಯಂ ಗಣಿಪ್ರದೇಶಗಳ ಸುತ್ತಮುತ್ತ ಬದುಕುವ ಜನಸಾಮಾನ್ಯರ ಆರೋಗ್ಯ ಸ್ಥಿತಿ ಬಗ್ಗೆ ಸರ್ಕಾರದ ಮಟ್ಟದಲ್ಲಿ ಯಾವುದೇ ಸಮೀಕ್ಷೆಗಳು ಇದುವರೆಗೆ ನಡೆದಿಲ್ಲ. ಪರಿಸರ ಸಂಘಟನೆಗಳು ನಡೆಸಿದ ಅಧ್ಯಯನಗಳಲ್ಲಿ ಬೆಚ್ಚಿಬೀಳಿಸುವಂತಹ ವಿವರಗಳು ಇವೆ.

ಮೈಸೂರು **ಪಿ. ಪಿ. ಬಾಬುರಾವ್**

ಅಕ್ಟೋಬರ್ ೨೦೧೪ರಲ್ಲಿ ಡಾ॥ ಜಿ. ರಾಮಕೃಷ್ಣ ಅವರ, 'ಒಗಟಾಗಿಯೇ ಉಳಿದ ಅನಂತಮೂರ್ತಿ' ತುಂಬಾ ಚೆನ್ನಾಗಿದೆ. ಅನಂತಮೂರ್ತಿಯವರ ಎಲ್ಲ

ಮುಖಗಳನ್ನೂ ಚೆನ್ನಾಗಿ ಪರಿಚಯಿಸಿದೆ. ಪ್ರೊ॥ ಚಂಪಾ ಅವರು 'ಬ್ರಾಹ್ಮಣ್ಯ ದಾಟದ ಅನಂತಮೂರ್ತಿ, ಕೋಮುವಾದಿಯಲ್ಲದ ಮನುವಾದಿ' ಎಂದು ಹೇಳಿದ್ದಾರೆ. ಅದೂ ಕೂಡ ಸೂಕ್ತವೆ. ಅವರೊಬ್ಬ ಕಟ್ಟಾ ಮನುವಾದಿಯಾಗಿದ್ದರು ಎನ್ನುವುದು ನನ್ನ ಖಚಿತ ಅಭಿಪ್ರಾಯ.

ರಾಣೇಬೆನ್ನೂರು **ಪ್ರೊ॥ ಎ. ಸಿ. ಹಿರೇಒಡೆಯರ**

✉ ಡಾ॥ ಜಿ. ರಾಮಕೃಷ್ಣರವರ ಈ ತಿಂಗಳು ಆಗಸ್ಟ್ ೨೦೧೪ರ ಲೇಖನಕ್ಕೆ ಪೂರಕವಾಗಿ ನನ್ನ ಈ ಪ್ರತಿಕ್ರಿಯೆ. ಈ ಹಿಂದೆ ನಮ್ಮ ರಾಜ್ಯದ ರಾಜ್ಯಪಾಲರಾಗಿದ್ದ ಶ್ರೀ ಎಚ್. ಆರ್. ಭಾರದ್ವಾಜರವರು ನಿವೃತ್ತರಾಗಿದ್ದಾರೆ. ಇಂತಹ ಭ್ರಷ್ಟ ರಾಜ್ಯಪಾಲರನ್ನು ನಮ್ಮ ರಾಜ್ಯ ಹಿಂದೆಂದೂ ನೋಡಿರಲಾರದು. ಈ ಭ್ರಷ್ಟ ರಾಜ್ಯಪಾಲರಿಗೆ ಮಾಧ್ಯಮಗಳ ಬೆಂಬಲ ಬಹಳ ಇತ್ತು. ಇಂಥಾ ಅನೀತಿಸಂಹಿತೆ ನೀತಿಬಾಹಿರ. ಈ ರಾಜ್ಯಪಾಲರ ಭ್ರಷ್ಟಾಚಾರ ನಮ್ಮ ಶಾಸನಸಭೆಯ ಸಭಾಧ್ಯಕ್ಷರಿಂದ ಹಿಡಿದು ರಾಜ್ಯದ ಮುಖ್ಯಮಂತ್ರಿ ಹಾಗೂ ಕಾರಕೂನರ ವರೆಗೆ ಜನಜನಿತವಾಗಿದೆ. ಭ್ರಷ್ಟತೆಯ ವಿಚಾರವಾಗಿ ಯಾರೂ ತುಟಿಬಿಚ್ಚುವುದಿಲ್ಲ. ಭಾರದ್ವಾಜರ ಪೂರ್ವೇತಿಹಾಸ ಬಲು ದೊಡ್ಡದು. ನಿಮ್ಮ ಲೇಖನದಲ್ಲಿ ಅವರ ಭ್ರಷ್ಟತೆಯನ್ನು ಪ್ರಸ್ತಾಪಿಸಿರುವುದು ಸುತ್ತ್ಯಾರ್ಹ.

ಬೆಂಗಳೂರು **ಕು. ರಾಮಸ್ವಾಮಿ**

 'ಹೊಸತು'ವಿನ ನವೆಂಬರ್–೧೪ರ ಸಂಚಿಕೆಯ ಮುಖಪುಟ ಚಿತ್ರ ನೋಡುತ್ತಲೇ ತಾಯಿ ಮಗಳೀರ್ವರ ಮನೋಭಾವ ನಮ್ಮೆಲ್ಲಾ ಹುಳುಕುಗಳನ್ನು ತೆರೆದು ತೋರಿಸುವ ಅದ್ಭುತ ಶಕ್ತಿದಾಯಕ ಎನ್ನಿಸಿತು. ಪ್ರೊ॥ ಕ. ವೆಂ. ರಾಜಗೋಪಾಲ ಕಣ್ಮರೆ ಎಂಬ ಬರಹ ಜನಪ್ರಿಯ ಪ್ರಾಧ್ಯಾಪಕರೊಬ್ಬರ ಪರಿಚಯ ನೀಡಿತು. ಬಿ. ಆರ್. ಕುಮಾರ್ ಎಂಬ ನೇಪಥ್ಯದಲ್ಲಿ ಯಾರ ಗಮನಕ್ಕೂ ಬಾರದೆ ಸೇವೆ ಸಲ್ಲಿಸುತ್ತಿದ್ದ ನಡುವಯಸ್ಸಿನ ತರುಣನ ಅಗಲಿಕೆ ಬೇಸರ ತಂದಿತು.

ಕಾಸರಗೋಡು **ಕೇರಿಕ್ಕಾಡು ವನಮಾಲ ಕೇಶವ ಭಟ್ಟ**

## ಮಡೇಸ್ನಾನವೂ ಸಂವಿಧಾನವೂ

ಹರ್ಯಾಣದ ಹಿಸ್ಸಾರ್ ಬಳಿಯ ಬರ್ವಾಲಾದಲ್ಲಿ ರಾಂಪಾಲನ ಸತ್‌ಲೋಕ ಆಶ್ರಮದಲ್ಲಿ ದುರ್ಲೋಕದ ದುಷ್ಟತನವೇ ತುಂಬಿದೆ. ಐದಾರು "ಭಕ್ತ"ರನ್ನು ಬಲಿಕೊಟ್ಟು ಈ ಸ್ವಾಮಿ ಎಂಬ ಕಟ್ಟಾ ಅಪರಾಧಿಯು ಕಡೆಗೂ ದಸ್ತಗಿರಿಯಾಗಿದ್ದಾನೆ. ಅವನ ಭಕ್ತರು ಭಾರತದ ಸಂವಿಧಾನವು "ಅಡ್ಡಿ ಪಡಿಸದ" ಒಂದು ಅಸಹ್ಯ ಆಚರಣೆಯನ್ನು ಇರಿಸಿಕೊಂಡಿದ್ದಾರೆ. ಅವನಿಗೆ ಹಾಲಿನಿಂದ ಸ್ನಾನ ಮಾಡಿಸಿ, ಆ ಹಾಲಿನಿಂದ ಖೀರು ತಯಾರಿಸಿ ಕುಡಿದು ಪಾವನರಾಗುತ್ತಾರೆ! ವಿದ್ಯಾವಂತರು ಮತ್ತು ಅವಿದ್ಯಾವಂತರು ಅಲ್ಲಿ ತಮ್ಮ ಘನತೆಯನ್ನು ಕಾಪಾಡಿಕೊಳ್ಳುವುದು ಹಾಗೆ. ಅಂತಹ ಅಸಹ್ಯ ಮೌಢ್ಯದಲ್ಲಿ ತೊಳಲುವುದು ಅವರ ಸಂವಿಧಾನಾತ್ಮಕ ಹಕ್ಕು. ಇಂತಹ ಘೋರ ಕತ್ತಲಿನಲ್ಲಿ ಆ ಜನರನ್ನು ಇರಿಸುವುದು ಇಂದಿನ ನಾರುವ ವ್ಯವಸ್ಥೆಗೆ ಅಗತ್ಯ. ಜನರ ಮನಸ್ಸುಗಳನ್ನು ದಾಸ್ಯಕ್ಕೆ ಒಗ್ಗಿಸುವುದು, ಅವರಲ್ಲಿ "ಸುಳ್ಳು ಪ್ರಜ್ಞೆ"ಯನ್ನು ಹುಟ್ಟುಹಾಕುವುದು, ಇವೆಲ್ಲಾ ಊಳಿಗಮಾನ್ಯ ದಬ್ಬಾಳಿಕೆಗೆ ಊರುಗೋಲುಗಳು. ಅಂತಹ ನೀಚ ಪದ್ಧತಿಯನ್ನು ರದ್ದುಗೊಳಿಸಬೇಕೆಂದು ಏನಾದರೂ ಕಾನೂನು ರೂಪಿಸಹೊರಟರೆ ನ್ಯಾಯಾಲಯವು ಸಂವಿಧಾನವನ್ನು ಮುಖಕ್ಕೆ ಬಡಿದು ಬಾಯಿ ಮುಚ್ಚಿಸುತ್ತದೆ. ಮಂಗಳಗ್ರಹಕ್ಕೆ ಲಗ್ಗೆಯಿಡುವ ದೇಶದ ಮನಸ್ಸುಗಳ ಆಧುನಿಕತೆ ಈ ಮಟ್ಟದ್ದು.

ರಾಂಪಾಲ್‌ಗಿರುವಷ್ಟು ಜನಬಲ ಕುಕ್ಕೆ ಸುಬ್ರಹ್ಮಣ್ಯನಿಗಿರಲಾರದು. ಆದರೆ ಮಡೆಸ್ನಾನಕ್ಕೆ "೫೦೦–೬೦೦ ವರ್ಷಗಳ ಸಂಪ್ರದಾಯವು" ಅದರ ಬೆನ್ನಿಗಿದೆ ಮತ್ತು ಆ ಸಂಪ್ರದಾಯವು ಸಂವಿಧಾನದ ಯಾವ ನಿಬಂಧನೆಗೂ ವಿರೋಧವಾದುದಲ್ಲ: ಹಾಗೆಂದು ಕರ್ನಾಟಕದ ಉಚ್ಚ ನ್ಯಾಯಾಲಯವು ಘನಂದಾರಿ ತೀರ್ಪು ನೀಡಿದೆ ಮತ್ತು ದೇಶದ ಬೌದ್ಧಿಕ ಸಂಸ್ಕೃತಿಯನ್ನು ೬೦೦ ವರ್ಷಗಳಷ್ಟು ಹಿಂದಕ್ಕೆ ದಬ್ಬಿದೆ – ಎಲ್ಲಾ ಮಡೆಸ್ನಾನದ ಸಂದರ್ಭದಲ್ಲಿ ಉಂಟಾಗಿರುವ ಬೆಳವಣಿಗೆ. ಆ "ಮಡ್ಡಿ" ಸ್ನಾನವು ನಮ್ಮ ದೇಶದ ಜನರ ಘನತೆಗೆ ಕುಂದುಂಟುಮಾಡುತ್ತದೆಯಾದ್ದರಿಂದ ಅದನ್ನು ನಿಷೇಧಿಸುವ ಕಾನೂನು ರಚಿಸಬೇಕೆಂದು ಆಗ್ರಹಿಸಿದರೆ "ಇದರಲ್ಲಿ ಸಾರ್ವಜನಿಕ ಹಿತಾಸಕ್ತಿ ಎಂಥದೂ ಇಲ್ಲ, ಇರುವುದೆಲ್ಲಾ ಪ್ರಚಾರಪ್ರಿಯರ ಹಿತಾಸಕ್ತಿ" ಎಂದು ನ್ಯಾಯಾಲಯವು ನ್ಯಾಯ ಕೇಳಿದವರನ್ನು ಜರಿದಿದೆ. ಕೊಳಕು ಆಚರಣೆಗಳಿಗೆ ದೀರ್ಘ ಇತಿಹಾಸವಿರುವುದರಿಂದ ಅವನ್ನು ಪ್ರಶ್ನಿಸಬಾರದು, ಅವುಗಳಲ್ಲಿ ತಾರತಮ್ಯದ ಸೂಚನೆಯೇನೂ ಇಲ್ಲ (ಏಕೆಂದರೆ ಪೇಜಾವರ ಸ್ವಾಮಿಯೂ ಬೇಕಾದರೆ ಹೋಗಿ ಕುಕ್ಕೆಯ ಮಹಾಸರ್ಪದ ಸಾನ್ನಿಧ್ಯದಲ್ಲಿ ಎಂಜಲೆಲೆಗಳ ಮೇಲೆ ಹೊರಳಾಡಿ ತನ್ನ ರೋಗವನ್ನು ಗುಣಪಡಿಸಿಕೊಳ್ಳಲು ನಿರ್ಬಂಧವನ್ನೇನೂ ಹೇರಿಲ್ಲ), ಸಂವಿಧಾನದ ಯಾವ ನಿಬಂಧನೆಯಲ್ಲೂ ಮಡೆಸ್ನಾನವನ್ನು ನಿಷೇಧಿಸಬೇಕೆಂಬ ದೃಷ್ಟಿಯಿಲ್ಲ, ಎಂದು ನ್ಯಾಯಾಲಯವು ತೀರ್ಪು ಕೊಟ್ಟಿದೆ. ಆ ಆಚರಣೆಯನ್ನು ತೊಡೆದುಹಾಕುವ ಅಪೇಕ್ಷೆ ಇದ್ದರೆ ಮಡೆಸ್ನಾನ ಮಾಡಿ "ಶುಭ್ರರೂ ಆರೋಗ್ಯವಂತರೂ" ಆಗುವ ಜನರ ಮನಸ್ಸನ್ನು ಬದಲಾಯಿಸುವ ಕ್ರಮ ಕೈಗೊಳ್ಳಬೇಕೆಂಬ ಮುಫ್ತಾದ ಸಲಹೆಯನ್ನೂ ನೀಡಲಾಗಿದೆ.

ಸಂವಿಧಾನವು ಅಸ್ಪೃಶ್ಯತೆಯನ್ನು ನಿಷೇಧಿಸಿರುವುದು ಈ ತತ್ವದ ಆಧಾರದಿಂದ ನೋಡಿದರೆ ಸಂವಿಧಾನ–ವಿರೋಧಿ ಕಾನೂನಾಗಿದೆ. ಏಕೆಂದರೆ ಅದು ಸಾವಿರಾರು ವರ್ಷಗಳಿಂದ ಜಾರಿಯಲ್ಲಿದೆ ಮತ್ತು ಯಾರು ಬೇಕಾದರೂ ತಾವು ಅಸ್ಪೃಶ್ಯರಂತೆ ನಡೆದುಕೊಳ್ಳುವುದು ಅಂಗೀಕಾರಾರ್ಹ. ಮಡಿವಂತರು ಒಂದು ರೀತಿಯಲ್ಲಿ ಅಸ್ಪೃಶ್ಯತೆಯನ್ನು ತಮ್ಮ ಮೇಲೆ ಹೇರಿಕೊಂಡಿರುತ್ತಾರೆ! ಹೀಗೆ "ಸನಾತನವಾದ ಧರ್ಮವನ್ನು" ಅಂತ್ಯಗೊಳಿಸಬೇಕೆಂದು ಆಗ್ರಹಿಸಿದ ಡಾ॥ ಅಂಬೇಡ್ಕರ್ ಅಸ್ಪೃಶ್ಯರ ಸಾಂಪ್ರದಾಯಿಕ ಹಕ್ಕನ್ನು ಕಸಿದುಕೊಂಡುಬಿಟ್ಟರು; ಸಂವಿಧಾನದ ಕರಡು ರಚನಾ ಸಮಿತಿಯ ಅಧ್ಯಕ್ಷರಾಗಿ ಅವರು ಸಂವಿಧಾನವು ಕೊಡಮಾಡುವ ಸ್ವಾತಂತ್ರ್ಯದ ವಿರುದ್ಧವಾಗಿ ಒಂದು ನಿಬಂಧನೆಯನ್ನು ಸೇರಿಸಿದ್ದು ಸಂವಿಧಾನದ ವಿರೋಧಿ ನೆಲೆಯಲ್ಲಿ ನಿಲ್ಲುತ್ತದೆ! ಕೆಲವು ವರ್ಷಗಳ ಹಿಂದೆ ಕರ್ನಾಟಕದ ಸರ್ಕಾರವು ಕಾನೂನೊಂದನ್ನು ಜಾರಿಗೊಳಿಸಿ "ಹಲವು ವರ್ಷಗಳಿಂದ ಮಾನ್ಯತೆ ಪಡೆದಿದ್ದ" ದೇವದಾಸಿ ಪದ್ಧತಿಯನ್ನು ರದ್ದುಗೊಳಿಸಿತು. ಅದೂ ಸಂವಿಧಾನ ವಿರೋಧಿ ಕಾನೂನೇ ಆಗಿರಬೇಕು!

ಮಡೇಸ್ನಾನವನ್ನು ಅಸಹ್ಯ ಆಚರಣೆ ಎನ್ನುವವರು ಹಾಗೆ "ಸ್ನಾನ" ಮಾಡುವ ನಾಗರಿಕರ ಮನಸ್ಸು ಬದಲಾಯಿಸಬೇಕೆಂದು ನ್ಯಾಯಾಲಯವು ಹೇಳಿದೆ. ಅಸ್ಪೃಶ್ಯತೆ ಮತ್ತು ದೇವದಾಸಿ ಪದ್ಧತಿಗಳನ್ನು ಕೊನೆಗೊಳಿಸಲು ಸಹ ನಾವು ಮನಸ್ಸು ಬದಲಾಯಿಸುವ ಕಾಯಕವನ್ನು ಮಾಡಬೇಕಾಗಿತ್ತು, ಕಾನೂನು ಮಾಡಬಾರದಿತ್ತು. ಇದೇ ಸೂತ್ರವನ್ನು ಕಳ್ಳತನ, ತೆರಿಗೆ ವಂಚನೆ, ಕೊಲೆ ಇತ್ಯಾದಿಗಳಿಗೂ ಅನ್ವಯಿಸಬೇಕೆಂಬುದನ್ನು ನಾಗರಿಕರು ಆಲೋಚಿಸಬೇಕು. ಅವಕ್ಕೂ ದೀರ್ಘ ಇತಿಹಾಸವಿದೆ, ಆ ಪದ್ಧತಿಯನ್ನು ಯಾರ ನಿರ್ಬಂಧದಿಂದಲೂ ಸದರಿ ಕಳ್ಳರು, ವಂಚಕರು ಮತ್ತು ಕೊಲೆಗಾರರು ಅನುಸರಿಸುತ್ತಿಲ್ಲ. ಅಂದರೆ, ಯಾವುದಕ್ಕೂ ಕಾನೂನಿನ ದಾರಿ ಹಿಡಿಯಬಾರದು; ಉಪದೇಶ ನೀಡಿ ಮನಸ್ಸುಗಳನ್ನು ಸ್ವಚ್ಛಗೊಳಿಸಬೇಕು.

ಅಂತಿಮವಾಗಿ, ಸಂವಿಧಾನವು ದೇಶದ ಪ್ರಜೆಗಳ ಘನತೆಯನ್ನು ಕಾಪಾಡಬೇಕೋ ಇಲ್ಲವೋ ಎಂಬುದು ಪ್ರಶ್ನೆ. ವೈಜ್ಞಾನಿಕ ಮನೋಭಾವವನ್ನು ಪ್ರಜೆಗಳಲ್ಲಿ ಬೆಳೆಸಬೇಕೆಂಬ ನಿರ್ದೇಶಕ ಸೂತ್ರವನ್ನು ನಾವು ಸಂವಿಧಾನದ ಒಂದು ಭಾಗವೆಂದು ಸ್ವೀಕರಿಸುತ್ತೇವೋ ಅಥವಾ ಅದಕ್ಕೆ ಬಾಹ್ಯವಾದ ಅಂಶವೆಂದು ಪರಿಗಣಿಸುತ್ತೇವೋ? ನ್ಯಾಯಾಲಯವು ಅಂತಿಮ ತೀರ್ಮಾನದ ಆಗರ, ಅದರ ತೀರ್ಮಾನಗಳು ಪ್ರಬುದ್ಧ ಮತ್ತು ಸಂವಿಧಾನದ ನೈಜ ಆಶಯಗಳ ಪ್ರತೀಕ. ಕಾನೂನಿನಿಂದ ಯಾವುದನ್ನೇ ಆಗಲಿ ನಿಯಂತ್ರಿಸುವುದು ಬೇಡ, ಮೋದಿಯವರ ಸ್ವಚ್ಛತಾ ಕಾರ್ಯಕ್ರಮದ ಜೊತೆಗೆ "ಮನಃಪರಿವರ್ತನಾ ಕಾರ್ಯಕ್ರಮ"ವನ್ನೂ ಸೇರಿಸಿಬಿಡೋಣ. ಬಳ್ಳಾರಿಯ ಜನಾರ್ದನ ರೆಡ್ಡಿ ಮುಂತಾದವರನ್ನು ಪರಪ್ಪನ ಅಗ್ರಹಾರದಿಂದ ಹೊರತಂದು ಹಿಸ್ಸಾರ್ ಬಳಿಯ ರಾಂಪಾಲನ ಆಶ್ರಮಕ್ಕೆ ಕಳಿಸಿಬಿಡೋಣ ಮತ್ತು ಅವರೆಲ್ಲರ ಮನಃಪರಿವರ್ತನೆಯ ಕ್ಷಣಕ್ಕಾಗಿ ಚಾತಕಪಕ್ಷಿಗಳಂತೆ ಅಂತರಿಕ್ಷದತ್ತ ಮುಖಮಾಡಿ ಮಲಗೋಣ, ಮೂಲತಃ ಮಡೆಸ್ನಾನಗಳಂತಹ ಆಚರಣೆಗಳನ್ನು ಹೇರಿದ್ದು ಯಾರು ಮತ್ತು ಏಕೆ ಎಂಬುದರ ವಿವೇಚನೆ ಮಾಡಿದರೆ ಅಜ್ಞಾನವನ್ನು ಬಂಡವಾಳ ಮಾಡಿಕೊಂಡು ಬಂದಿರುವ ವರ್ಗದ ಕುತ್ಸಿತ ಮನಸ್ಸುಗಳ ಅನಾವರಣವಾಗುತ್ತದೆ. ಆದರೆ ಅದು ನಮ್ಮ ಸಂವಿಧಾನದಲ್ಲಿ ದಾಖಲಾಗಿಲ್ಲವಲ್ಲ!

**– ಅರ್ಯಮನ್**



# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ



**ಜಿ. ರಾಮಕೃಷ್ಣ**

"ಸಾಹಿತ್ಯ ಮತ್ತು ಸತ್ಯ" ಎಂಬೊಂದು ಲೇಖನವನ್ನು ಪ್ರೊ|| ಎ. ಎನ್. ಮೂರ್ತಿರಾವ್ ಬರೆದಿದ್ದಾರೆ. ಸಾಂಸ್ಕೃತಿಕ ತ್ರೈಮಾಸಿಕ "ಆವಿಷ್ಕಾರ" ಅದನ್ನು ಈಚೆಗೆ ಮರುಮುದ್ರಣ ಮಾಡಿದೆ (ಸಂಪುಟ ೨, ಸಂಚಿಕೆ ೧). ಅಲ್ಲಿ ಬರುವ ಒಂದು ವಿಚಾರ ಹೀಗಿದೆ : ಮಾನವನಲ್ಲಿ "ವೈಭವದ ಬಯಕೆಯಿರುವಂತೆಯೇ ತನ್ನ ಶಕ್ತಿಗೆ ಮೀರಿದ ಸಾಹಸಗಳನ್ನು ಮಾಡಿ, ತಾನು ಹೋಗಲಾರದ ಸ್ಥಳಗಳಿಗೆ ಹೋಗಿ ಜಯಭೇರಿ ಹೊಡೆಯಬೇಕೆಂಬ ಆಸೆಯೂ ನೆಲೆಸಿದೆ. ಇಂಥ ಆಸೆ ಪ್ರಗತಿಗೆ ಅವಶ್ಯಕ. ನನ್ನನ್ನು ಗೆದ್ದು ನನ್ನ ರಹಸ್ಯವನ್ನು ಭೇದಿಸಬಲ್ಲೆಯ ? ಎಂದು ಈ ವಿಶಾಲ ವಿಶ್ವ ನಮಗೆ ಸವಾಲು ಹಾಕುತ್ತಿದೆ. ಸಮುದ್ರದ ಮಬ್ಬುಗತ್ತಲ ತಳ, ಹಿಮಾಲಯದ ಶಿಖರಗಳ ನಡುವೆ ಮಂಜುಮುಸುಕಿದ ಕಣಿವೆಗಳು, ನೀಹಾರಿಕೆಗಳ ನಡುವಿನ ನೀಲಿಯಾಳ - ಇವೆಲ್ಲದರ ಕರೆ ಬಾಧಿಸುತ್ತದೆ. ಹಾರಿಹೋಗಬೇಕು, ಅಲ್ಲಿಗೆ ! ಆದರೆ ಲಕ್ಷಗಟ್ಟಲೆ ವಯಸ್ಸು ಕಳೆದರೂ, ವಿಕಾಸ ಎಷ್ಟೇ ದೂರ ಸಾಗಿದ್ದರೂ, ಮಾನವ ಕುಲಕ್ಕೆ ರೆಕ್ಕೆ ಬರಲಿಲ್ಲ ! ಈಗಲೇನೋ ವಿಜ್ಞಾನ ನೆರವಿಗೆ ಬಂದಿದೆ. ಹಿಂದೆ ಪ್ರಕೃತ್ಯತೀತ ಶಕ್ತಿಗಳನ್ನೇ ನೆಚ್ಚಬೇಕಾಗಿತ್ತು." ವಿಜ್ಞಾನವೂ ವಿಕಾಸ ಹೊಂದುತ್ತಲೇ ಇದೆ. ನವಂಬರ್ ೨೦೧೪ರಲ್ಲಿ ಈಗ್ಗೆ ೧೫,೦೦೦ ವರ್ಷಗಳ ಹಿಂದೆ ಭೂಮಿಯಿಂದ ಕೋಟಿಗಟ್ಟಲೆ ಯೋಜನಗಳಾಚೆ ಇರುವ ಎಲ್ಲೋ ಸಂಭವಿಸಿದ್ದ ಮಹಾಸ್ಫೋಟವೊಂದನ್ನು ನೋಡಿ ವಿಜ್ಞಾನಿಗಳು ಪುಲಕಿತರಾದರಂತೆ. ಅಂದರೆ, ವಿಶ್ವದ ವಿಸ್ಮಯಕ್ಕೆ ಪಾರವಿಲ್ಲ. ಹಾಗೆಯೇ ಯೋಚನೆ ಮಾಡಿದರೆ ಈ ವಿಶ್ವ ಏಕಿದೆ, ಅದಿಲ್ಲದಿದ್ದರೆ ಇಲ್ಲೆಲ್ಲಾ ಏನಿರುತ್ತಿತ್ತು, ನಾವಿರದಿದ್ದರೆ ಇದನ್ನೆಲ್ಲಾ ನೋಡಿ ಅನುಭವಿಸಲು ಯಾರೂ ಇರುತ್ತಿರಲಿಲ್ಲವೇನೊ, ಎಂದೆಲ್ಲಾ ಭಾಸವಾಗುತ್ತದೆ. ಇದೆಲ್ಲಾ ಮೂಲತಃ ಉಂಟಾದದ್ದು ಹೇಗೆ ? ನಾವೇನೋ ಗೆಲಾಕ್ಸಿಗಳು, ಗ್ರಹಗಳ ನಿರ್ದಿಷ್ಟ ಚಲನೆ, ಕಪ್ಪುಗುಳಿಗಳು, ಎಂದು ಏನೇನೋ ಕೇಳುತ್ತಿರುತ್ತೇವೆ, ಅದರಲ್ಲಿ ಅತ್ಯಲ್ಪವನ್ನು ತಿಳಿಯುತ್ತೇವೆ. ಅಷ್ಟಾಗಿಯೂ ಅದ್ಭುತ ವಿಸ್ಮಯಗಳಿಗೆ ಪೂರ್ತಿ ವಿವರಣೆಯೇನೂ ದೊರೆಯುವಂತಿಲ್ಲ. ಆತ್ಮನ್-ಬ್ರಹ್ಮನ್-ಮಾಯೆ-ಮೋಕ್ಷ ಎಂಬುವನ್ನೆಲ್ಲಾ ನೂರರಿಂದ ಗುಣಿಸಿದರೂ ವಿಸ್ಮಯದ ಪರಿಧಿ ಕಿರಿದಾಗುವುದಿಲ್ಲ. ಹೀಗಿರುವಾಗ ಋಗ್ವೇದದ ಕವಿಗೆ ತಾನಿದ್ದ ವಿಶ್ವದ ಬಗೆಗಿನ ಕುತೂಹಲ ಮತ್ತು ಅಚ್ಚರಿ ಎಷ್ಟಿರಬೇಡ ಮತ್ತು ಹೇಗಿರಬೇಡ ! ನಾವು ಇಂದು ಕಂಡುಕೊಳ್ಳುತ್ತಿರುವಂತೆ ಅವನೂ ಅಂದು ಏನನ್ನೋ ಕಂಡುಕೊಂಡ, ಅಗಾಧ ಪ್ರಶ್ನೆಗೆ ಅದೇ ಉತ್ತರವಿರಬೇಕು ಎಂದು ಭಾವಿಸಿಕೊಂಡ. ವಿಶ್ವವು ಏಕೆ ಸೃಷ್ಟಿಯಾಯಿತೆಂಬ ಪ್ರಶ್ನೆಗಿಂತಲೂ, ಅದು ಹೇಗೆ ಸೃಷ್ಟಿಯಾಯಿತೆಂಬುದಕ್ಕೆ ಮಾನವ ಪರಿಪರಿಯಾಗಿ ಉತ್ತರಗಳನ್ನು ಪರಿಭಾವಿಸಿಕೊಂಡಿದ್ದಾನೆ. ಎಷ್ಟು ಮೆಟ್ಟಿಲೇರಿದರೂ ವಿಸ್ಮಯದ ಎಲ್ಲೆಯನ್ನು ತಲುಪಿದಂತಾಗುವುದಿಲ್ಲ. ಆರಂಭದ ಮೆಟ್ಟಿಲುಗಳನ್ನು ಹತ್ತಲು ಉಪಕ್ರಮಿಸಿದ ಋಗ್ವೇದದ ಕವಿ ವಿಶ್ವಸೃಷ್ಟಿಯನ್ನು ಕುರಿತಂತೆ ಪರಿಭಾವಿಸಿಕೊಂಡ ಕೆಲವು ಅಂಶಗಳನ್ನು ಪ್ರಸ್ತುತ ಹದಿನೆಂಟನೆಯ ಕಂತಿನಲ್ಲಿ ಪರಿಚಯಿಸಿಕೊಳ್ಳೋಣ. 'ಅಪೌರುಷೇಯ'ವೆನ್ನಲಾದ ವೇದವಾಗಲಿ, ಸ್ವತಃ ದೇವರೇ ಉಸಿರಿದ್ದೆನ್ನಲಾದ ಬೈಬಲ್, ಕುರ್-ಅನ್, ಮುಂತಾದ ಗ್ರಂಥಗಳಾಗಲಿ 'ಪರಮಸತ್ಯ'ವನ್ನು ತಿಳಿಸಿಕೊಟ್ಟಿವೆಯೆಂಬ ಐತಿಹ್ಯವನ್ನು ಮನಗಾಣುತ್ತಾ, ನಮ್ಮ ಇಂದಿನ ಸ್ಥಿತಿಯಲ್ಲಿ 'ಪರಮವಾಸ್ತವ'ವನ್ನು ನಾವಿನ್ನೂ ಅರಿತಿಲ್ಲವೆಂಬುದನ್ನು ಮರೆಯದಿರೋಣ.

ಶ್ರೇಷ್ಠ ವಿದ್ವಾಂಸ ಆರ್. ಜಿ. ಭಂಡಾರ್ಕರ್ ಅವರಿಗೆ ಋಗ್ವೇದದ ಬಗ್ಗೆ ಎಷ್ಟು ಅಪಾರ ಭಕ್ತಿ ಇದ್ದಿತೆಂದರೆ ನೂರು ವರ್ಷಗಳ ಹಿಂದೆ (೧೯೧೩) ಅವರು ಬರೆದ ವೈಷ್ಣವ, ಶೈವ, ಮತ್ತಿತರ ಮತಧರ್ಮಗಳನ್ನು ಕುರಿತಾದ ಉದ್ಗ್ರಂಥದಲ್ಲಿ, ನಂತರದ ಅನೇಕ ಮತಧರ್ಮಗಳು ಪ್ರತಿಪಾದಿಸಿದ 'ಭಕ್ತಿ'ಯ ಪರಿಕಲ್ಪನೆಯು ಋಗ್ವೇದದಲ್ಲಿ ಆಗಲೆ ಅಂಕುರಿಸಿತ್ತು ಎಂದಿದ್ದಾರೆ. ಅದೊಂದು ದುಬಾರಿ ಮಾತೆನಿಸುತ್ತದೆ. ಆದರೆ ಅವರ ಬೇರೊಂದು ಗ್ರಹಿಕೆಯು ಬಹಳ ಯಥಾರ್ಥವಾಗಿದೆ : "ವಿಶ್ವವನ್ನು ದೇವರ ಒಂದು ರೂಪವೆಂದು ತಿಳಿಯುವ ಪ್ರಕ್ರಿಯೆಯು ಋಗ್ವೇದದಷ್ಟು ಪ್ರಾಚೀನವಾದದ್ದು; ಋಗ್ವೇದದ ಪುರುಷ ಸೂಕ್ತವು (೧೦.೯೦) ಅದಕ್ಕೊಂದು ನಿದರ್ಶನ." ವಿಶ್ವವು ದೇವರ ಒಂದು ರೂಪವೆಂದಾಗ ದೇವರಿಗೆ ಬೇರೆಯೂ ರೂಪಗಳಿವೆಯೆ, ಹಾಗಿದ್ದರೆ ಅವು ಯಾವುವು, ಎಂಬ ಪ್ರಶ್ನೆ ಋಗ್ವೇದದ ಕವಿಯನ್ನು ಬಾಧಿಸಲಿಲ್ಲ. ದೇವತೆಗಳನ್ನು ಮಾನವ ರೂಪದಲ್ಲಿ ಕಲ್ಪಿಸಿಕೊಳ್ಳುವುದು ಪ್ರಪಂಚದ ಎಲ್ಲ ಸಂಸ್ಕೃತಿಗಳಲ್ಲೂ ಕಾಣಬರುವ ಸಂಗತಿ. ಚೀಣಾದ ತತ್ವಶಾಸ್ತ್ರ ಪರಂಪರೆಯಲ್ಲಿ ಅತಿ ಪ್ರಾಚೀನರನ್ನು ಹೆಚ್ಚು ಕಡಿಮೆ ದೇವರಂತೆಯೇ ಭಾವಿಸಿಕೊಂಡು, ಅವರಿಗೆ ಮಾನವರ ಅಂಗಾಂಗಗಳೇ ಇರುತ್ತಿದ್ದುವಾದರೂ ಅವು ಹೆಚ್ಚಿನ ಸಂಖ್ಯೆಯಲ್ಲಿ ಇರುತ್ತಿದ್ದುವೆಂದು ಹೇಳುವುದು ವಾಡಿಕೆಯಲ್ಲಿದೆ. ನಮಗೆ ಎದೆಯ ಮೇಲೆ ಎರಡು ಮೊಲೆತೊಟ್ಟುಗಳಿದ್ದರೆ ಅತಿ ಪ್ರಾಚೀನರಿಗೆ ನಾಲ್ಕು ಇರುತ್ತಿದ್ದುವೆಂಬುದು ಅಂತಹ ಒಂದು ಕಲ್ಪನೆ. ಅನೂಹ್ಯ ಪರಿಮಾಣದ್ದು ಎಂಬುದನ್ನು ಸೂಚಿಸಬೇಕಾದರೆ ಅವು ನೂರು, ಸಾವಿರ, ಆಗಬಹುದು. ವಿಶ್ವಕರ್ಮನು ಎಲ್ಲ ಭೂತವಸ್ತುಗಳನ್ನೂ ಸೃಷ್ಟಿಯಜ್ಞದಲ್ಲಿ ಹವಿಸ್ಸಾಗಿ ಅರ್ಪಿಸಿದ ನಂತರ ತನ್ನನ್ನೂ ಅರ್ಪಿಸಿಕೊಂಡನಂತೆ. ಅವನೇ ಆದಿ ಜನಕ. ಅವನ ಇಷ್ಟಾರ್ಥಗಳನ್ನೆಲ್ಲಾ ಪೂರೈಸಿಕೊಳ್ಳಲು ಅವನು ಮತ್ತೆ ಆ ಭೂತದ್ರವ್ಯಗಳನ್ನು ಸ್ವತಃ ಪ್ರವೇಶಿಸಿದ. ಮೊದಲಿನ ಭೂತದ್ರವ್ಯಗಳನ್ನು ಸೃಷ್ಟಿಸಿದ್ದುದು ಯಾರೆಂಬುದರ ವಿಚಾರವನ್ನು ಋಗ್ವೇದದ ಮಂತ್ರವು ಪ್ರಸ್ತಾಪಿಸಿಲ್ಲ. ಅದು ಮೂಲ ಮಾದರಿಯಾದ್ದರಿಂದ ಅದನ್ನು ಸೃಷ್ಟಿಸುವ ಪ್ರಮೇಯ ಇರಲಿಲ್ಲವೆಂಬ ವಿವರಣೆಯನ್ನು ನೀಡಲಾಗುತ್ತದೆ. ಛಾಂದೋಗ್ಯ ಉಪನಿಷತ್ತಿನಲ್ಲಿ (೬.೨.೧) ಹೇಳಿರುವಂತೆ ಮೊದಲಲ್ಲಿ 'ಸತ್' ಎಂಬುದೊಂದೇ ಇತ್ತು ; ಅದು ಬಹುವಾಗಬೇಕೆಂದು ಇಚ್ಛಿಸಿತು ಮತ್ತು ಆಯಿತು (ಸದೇವ ಸೋಮ್ಯ ಇದಮಗ್ರೇ ಆಸೀತ್ । ತದೈಕ್ಷತ ಬಹು ಸ್ಯಾಂ ಪ್ರಜಾಯೇಯ). ಅದರ ಸೂಚನೆಯೋ ಎಂಬಂತೆ ಋಗ್ವೇದದ ಒಂದು ಮಂತ್ರವಿದೆ

(೧೦.೮೧.೧: ...ಸ ಆಶಿಷಾ ದ್ರವಿಣಂ ಇಚ್ಛಮಾನಃ ಪ್ರಥಮಚ್ಛತ್ ಅವರಾನ್ ಆ ವಿವೇಶ). 'ಸತ್' ಎಂಬುದು ಆದಿಯಲ್ಲಿ ಇಲ್ಲದಿದ್ದರೆ ಅದು ಉಂಟಾಗುವುದಾದರೂ ಹೇಗೆ ? (ಕಥಂ ಅಸತಃ ಸತ್ ಜಾಯೇತ). ಈ ಪ್ರಶ್ನೆಯನ್ನೂ ಛಾಂದೋಗ್ಯ ಉಪನಿಷತ್ತು ಎತ್ತಿದೆ. ಅಂದರೆ, ಯಾರೋ ಮಹಾಪುರುಷನು ವಿಶ್ವವನ್ನು ಸೃಷ್ಟಿಸುವುದಿಲ್ಲ; ಅದು ಇದೆ, ಅದನ್ನು ಮಾರ್ಪಡಿಸ ಬಹುದು, ಅಷ್ಟೆ. ಋಗ್ವೇದದಲ್ಲಿ ವ್ಯಕ್ತವಾಗಿರುವ ಒಂದು ಅಭಿಪ್ರಾಯವಿದು; ಆದರೆ ಇದೊಂದೇ ಅಭಿಪ್ರಾಯವಲ್ಲ. ಬೇರೆ ಒಂದೆರಡನ್ನು ಮುಂದೆ ನೋಡೋಣ.

"ಭೂತದ್ರವ್ಯಗಳನ್ನು ಸ್ವತಃ ಪ್ರವೇಶಿಸಿದ" ಎಂದಾಗ ಆ ಭೂತದ್ರವ್ಯಗಳಿಗೆ ಸ್ಥಾನವಿರಬೇಕು; ಯಾವುದು ಆ ಸ್ಥಾನ ? ಅಲ್ಲದೆ, ಅವನ್ನು ಪ್ರವೇಶಿಸುವವನಿಗೆ ಆಲಂಬನ ವೊಂದಿರಬೇಕು; ಯಾವುದು ಆ ಆಲಂಬನೆ ? ಅದರ ಸ್ವರೂಪವೇನು ? ಅದೆಲ್ಲಾ ತಿಳಿಯದು, ಆದರೆ ವಿಶ್ವಕರ್ಮನು ಭೂಮಿ ಮತ್ತು ದ್ಯುಲೋಕಗಳನ್ನು ಅನಾವರಣಗೊಳಿಸಿದ (೨ : ಕಿಂ ಸ್ವಿತ್ ಆಸೀತ್ ಅಧಿಷ್ಠಾನಂ ಆರಂಭಣಂ ಕತಮತ್ ಸ್ವಿತ್ ಕಥಾ ಆಸೀತ್ । ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿ ದ್ಯಾಂ ಔರ್ಣೋತ್ ಮಹಿನಾ ವಿಶ್ವಚಕ್ಷಾಃ ॥). "ದೇವರು ಎಲ್ಲವನ್ನೂ ಸೃಷ್ಟಿಸಿದ (ಳು)" ಎಂಬುದರ ಬಗ್ಗೆ ಬರ್ನಾರ್ಡ್ ಶಾ ಒಂದು ಮೂಲಭೂತ ತಕರಾರನ್ನು ಎತ್ತುತ್ತಿದ್ದ : ಎಲ್ಲವನ್ನೂ ಸೃಷ್ಟಿಸುವಾಗ ಅವಳು (ನು) ಒಂದೆಡೆ ಇದ್ದಿರಬೇಕಲ್ಲ, ಅದನ್ನು ಸೃಷ್ಟಿಸಿದ್ದು ಯಾರು ? ಅದಕ್ಕೆ ಏನುತ್ತರ ಕೊಟ್ಟರೂ ಮರುಪ್ರಶ್ನೆಗಳು ಹುಟ್ಟಿಕೊಂಡು ವಾದದಲ್ಲಿ ಅನವಸ್ಥಾ ದೋಷವು ಅನಿವಾರ್ಯವಾಗುತ್ತದೆ.

ಋಗ್ವೇದದ ಕವಿಗೆ ತನ್ನ ವಿವರಣೆಯು ತೃಪ್ತಿಕರ ಎಂದು ತೋರಲಿಲ್ಲ. ಆದ್ದರಿಂದ ಮುಂದಿನ ಮಂತ್ರದಲ್ಲಿ ಒಂದು ಸಮಾಧಾನಕರ ಉತ್ತರವನ್ನು ಕೊಟ್ಟುಕೊಳ್ಳುತ್ತಾನೆ : ಆರ್. ಜಿ. ಭಂಡಾರ್ಕರ್ ಅವರ ನಿರೂಪಣೆಯು ಇದನ್ನು ಆಧರಿಸಿ ಬಂದದ್ದು. ಸೃಷ್ಟಿಕರ್ತನನ್ನು ಮಾನವ ತನ್ನ ರೂಪದಲ್ಲಿಯೇ ಕಲ್ಪಿಸಿಕೊಳ್ಳುತ್ತಾನೆ, ಆದರೆ ಅದಕ್ಕೆ ಅಗಾಧ ಪ್ರಮಾಣದ ಪರಿಮಾಣವನ್ನು ತುಂಬುತ್ತಾನೆ. ಮಂತ್ರದ ಇಂಗಿತವು ಹೀಗಿದೆ : ಒಬ್ಬನೇ ಆದ ಆ ಸೃಷ್ಟಿಕರ್ತ ದೇವನು ಭೂಮಿ ಮತ್ತು ದ್ಯುಲೋಕಗಳನ್ನು ಸೃಷ್ಟಿಸಿ ಅವನ್ನು ಅವುಗಳ ಸ್ಥಾನಗಳಿಗೆ ಬೆಸೆಯುತ್ತಾನೆ. ಅವನ ಬಾಹುಗಳಿಗೆ ಅಂತಹ ಶಕ್ತಿಯುಂಟು. ಅವನಿಗೆ ಸರ್ವತ್ರ ಕಣ್ಣುಗಳಿವೆ, ಸರ್ವತ್ರ ಮುಖ ಅಥವಾ ಬಾಯಿಗಳಿವೆ, ಸರ್ವತ್ರ ಬಾಹುಗಳು ಹಾಗೂ ಪಾದಗಳಿವೆ (೩ : ವಿಶ್ವತಃ ಚಕ್ಷುಃ ವಿಶ್ವತೋ ಮುಖಃ ವಿಶ್ವತಃ ಬಾಹುಃ ಉತ ವಿಶ್ವತಃ ಪಾತ್ । ಸಂ ಬಾಹುಭ್ಯಾಂ ಧಮತಿ ಸಂ ಪತತ್ರೈಃ ದ್ಯಾವಾಭೂಮೀ ಜನಯನ್ ದೇವಃ ॥). ಅವನ ಬಾಹುಗಳು ರೆಕ್ಕೆಗಳಿದ್ದಂತೆ, ಅವುಗಳಿಂದ ಭೂಮಿ ಮತ್ತು ದ್ಯುಲೋಕಗಳನ್ನು ಭದ್ರವಾಗಿ ಸ್ಥಾಪಿಸಿಬಿಡುತ್ತಾನೆ. ಕಣ್ಣು, ಮುಖ ಮತ್ತು ಪಾದಗಳು ಅವನಿಗೆ ಸರ್ವತ್ರ ಇವೆಯೆಂದು ನಾವು ಹೇಳಿದ್ದರೂ ಮಂತ್ರದಲ್ಲಿ ಅವೆಲ್ಲಾ ಏಕವಚನದಲ್ಲಿವೆ : ಎಲ್ಲ ಕಡೆಗಳಲ್ಲೂ ಕಣ್ಣಿದೆ, ಎಲ್ಲ ಕಡೆಗಳಲ್ಲೂ ಮುಖವಿದೆ, ಇತ್ಯಾದಿ. ಇಡೀ ಮಂತ್ರದ ಆಕಾಂಕ್ಷೆಯಲ್ಲಿ ವ್ಯತ್ಯಾಸವೇನೂ ಇಲ್ಲ. ಇದೇ ಮಂತ್ರವನ್ನು ಶ್ವೇತಾಶ್ವತರ ಉಪನಿಷತ್ತಿನಲ್ಲಿ (೩.೩) ಯಥಾವತ್ತಾಗಿ ಎತ್ತಿಹಾಕಿಕೊಳ್ಳಲಾಗಿದೆ.

ವಿಶ್ವಸೃಷ್ಟಿಗೆ ಅಗತ್ಯವಾದ ಅಗಾಧತೆಯು ದೇವನಲ್ಲಿ ಇರಬಹುದು, ಆದರೆ ಸೃಷ್ಟಿಕ್ರಿಯೆಗೆ ಮೂಲದ್ರವ್ಯವೂ ಅಗತ್ಯವಿದೆ. ಭೂಮಿ ಮತ್ತು ದ್ಯುಲೋಕಗಳ ಸೃಷ್ಟಿಗೆ ದ್ರವ್ಯಗಳೂ ಬೇಕು ಮತ್ತು ಅವನ್ನು ಉತ್ಪಾದಿಸುವ ಮೂಲದ್ರವ್ಯಗಳೂ ಬೇಕು. ಅವೆಲ್ಲಿಂದ ಬಂದುವು ? ಕವಿಗೆ ಇದೇಕೋ ಪರಿಹಾರವಿಲ್ಲದ ಗೋಜಲಾಗಿ ಗೋಚರಿಸುತ್ತದೆ; ಆದ್ದರಿಂದ ಅವನೆನ್ನುತ್ತಾನೆ : ಮನೀಷಿಗಳಾದ (ಅಥವಾ ತಿಳಿವಳಿಕೆಯುಳ್ಳ) ಮಾನ್ಯರೇ, ನೀವೇ ಅದನ್ನು ಆಲೋಚಿಸಿ ನೋಡಿ, ಎಂದು. ಕಿಂ ಸ್ವಿತ್ ವನಂ ಕಃ ಉ ಸಃ ವೃಕ್ಷಃ ಆಸ । ಮನೀಷಿಣೋ ಮನಸಾ ಪೃಚ್ಛತ ಇತ್ ಉ ತದ್ಯತ್ ಅಧ್ಯತಿಷ್ಠತ್ ಭುವನಾನಿ ಧಾರಯನ್ ॥ (೧೦.೮೧.೪) ಬಹುಶಃ ಕಡೆಗೂ ಉಳಿಯುವುದು ಅದೇ ಇರಬೇಕು, "ಆಲೋಚಿಸಿ ನೋಡಿ" ಎಂಬುದು. ಋಗ್ವೇದದಲ್ಲಿ ಇದೇ ಮಂತ್ರವು ಭಾಗಶಃ ಇನ್ನೊಮ್ಮೆ ಸಹ ಬಂದಿದೆ (೧೦.೩೧.೭). ಮುಂದಿನ ಮೂರು ಮಂತ್ರಗಳು ಯಜ್ಞದ ಆಚರಣೆಯಲ್ಲಿ ವಿಶ್ವಕರ್ಮನ ಸಹಯೋಗವನ್ನು ಅಪೇಕ್ಷಿಸುವ ರೂಪದಲ್ಲಿವೆ. ಮುಂದಿನ ಸೂಕ್ತವೂ (೮೨) ಸಹ ಇದೇ ಉದ್ದೇಶವನ್ನು ಪ್ರಕಟಿಸಿದೆ. ವಿಶ್ವಸೃಷ್ಟಿಯನ್ನು ಯಜ್ಞದ ಕ್ರಿಯೆಯೊಂದಿಗೆ ಜೋಡಿಸುವುದು ಋಗ್ವೇದದ ಒಂದು ಪದ್ಧತಿ. ಹೀಗೆ ಮಾಡುವ ಸೂಕ್ತಗಳು ಋಗ್ವೇದದ ಅಂತಿಮ ಕಾಲಘಟ್ಟದವು. ಆ ವೇಳೆಗೆ ಗಣಗಳು ಛಿದ್ರಗೊಳ್ಳುವ ಹಂತವನ್ನು ಮುಟ್ಟಿದ್ದು, ಪಶುಸಂಗೋಪನೆಯ ಜೊತೆಗೆ ಕೃಷಿಯು ಸೇರ್ಪಟ್ಟಿರುತ್ತದೆ. ಮೊದಲ ಹಂತದ ಸಾಮುದಾಯಿಕ ಯಜ್ಞದ ಜಾಗದಲ್ಲಿ, ಒಬ್ಬ ಯಜಮಾನನು ತನ್ನ ವರ್ಧನೆಗಾಗಿ ಸಂಕೀರ್ಣ ರೂಪದ ಯಜ್ಞವನ್ನು ಆಯೋಜಿಸುವ ಪದ್ಧತಿಯು ಜಾರಿಗೆ ಬಂದಿರುತ್ತದೆ. ಬುಡಕಟ್ಟು ಜೀವನದಲ್ಲಿ ಅದನ್ನಿನ್ನೂ ಯಜ್ಞವೆಂದು ಪರಿಗಣಿಸುವುದೇ ಇಲ್ಲ; ಅದು ಬುಡಕಟ್ಟಿನ ಸಾಮೂಹಿಕ ಮಾಂತ್ರಿಕತೆಯ ಆಚರಣೆ. ಬುಡಕಟ್ಟು ಜೀವನವು ನಶಿಸಿಹೋಗಿ ಸಮಾಜವು ವಿಘಟನೆಗೊಂಡಾಗಿನ ಹೊಸ ಸಮಾಜದಲ್ಲಿ ಮಾಂತ್ರಿಕತೆಯು ಯಜ್ಞದ ರೂಪವನ್ನು ತಾಳುತ್ತದೆ. ಆಚರಣೆಯ ಉದ್ದೇಶ ಮತ್ತು ಆಚರಣೆಯ ಹಿಂದಿನ ತಿಳಿವಳಿಕೆ ಮೊದಲಿನಂತೆಯೇ ಇವೆ. ಅಂದರೆ, ಪ್ರಕೃತಿಯ ಅನುಕರಣೆಯು ಪ್ರಕೃತಿಯ ನಿಯಂತ್ರಣಕ್ಕೆ ಸಾಧನವೆಂಬ ಭಾವನೆ ಮುಂದುವರಿಯುತ್ತದೆಯೆಂದು ಅರ್ಥ. ಆದರೆ ಯಜ್ಞದ ಆಚರಣೆಯು ಕೇವಲ ಮಾಂತ್ರಿಕತೆಯಾಗಿರದೆ ಅನೇಕ ಸಂಕೀರ್ಣಾಂಶಗಳು ಜೊತೆಗೂಡಿವೆ, ಹೆಚ್ಚು ಯಾಂತ್ರಿಕವಾಗಿವೆ ಮತ್ತು ಯಜ್ಞ ಮಾಡುವ ಯಜಮಾನನು ಅನೇಕ ಋತ್ವಿಕ್ಕುಗಳನ್ನು ಅಥವಾ ಪುರೋಹಿತರನ್ನು ಆಶ್ರಯಿಸಬೇಕಾಗಿದೆ. ಯಜ್ಞದ ಆಯೋಜನೆಯು ಬುಡಕಟ್ಟಿನ ಸಹಜ ಮಾಂತ್ರಿಕ ಆಚರಣೆಗಿಂತಲೂ ಹಲವು ಪಟ್ಟು ಹೆಚ್ಚಿನ ಸಂಘಟನೆಯನ್ನು ಅಗತ್ಯವಾಗಿಸುತ್ತದೆ. ಸೃಷ್ಟಿಕ್ರಿಯೆ ಮತ್ತು ಯಜ್ಞಕ್ಕೆ ಸಂಬಂಧ ಕಲ್ಪಿಸುವ ಋಗ್ವೇದದ ಉತ್ತರ ಭಾಗದ ಸೂಕ್ತಗಳು, ಯಜ್ಞದ ಪ್ರಕ್ರಿಯೆಯು ಸೃಷ್ಟಿಕ್ರಿಯೆಯನ್ನು ಹೇಗೆ ಪ್ರತಿನಿಧಿಸುತ್ತದೆ ಅಥವಾ ಸೃಷ್ಟಿಗೆ ಕಾರಣವಾಗಬಲ್ಲದು ಎಂಬುದನ್ನು ವಿವರಿಸುವ ಗೋಜಿಗೆ ಹೋಗುವುದಿಲ್ಲ. ಈ ನಿಟ್ಟಿನಿಂದ ನೋಡಿದಾಗ ಋಗ್ವೇದದಲ್ಲಿ ಅತ್ಯಂತ ವಿಸ್ಮಯಕಾರಕವಾದ ವಿಶ್ವಸೃಷ್ಟಿಯನ್ನು ಎರಡು ಬಗೆಗಳಿಂದ ನೋಡಲಾಗಿದೆ ಯೆಂಬುದು ಸ್ಪಷ್ಟವಾಗಿದೆ. ಒಂದು, ನಾವೀಗ ತಾನೆ ಪರಿಚಯಿಸಿಕೊಂಡ ವಿಶ್ವಕರ್ಮ ಸೂಕ್ತದ (೧೦.೮೧) ಮೊದಲ ನಾಲ್ಕು ಮಂತ್ರಗಳಿಂದ ವೇದ್ಯವಾಗುವ ವೈಚಾರಿಕ ಜಿಜ್ಞಾಸೆ; ಇನ್ನೊಂದು, ವಿಶ್ವಸೃಷ್ಟಿಯು ಯಜ್ಞದ ಮುಖೇನ ಆಯಿತು ಅಥವಾ ಆಗುತ್ತದೆಂಬ ಅವಿಚಾರಿತ ನಿರೂಪಣೆ. ಈ ಎರಡು ಪ್ರವೃತ್ತಿಗಳು ಇನ್ನೂ ಹೆಚ್ಚು ಸಮಗ್ರವಾಗಿ ಪ್ರತಿಫಲಿತವಾಗಿರುವುದು ಕ್ರಮವಾಗಿ ನಾಸದೀಯ ಸೂಕ್ತ (೧೦.೧೨೯) ಮತ್ತು ಪುರುಷ ಸೂಕ್ತ (೧೦.೯೦)ಗಳಲ್ಲಿ. ಆದ್ದರಿಂದ ಅವೆರಡನ್ನೂ ಪರಿಚಯಿಸಿಕೊಳ್ಳುವುದು ಉಚಿತ ಎನಿಸುತ್ತದೆ. ಜೊತೆಗೆ ಬಹಳ ಕ್ಲಿಷ್ಟವೆನಿಸುವ ಇನ್ನೊಂದು ಸೂಕ್ತದತ್ತ ಆಮೇಲೆ ದೃಷ್ಟಿ ಹಾಯಿಸಬಹುದು. ಅದು ವಿಶ್ವದೇವತೆಗಳನ್ನು (ಅಂದರೆ, ಎಲ್ಲ ದೇವತೆಗಳನ್ನೂ) ಕುರಿತಾದ ಸೂಕ್ತ, ಆದರೆ ಅದು 'ಅಸ್ಯ ವಾಮಸ್ಯ' ಸೂಕ್ತವೆಂದೇ ಹೆಚ್ಚು ಪ್ರಸಿದ್ಧವಾಗಿದೆ.

ಈ ಮೊದಲು ಪರಿಚಯಿಸಿಕೊಂಡ ನಂತರದ

ಸೂಕ್ತದಲ್ಲಿ (೧೦.೮೨) ನೀರು ಮೊದಲ ದ್ರವ್ಯವೆಂದು ಹೇಳಲಾಗಿದೆ. ಪ್ರಾಚೀನ ಗ್ರೀಸಿನ ಥೇಲಿಸ್ ಸಹ ಇಂಥದೇ ಪ್ರಮೇಯವನ್ನು ಮುಂದಿಟ್ಟಿದ್ದ. "ನೀರಿನಲ್ಲಿ ಮೊದಲ ತತ್ತ್ವವು ಅಂಕುರಿಸಿತು; ಆದ್ದರಿಂದ ಮೊದಲು ಗರ್ಭ ಧರಿಸಿದ್ದು ನೀರು. ಆ ಗರ್ಭದಲ್ಲಿಯೇ ದೇವತೆಗಳೆಲ್ಲಾ ಇದ್ದುದು. ಅಲ್ಲಿಂದಲೇ ದ್ಯುಲೋಕ, ಭೂಮಿ, ಜೀವಂತ ದೇವತೆಗಳು, ಎಲ್ಲಾ ಉಗಮಗೊಂಡಿದ್ದು. ಹಾಗಿದ್ದರೆ ಅದೆಂತಹ ಅದ್ಭುತ ಗರ್ಭ"ವೆಂದು ಋಗ್ವೇದದ ಕವಿ ಉದ್ಗರಿಸುತ್ತಾನೆ. (೧೦.೮೨.೫ : ಪರೋ ದಿವಾ ಪರಃ ಏನಾ ಪೃಥಿವ್ಯಾ ಪರಃ ದೇವೇಭಿಃ ಅಸುರೈಃ ಯದಸ್ತಿ। ಕಂ ಸ್ವಿತ್ ಗರ್ಭಂ ಪ್ರಥಮಂ ದಧ್ರೇ ಆಪಃ ಯತ್ರ ದೇವಾಃ ಸಮಪಶ್ಯಂತ ವಿಶ್ವೇ ॥). ವಿಶ್ವದ ಎಲ್ಲವನ್ನೂ ಒಳಗೊಂಡಿದ್ದ ನೀರಿನ ಇಂತಹ ಅಮೋಘ ಗರ್ಭವು, ಇನ್ನೂ ಹುಟ್ಟಿರದಿದ್ದನ್ನು, ಅಂದರೆ ಬೀಜವನ್ನು, ತನ್ನಲ್ಲಿ ಧರಿಸಿಕೊಂಡಿತು. ಆ ಹುಟ್ಟಿರದಿದ್ದದ್ದನ್ನು 'ಅಜ' ಎನ್ನುತ್ತಾರೆ (೬ : ತಮಿತ್ ಗರ್ಭಂ ಪ್ರಥಮಂ ದಧ್ರೇ ಆಪಃ ಯತ್ರ ದೇವಾಃ ಸಮಗಚ್ಛಂತ ವಿಶ್ವೇ। ಅಜಸ್ಯ ನಾಭೌ ಅಧಿ ಏಕಂ ಅರ್ಪಿತಂ ಯಸ್ಮಿನ್ ವಿಶ್ವಾನಿ ಭುವನಾನಿ ತಸ್ಥುಃ॥). ವಿಶ್ವಕರ್ಮನೇ ಆ 'ಅಜ'. ಥೇಲಿಸ್ ಆಗಲಿ, ಋಗ್ವೇದದ ಪ್ರಸ್ತುತ ಮಂತ್ರವಾಗಲಿ, ನೀರಿನಲ್ಲಿ ಮೊದಲ ಗರ್ಭವು ಅವತರಿಸಿದ್ದು ಹೇಗೆ, ಅದನ್ನೇಕೆ ಮೊದಲ ಗರ್ಭ ಎನ್ನಬೇಕು, ಎಂಬುದನ್ನು ವ್ಯಾಖ್ಯಾನಿಸಿಲ್ಲ. ನೀರನ್ನು ಹೊಕ್ಕ ಆ ಒಂದು ಅಂಡವು ಇಡೀ ವಿಶ್ವದ ಸೃಷ್ಟಿಗೆ ಕಾರಣವೆಂದು ಋಗ್ವೇದವು ಗುರುತಿಸಿದೆ, ಆದರೆ ಥೇಲಿಸ್ ಯಾವ ಅಂಡದ ಪ್ರಸ್ತಾಪವನ್ನೂ ಮಾಡದೆಯೇ ನೀರು ವಿಶ್ವದ ಮೊದಲ ಗರ್ಭ, ಅದರಿಂದ ವಿಶ್ವವೆಲ್ಲವೂ ಅಸ್ತಿತ್ವಕ್ಕೆ ಬಂದಿತು, ಎಂದು ಹೇಳಿಬಿಟ್ಟಿದ್ದಾನೆ. ಸೃಷ್ಟಿಯನ್ನು ಕುರಿತಂತೆ ಅವರು ಗಮಿಸಿದ್ದು ಅಷ್ಟು ದೂರ ಮಾತ್ರ. ಋಗ್ವೇದವು ಅತಿ ಪ್ರಾಚೀನ ಮತ್ತು ಥೇಲಿಸ್ ಸ್ವಲ್ಪ ಪ್ರಾಚೀನ. ಅವು ಬಂದ ಕೆಲವು ಶತಮಾನಗಳ ನಂತರದ ಬೈಬಲ್ಲಿಗೆ ಸೃಷ್ಟಿಯ ಪ್ರಕ್ರಿಯೆಯು ಸರಳವಾಗಿತ್ತು: ದೇವರು ಎಂಬೊಬ್ಬನಿದ್ದ, ಅವನು 'ಬೆಳಕು ಇರಲಿ' ಎಂದ, ಬೆಳಕು ಅಸ್ತಿತ್ವಕ್ಕೆ ಬಂದಿತು. ಹಾಗೆಯೇ ಬೇರೆಯವನ್ನೂ 'ಬರಲಿ' ಎಂದ, ಅವು ಬಂದವು. ಮಾನವರ ಸೃಷ್ಟಿಯು ಇದೇ ಸರಣಿಯಲ್ಲಿ ನಡೆದು ಹೋಯಿತು. ಅದು ಸತ್ಯವೆಂದು ಬೈಬಲ್ ಹೇಳುತ್ತದೆ; ಏಕೆ ಅದು ಸತ್ಯವೆಂದರೆ 'ಅದು ದೇವರ ವಚನ' ಎಂಬ ಅಷ್ಟೇನೂ ಸಮರ್ಥವಲ್ಲದ ಉತ್ತರ ದೊರೆಯುತ್ತದೆ. ಕುರ್–ಅನ್ ಸಹ ಇಂಥದೇ ಪ್ರಕ್ರಿಯೆಯನ್ನು ಮುಂದಿಟ್ಟಿದೆ. ಮುಖ್ಯ ವಿಷಯವೇನೆಂದರೆ, ಎಲ್ಲ ದೇಶಗಳ ಎಲ್ಲ ಆದಿ ಚಿಂತಕರಿಗೂ ಸೃಷ್ಟಿಯು ಒಂದು ಸವಾಲು; ಸವಾಲಿಗೆ ಅವರವರದೇ ಉತ್ತರಗಳಿವೆ. ಇಂದಿನ ಜ್ಞಾನದ ಹಿನ್ನೆಲೆಯಲ್ಲಿ ಅವನ್ನೆಲ್ಲಾ ಪರೀಕ್ಷಿಸ ಹೋದರೆ ಅವು ಹುರುಳಿಲ್ಲದ 'ಸತ್ಯ'ಗಳು ಎಂದು ತೋರಿಬರುವುದು ಅನಿವಾರ್ಯ. ನಮಗಿಂತಲೂ ೩೫೦೦ ವರ್ಷಗಳ ಹಿಂದಿನ ಋಗ್ವೇದವು ಸಮರ್ಥ ಉತ್ತರ ಕೊಟ್ಟಿಲ್ಲವೆಂದು ಹೀಗಳೆಯುವುದಾಗಲಿ, ಅದು ವ್ಯರ್ಥದ ಅವಲೋಕನವೆಂದು ಹೇಳುವುದಾಗಲಿ




ನಿಜವಾದ ಅಜ್ಞಾನದ ಸೂಚಕವಾಗುತ್ತದೆ. ಅಂತಹ ಗಾಢವಾದ ಪ್ರಶ್ನೆಯನ್ನು ಅಂದೇ ಎತ್ತಲಾಗಿದ್ದಿತಲ್ಲ ಎನ್ನುವುದೇ ಅತ್ಯಂತ ಶ್ಲಾಘನೀಯ ಸಂಗತಿ.

ಆಕ್ಸ್‌ಫರ್ಡ್‌ನ ಬ್ಯಾಲಿಯಲ್ ಕಾಲೇಜಿನಲ್ಲಿ ಸಂಸ್ಕೃತ ಪ್ರಾಧ್ಯಾಪಕನಾಗಿದ್ದ ಎ. ಎ. ಮೆಕ್ಡಾನೆಲ್ ೧೯೧೭ರಲ್ಲಿ "ನಾಸದೀಯ ಸೂಕ್ತ"ವನ್ನು ಆಂಗ್ಲಭಾಷೆಗೆ ಭಾಷಾಂತರಿಸಿ ಸಣ್ಣ ಟಿಪ್ಪಣಿಯೊಂದನ್ನು ಬರೆದಿದ್ದ. 'ಅಸತ್'ನಿಂದ 'ಸತ್' ಉದ್ಭವಿಸಿತೆಂದು ಈ ಸೂಕ್ತವು ಪರಿಗಣಿಸುತ್ತದೆಂದು ಹೇಳಿ, ಅದು ನಂತರದ ಸಾಂಖ್ಯದರ್ಶನದ ತತ್ವಕ್ಕೆ ಅಡಿಪಾಯವಾಯಿತೆಂದು ಆತ ಅರ್ಥೈಸಿದ್ದಾನೆ. ನಿಜಕ್ಕೂ ಸಾಂಖ್ಯವು "ಸತ್ಕಾರ್ಯವಾದ"ವನ್ನು ಮಾನ್ಯ ಮಾಡುತ್ತದೆ; ಅಂದರೆ, 'ಸತ್'ನಿಂದ ಎಲ್ಲವೂ ಪರಿಣಮಿಸುತ್ತದೆ ಎಂಬುದು ಸಾಂಖ್ಯತತ್ತ್ವ. 'ಅಸತ್'ನಿಂದ 'ಸತ್' ಉಂಟಾಗುತ್ತದೆಂದು ಸಾಂಖ್ಯವು ಹೇಳುವುದಿಲ್ಲ. ಆ ಆಧಾರದ ಮೇಲೆ ಹೇಳುವುದಾದರೆ ಸಾಂಖ್ಯವು ವೇದವಿರೋಧಿ ತತ್ವವೆನ್ನಲು ಅಡ್ಡಿಯಿಲ್ಲ. "ಸೃಷ್ಟಿ–ಸ್ಥಿತಿ–ಪ್ರಲಯ"ಗಳನ್ನು ನಾಸದೀಯ ಸೂಕ್ತವು ಪ್ರತಿಪಾದಿಸುತ್ತದೆ ಎಂಬ ತಪ್ಪು ಮಾಹಿತಿಯನ್ನು ನೀಡುವ ಸಾಯಣನು ಈ ಮೂರಕ್ಕೂ ಕಾರಣಕರ್ತನಾದ ಪರಮಾತ್ಮನೇ ಸೂಕ್ತದಲ್ಲಿ ಉದ್ದೇಶಿತವಾಗಿರುವ ದೇವತೆ ಎನ್ನುತ್ತಾನೆ. ವಸ್ತುತಃ ಈ ಸೂಕ್ತದಲ್ಲಿ ಯಾವ ದೇವತೆಯೂ ಇಲ್ಲ; ಇರುವುದೆಲ್ಲಾ ವಿಶ್ವಸೃಷ್ಟಿಯೆಂಬ ವಿಸ್ಮಯದ ಬಗೆಗೆ ಒಂದು ಚಿಂತನೆ. ಅದನ್ನು ಬೇಕಾದರೆ ಒಂದು "ಊಹಾ ಪ್ರತಿಜ್ಞೆ" ಎನ್ನಬಹುದು. ಸೂಕ್ತದ ವಿಚಾರ ವೈಖರಿಯನ್ನು ಪರಮಸತ್ಯವೆಂದು ಬಗೆಯುವುದಕ್ಕಿಂತಲೂ ಅದೊಂದು ಗಂಭೀರ ಊಹಾಪೋಹದ ಆಕರ್ಷಕ ತುಣುಕು ಎಂಬುದು ಹೆಚ್ಚು ಸಮಂಜಸವಾಗಿರುತ್ತದೆ. ಇಡೀ ಸೂಕ್ತವನ್ನು ಡಾ॥ ಎಂ. ಎನ್. ಕೇಶವ ರಾವ್ ಅವರು ಛಂದೋರೂಪದಲ್ಲಿ ಕನ್ನಡಕ್ಕೆ ಅನುವಾದಿಸಿ ತಮ್ಮ 'ಜೀವೋಪನಿಷತ್' ಎಂಬ ಕವನ ಸಂಕಲನದಲ್ಲಿ ಪ್ರಕಟಿಸಿದ್ದಾರೆ (ನವಕರ್ನಾಟಕ ಪ್ರಕಾಶನ, ೨೦೧೯). ಅದನ್ನಿಲ್ಲಿ ಬಳಸಿಕೊಳ್ಳಲಾಗಿದೆ.

ಋಗ್ವೇದಾನಂತರದ ಶತಮಾನಗಳಲ್ಲಿ ಬಂದ ಉಪನಿಷತ್ತುಗಳು ಇದೇ ವಿಶ್ವಸೃಷ್ಟಿಯ ವಿಸ್ಮಯವನ್ನು ಕುರಿತಂತೆ ಖಂಡಿತವಾದಿಗಳಾಗಿ ತಮ್ಮ ಸಿದ್ಧಾಂತಗಳನ್ನು ಮಂಡಿಸುತ್ತವೆ. ಉದಾಹರಣೆಗೆ, ತೈತ್ತಿರೀಯ ಉಪನಿಷತ್ತು ಹೇಳುತ್ತದೆ, "ಈ ಭೂತವಸ್ತುಗಳೆಲ್ಲಾ ಎಲ್ಲಿ ಆವಿರ್ಭವಿಸಿದುವೋ, ಯಾವುದರಿಂದಾಗಿ ಬಾಳುತ್ತವೆಯೋ ಮತ್ತು ಕಡೆಗೆ ಯಾವುದರಲ್ಲಿ ಪರಿಸಮಾಪ್ತಿಯಾಗುತ್ತವೋ ಅದನ್ನು ತಿಳಿ, ಅದೇ ಬ್ರಹ್ಮನ್" ಎಂದು. ಈ ರೀತಿಯ ನಿಶ್ಚಿತ ಸಿದ್ಧಾಂತಗಳಿಗೆ ಋಗ್ವೇದವು ಮಾರುಹೋಗಿಲ್ಲ. ನಾಸದೀಯ ಸೂಕ್ತದ ಭಾಷ್ಯದಲ್ಲಿ ಸಾಯಣನು ವೇದಾಂತದ ಪರಿಕಲ್ಪನೆಗಳನ್ನು ತುಂಬಿಬಿಟ್ಟಿದ್ದಾನೆ. ಅದು ಅಚಾರಿತ್ರಿಕ ಮಾತ್ರವೇ ಅಲ್ಲ, ಅದು ಅಪ್ರಗಲ್ಭ ಸಹ. ಸೂಕ್ತವು ಮೊದಲಿಗೆ ಸೃಷ್ಟಿಪೂರ್ವದ ಸ್ಥಿತಿಯನ್ನು ಕಲ್ಪಿಸಿಕೊಳ್ಳುತ್ತದೆ : "ಆಗ ಅಸತ್ ಎಂಬುದಿರಲಿಲ್ಲ, ಅರಿವುಂಟುಮಾಡಿಸಬಲ್ಲ ಸತ್ ಸಹ ಇರಲಿಲ್ಲ. ಆಕಾಶ, ಆವರಣ, ಯಾವುದೂ ಇರಲಿಲ್ಲ. ಏನನ್ನಾದರೂ ಆಧರಿಸಬಲ್ಲ ಯಾವುದೇ ಸಾಧನವೂ ಇರಲಿಲ್ಲ. ಅಷ್ಟೇ ಅಲ್ಲ, ಅಪಾರ, ಅಭೇದ್ಯ ಸಮುದ್ರವೂ ಇರಲಿಲ್ಲ" (೧೦.೧೨೯.೧ : ನ ಅಸತ್ ಆಸೀತ್ ನೋ ಸತ್ ಆಸೀತ್ ತದಾನೀಂ ನ ಆಸೀತ್ ರಜಃ ನೋ ವ್ಯೋಮಾ ಪರಃ ಯತ್। ಕಿಂ ಆವರೀವಃ ಕುಹ ಕಸ್ಯ ಶರ್ಮನ್ ಅಂಭಃ ಕಿಮಾಸೀತ್ ಗಹನಂ ಗಭೀರಂ ॥). ೮೨ನೆಯ ಸೂಕ್ತದ ನೀರಿನ ವಿಚಾರವನ್ನಿಲ್ಲಿ ತಳ್ಳಿಹಾಕಲಾಗಿದೆ. ಮಂತ್ರದ ಮೂರು ಮತ್ತು ನಾಲ್ಕನೆಯ ಪಾದಗಳಲ್ಲಿ ಹೇಳಿಕೆಗಳಿಲ್ಲ, ಕೇವಲ ಪ್ರಶ್ನೆಗಳಿವೆ. ವಿಸ್ಮಯ ಮತ್ತು ಊಹೆಗೆ ಇದು ಸೂಕ್ತ ಮಾಧ್ಯಮ.

ಬೇರಿನ್ನೇನೇನು ಇರಲಿಲ್ಲವೆಂಬುದನ್ನು ಎರಡನೆಯ ಮಂತ್ರದಲ್ಲಿ ಕಾಣಿಸಲಾಗಿದೆ: ಮೃತ್ಯುವಿರಲಿಲ್ಲ, ಅಮೃತತ್ವವೂ ಇರಲಿಲ್ಲ; ದಿನ–ರಾತ್ರಿಗಳಿರಲಿಲ್ಲ; ಆ ಏಕಮಾತ್ರ ತತ್ (ಅದು, ಆ ಒಂದು ವಸ್ತು) ಇದ್ದಿತು. ಯಾವೊಂದರ ಪ್ರೇರಣೆ ಅಥವಾ ಸಹಾಯವೂ ಇಲ್ಲದೆ ಆ ತತ್ ಎಂಬುದು ವಾಯುವಿಲ್ಲದಿದ್ದೆಡೆ ವಾಯುವನ್ನು ತಂದಿರಿಸಿತು. ಆ ತತ್ ಒಂದನ್ನುಳಿದು ಆಗ ಬೇರೆಯದಿನ್ನೇನೂ ಇರಲಿಲ್ಲ (೨ : ನ ಮೃತ್ಯುಃ ಆಸೀತ್ ಅಮೃತಂ ನ ತರ್ಹಿ ನ ರಾತ್ರ್ಯಾಃ ಅಹ್ನಃ ಆಸೀತ್ ಪ್ರಕೇತಃ। ಆನೀತ್ ಅವಾತಂ ಸ್ವಧಯಾ ತತ್ ಏಕಂ ತಸ್ಮಾತ್ ಹ ಅನ್ಯತ್ ನ ಪರಃ ಕಿಂ ಚನ ಆಸ ॥). ಇಲ್ಲಿಯ 'ತತ್' ಎಂಬುದನ್ನು ವೇದಾಂತದ ಬ್ರಹ್ಮತತ್ವವೆಂದು ಸಾಯಣನು ವ್ಯಾಖ್ಯಾನಿಸಿದ್ದಾನೆ. ಅದನ್ನು ಸಮರ್ಥಿಸುವಂತಹ ಯಾವ ಸೂಚನೆಯೂ ಸೂಕ್ತದಲ್ಲಿಲ್ಲ. ಮೊದಲ ಮಂತ್ರದಲ್ಲಿ ಸತ್, ಅಸತ್, ಇತ್ಯಾದಿಗಳಿರಲಿಲ್ಲವೆಂದು ಹೇಳಿ ಮುಂದಿನ ಮಂತ್ರದಲ್ಲೇ 'ತತ್' ಎಂಬುದನ್ನೊಂದು ಸ್ಥಾಪಿಸಿರುವುದೊಂದು ವಿಶೇಷ. ಅದನ್ನು ಯಾರೂ ಸೃಷ್ಟಿಸಿದ್ದಲ್ಲ; ಅದು ತಾನೇ ತಾನಾಗಿ ಇದೆ, ಅಷ್ಟೆ. ಸ್ವಭಾವವಾದಿ ಲೋಕಾಯತರಿಗೆ ಬಹುಶಃ ಈ ಮಾತು ರಂಜಿಸಿದ್ದಿರಬಹುದು; ಅವರ ನಿಲುವು ಸಹ ವೇದದಲ್ಲಿ ಉಕ್ತವಾಗಿದೆ, ಎಂದು. ಆ 'ತತ್' ವಿವಿಧ ರೀತಿಗಳಲ್ಲಿ ಪರಿಣಾಮ ಹೊಂದಬಹುದೇ ವಿನಾ ಅದನ್ನು ಸೃಷ್ಟಿಸಲಾಗದು. ವೇದಾಂತದಲ್ಲಿ 'ಬ್ರಹ್ಮನ್'

ಎಂಬುದು ಹೇಗೆ ಮತ್ತು ಏಕೆ ಅಸ್ತಿತ್ವಕ್ಕೆ ಬಂದಿತೆಂಬ ಪ್ರಶ್ನೆ ಇಲ್ಲ; ಅದು ಎಲ್ಲದರ ಮೂಲ, ಅದೊಂದೇ ಸತ್ಯ, ಎಂದಷ್ಟೇ ಅಲ್ಲಿಯ ತಿಳಿವು. ಮುಂದೆ ಛಾಂದೋಗ್ಯ ಉಪನಿಷತ್ತಿನಲ್ಲಿ ಉದ್ದಾಲಕ ಆರುಣಿಯು ತನ್ನ ಮಗ ಶ್ವೇತಕೇತುವಿಗೆ ಬೋಧಿಸುವಾಗ "ಕಣ್ಣಿಗೆ ಎಳ್ಳಷ್ಟೂ ಕಾಣದ ಆ ಸೂಕ್ಷ್ಮಾತಿಸೂಕ್ಷ್ಮ 'ತತ್'ನಿಂದ ಎಲ್ಲವೂ ಆವಿರ್ಭವಿಸಿದೆ, ನೀನು ಸಹ ಅದರ ಅಂಶವೇ" (ತತ್ ತ್ವಂ ಅಸಿ) ಎಂದು ಹೇಳುವುದು ಋಗ್ವೇದದ ಈ 'ತತ್'ನ ಪ್ರಭಾವದಿಂದಲೇ ಇರಬಹುದು.

ಮುಂದಿನ ಮಂತ್ರದಲ್ಲಿ (೩ : ತಮಃ ಆಸೀತ್ ತಮಸಾ ಗೂಳ್ಹಂ ಅಗ್ರೇ ಅಪ್ರಕೇತಂ ಸಲಿಲಂ ಸರ್ವಂ ಆ ಇದಂ। ತುಚ್ಛ್ಯೇನ ಆಭು ಅಪಿಹಿತಂ ಯತ್ ಆಸೀತ್ ತಪಸಃ ತತ್ ಮಹಿನಾ ಅಜಾಯತ ಏಕಂ॥) ವಿಸ್ಮಯದ ಮೇಲೆ ಇನ್ನೊಂದು ವಿಸ್ಮಯವನ್ನು ಇರಿಸಲಾಗಿದೆ : "ಮೊದಲಿಗೆ ಕಗ್ಗತ್ತಲೆಯು ತುಂಬಿತ್ತು; ಆ ಕಗ್ಗತ್ತಲೆಯು ಇನ್ನೊಂದು ಕಗ್ಗತ್ತಲೆಯಲ್ಲಿ ಮುಚ್ಚಿಹೋಗಿತ್ತು. (ವಿಶ್ವವು ಸರ್ವಥಾ ಇಲ್ಲವೇ ಇಲ್ಲವೆಂದಾಗಿನ ಸ್ಥಿತಿ ಇದೇ ಇರಬಹುದೆ ಎನಿಸುತ್ತದೆ). ಆಗ ಏನನ್ನು ತಾನೆ ಅರಿಯಲು ಸಾಧ್ಯವಿತ್ತು! ತಿಳಿಯಲು ಅಸದಳವಾಗಿದ್ದ (ಅಪ್ರಕೇತಂ) ಆ ಅಂಧಕಾರದಲ್ಲಿ ನೀರು ಮುಚ್ಚಿಡಲಾಗಿತ್ತು; ಅದೇ 'ತತ್' ಆಗಿ ಪರಿಣಮಿಸಿತು ಮತ್ತು ಅದಕ್ಕೆ ಶಾಖವು ಕಾರಣವಾಗಿತ್ತು." ಚಲನೆ, ಜೀವ, ಚಿಂತನೆ, ಇವಕ್ಕೆಲ್ಲಾ ಮೂಲಪ್ರೇರಣೆಯು ಶಾಖ (ತಪಸ್) ಎಂದು ಋಗ್ವೇದಕಾಲೀನ ಗ್ರಹಿಕೆಯಾಗಿದ್ದಿರಬೇಕು. ಜೀವದ ಉಗಮವು ಒಂದರ್ಥದಲ್ಲಿ ಶಾಖದಿಂದಾದ್ದು ಎಂಬುದನ್ನು ಮುಂದಿನ ಮಂತ್ರವು ಪ್ರತಿಪಾದಿಸುತ್ತದೆ. ಆ ಶಾಖವು ಮೊದಲಿಗೆ ಮನಸ್ಸಿನಲ್ಲಿ ರೇತಸ್ಸಿನ ರೂಪ ಹೊಂದಿದ್ದು, ಆಮೇಲೆ ಕಾಮವಾಗಿ ಅಭಿವ್ಯಕ್ತವಾಗುತ್ತದೆ. (ಆಗ್ಗೆ ಆಗಲೆ ಮನಸ್ಸು ಎಲ್ಲಿಂದ ಮತ್ತು ಹೇಗೆ ಉದ್ಭವಿಸಿದ್ದಿತೆಂಬುದು ತಿಳಿಯದು; ನಾಸದೀಯ ಸೂಕ್ತವು ಆ ಪ್ರಶ್ನೆಯನ್ನು ಹಾಕಿಕೊಂಡಿಲ್ಲ. ಕಾಮದ ಉದ್ರೇಕವು ಮನಸ್ಸಿನ ಉದ್ಭವಕ್ಕೆ ಕಾರಣವೆಂದು ಸೂಕ್ತವು ಭಾವಿಸಿರುವಂತಿದೆ). ಕಾಮದಿಂದ ಏನೆಲ್ಲಾ ಘಟಿಸುತ್ತದೆಂಬುದನ್ನು ಪ್ರಾಜ್ಞರು ತಿಳಿದಿದ್ದಾರೆ. 'ಅಸತ್'ನಿಂದ 'ಸತ್' ಜನಿಸಿರುವುದು ಹೀಗೆ (೪ : ಕಾಮಃ ತತ್ ಅಗ್ರೇ ಸಮವರ್ತತ ಅಧಿ ಮನಸಃ ರೇತಃ ಪ್ರಥಮಂ ಯತ್ ಆಸೀತ್। ಸತಃ ಬಂಧುಂ ಅಸತಿ ನಿರವಿಂದನ್ ಹೃದಿ ಪ್ರತೀಷ್ಯಾ ಕವಯಃ ಮನಿಷಾ॥). ಋಗ್ವೇದದಲ್ಲಿ 'ಕವಿ' ಎಂಬ ಪದವು ಪ್ರಾಜ್ಞ, ತಿಳಿದವನು, ಎಂಬರ್ಥದಲ್ಲಿ ಅನೇಕ ಬಾರಿ ಪ್ರಯೋಗಕ್ಕೆ ಬಂದಿದೆ. ಇಲ್ಲದುದನ್ನು ಇರುವಂತೆ ಆಗಿಸುವುದರಲ್ಲಿ ಕಾಮದ ಪಾತ್ರವಿದೆಯೆಂಬುದು ಋಗ್ವೇದದ ಕವಿಗೆ ಬಹುಶಃ ತನ್ನ ಸಮೂಹದಲ್ಲಿನ ಜನನಕ್ರಿಯೆಯ ಅನುಭವದಿಂದ ಗೊತ್ತಾಗಿರಬೇಕು. 'ಅಸತ್'ನಿಂದ 'ಸತ್' ಉಂಟಾಗುತ್ತದೆಂಬುದಕ್ಕೆ ಅಂದಿನ ಮನಸ್ಸಿಗೆ ಇದೇ ದೊಡ್ಡ ದೃಷ್ಟಾಂತವಾಗಿದ್ದೀತು. ಮನುಜ ಸೃಷ್ಟಿಯಂತೆಯೇ ವಿಶ್ವ ಸೃಷ್ಟಿ ಸಹ, ಅಷ್ಟೆ.

ಈ ಮಂತ್ರ ಮತ್ತು ಮುಂದಿನ ಮಂತ್ರದ ನಡುವೆ ಏನಾದರೂ ಬಿಟ್ಟುಹೋಗಿದೆಯೇನೊ ಎಂಬ ಸಂಶಯವನ್ನು ಕೆಲವು ವಿದ್ವಾಂಸರು ಪ್ರಕಟಿಸಿದ್ದಾರೆ. ಆ ಮಂತ್ರದ ಅರ್ಥಯೋಜನೆಯು ಕ್ಲಿಷ್ಟವಾಗಿರುವುದು ಅದಕ್ಕೊಂದು ಕಾರಣ. 'ಸತ್' ಮತ್ತು 'ಅಸತ್'ಗಳ ನಡುವಣ "ಬಂಧು" ಅಥವಾ ಬಂಧಕವನ್ನು ಹಿಂದಿನ ಮಂತ್ರದಲ್ಲಿ ಪ್ರಸ್ತಾಪಿಸಲಾಗಿತ್ತು. ಅವೆರಡರ ನಡುವಣ ಅಂತರವೆಷ್ಟು? ಅದರ ಮಾಪನ ಮಾಡಲು ಏನನ್ನೋ ಬಳಸಿರಬೇಕಲ್ಲ; ಅದು ದಾರವಿರಬಹುದು ಅಥವಾ ಬೇರೇನಾದರೂ ಇರಬಹುದು. ಅದನ್ನು ಇಲ್ಲಿ 'ರಶ್ಮಿ' ಎಂದು ಕರೆಯಲಾಗಿದೆ. ಅದು ಮಾನಸಿಕವಾಗಿ ಅಥವಾ ಬೌದ್ಧಿಕವಾಗಿ ನಡೆಸಬಹುದಾದ ಮಾಪನವೇ ವಿನಾ ಭೌತಿಕವಾಗಿ ಅಲ್ಲ. ಆದ್ದರಿಂದ 'ಬಂಧು' ಅಥವಾ ಬಂಧಕವು ಒಂದು ದಾರದಂತಿರದೆ ರಶ್ಮಿಯ ರೂಪದಲ್ಲಿದೆ. ದ್ಯುಲೋಕ ಮತ್ತು ಭೂಮಿಯ ನಡುವಣ ಅಂತರವನ್ನು 'ರಶ್ಮಿ'ಯಿಂದ (ಅಂದರೆ ದಾರ ಅಥವಾ ಅದಕ್ಕೆ ಸಮಾನವಾದ ಯಾವುದೋ ವಸ್ತುವಿನಿಂದ) ಅಳೆಯಲಾಯಿತೆಂದು ಬೇರೊಂದೆಡೆ ಹೇಳಲಾಗಿದೆ (ಋ.೮.೨೫.೧೮ : ಪರಿ ಯೋ ರಶ್ಮಿನಾ ದಿವಃ ಅಂತಾನ್ ಮಮೇ ಪೃಥಿವ್ಯಾಃ॥ ಅಂತರವು ಬಹಳ ಹೆಚ್ಚಾಗಿರುವುದರಿಂದ ಅದನ್ನು ಅಳೆಯಲು ರಶ್ಮಿಯಂತಹ ಸಾಧನವೇ ಬೇಕಲ್ಲ!). ಪ್ರಸ್ತುತ ಮಂತ್ರದ ಸಂಬಂಧದಲ್ಲಿ ಮನಸ್ಸು, ರೇತಸ್ಸು, ಕಾಮ, ಇವುಗಳ ಮಾಪನಕ್ಕೆ ಒಂದು 'ರಶ್ಮಿ' (ಅಥವಾ ದಾರದಂತಹ ಸಾಧನ) ಬೇಕಾಗಿದ್ದಿತು. ಆ 'ರಶ್ಮಿ'ಯ ಸ್ಥಾನ ಯಾವುದಾಗಿದ್ದಿರಬೇಕು? ಮೇಲ್ಭಾಗದಲ್ಲಿಟ್ಟು ಮಾಪನ ಮಾಡಬೇಕೋ ಅಥವಾ ಕೆಳಭಾಗದಲ್ಲಿಟ್ಟೋ? ಅಥವಾ ಬೇರೊಂದು ರೀತಿಯಲ್ಲಿ ಅರ್ಥೈಸುವುದಾದರೆ 'ರಶ್ಮಿ'ಯ ಕೆಳಗಿದ್ದುದೇನು ಮತ್ತು ಮೇಲಿದ್ದುದೇನು? ಭೂಮಿ ಮತ್ತು ದ್ಯುಲೋಕಗಳನ್ನು ಅಂತರಿಕ್ಷದ ಒಂದು ಜಾಗದಲ್ಲಿ ವಿಭಜಿಸುವೆಡೆ ಈ 'ರಶ್ಮಿ'ಯನ್ನಿಟ್ಟು ಮಾಪನ ನಡೆಸಿದರೆ ಮೇಲಿನದು ದ್ಯುಲೋಕ ಮತ್ತು ಕೆಳಗಿನದು ಭೂಲೋಕ. ಭೂಭಾಗದಲ್ಲಿ ರೇತಸ್ಸಿನಿಂದ ಬೇರೆ ರೇತಧಾರಿಗಳು ಉಂಟಾದರು; ಅವರು ಭೋಕ್ತೃಗಳು, ಅಂದರೆ ವಿಶ್ವವನ್ನು ಅನುಭವಿಸುವವರು. ಅವರ ಅನುಭವಕ್ಕೆ ವಸ್ತುಗಳಿರುವುದು ವಿಶ್ವದಲ್ಲಿ; ಅದು ಭೋಗ್ಯ. ಭೋಕ್ತೃ-ಭೋಗ್ಯಗಳೆರಡೂ ಉಂಟಾದದ್ದು ಹೀಗೆ (೫ : ತಿರಶ್ಚೀನಃ ವಿತತಃ ರಶ್ಮಿಃ ಏಷಾಂ ಅಧಃ ಸ್ವಿತ್ ಆಸೀತ್ ಉಪರಿ ಸ್ವಿತ್ ಆಸೀತ್। ರೇತೋಧಾ ಆಸನ್ ಮಹಿಮಾನಃ ಆಸನ್ ಸ್ವಧಾ ಅವಸ್ತಾತ್ ಪ್ರಯತಿಃ ಪರಸ್ತಾತ್॥). "ರೇತೋಧಾಃ" ಎಂದರೆ ಜೀವಿಗಳು, "ಮಹಿಮಾನಃ" ಎಂದರೆ ವಿಶ್ವದ ಬೇರೆಲ್ಲ ಪದಾರ್ಥಗಳು. ಇವೆರಡರಲ್ಲಿ ಭೋಕ್ತೃವು ಯಾವಾಗಲೂ ಉತ್ಕೃಷ್ಟ ಅಥವಾ ಮೇಲುಸ್ತರದಲ್ಲಿ ಇರುವಂಥದು ಮತ್ತು ಭೋಗ್ಯವು ಕೆಳಸ್ತರದಲ್ಲಿರುವಂಥದು. (ಏಕೆಂದರೆ, ಜೀವಿಯು ವಿಶ್ವದ ವಸ್ತುಗಳನ್ನು ಅನುಭವಿಸುತ್ತಾನೆ ಮತ್ತು ಅನುಭವಯೋಗ್ಯವನ್ನಾಗಿಸುತ್ತಾನೆ; ಭೋಕ್ತೃವಿಗೆ ಮನಸ್ಸಿದೆ, ಆದರೆ ಭೋಗ್ಯವಸ್ತುವಿಗೆ ಅದಿಲ್ಲ). ಸೃಷ್ಟಿಯಲ್ಲಿ ಇವೆರಡು ಭಾಗಗಳೂ ಇವೆ, ಅವು ಯಾವುದೋ ಹಂತದಲ್ಲಿ ಅಸ್ತಿತ್ವಕ್ಕೆ ಬಂದಿವೆ.

ನಾಸದೀಯ ಸೂಕ್ತವು ವಿಶ್ವಸೃಷ್ಟಿಯ ಬಗೆಗಿನ ಬೇರಿನ್ನೆಷ್ಟೋ ಪ್ರತಿಪಾದನೆಗಳಿಗಿಂತಲೂ ಶ್ರೇಷ್ಠ




ನವಕರ್ನಾಟಕ ಪ್ರಕಾಶನದ ಮೈಸೂರಿನ ಪುಸ್ತಕ ಮಳಿಗೆಯ **ಬೆಳ್ಳಿಹಬ್ಬದ ಸಂಭ್ರಮಾಚರಣೆ** ಮತ್ತು **ಹತ್ತು ಕನ್ನಡ ಪುಸ್ತಕಗಳ ಲೋಕಾರ್ಪಣೆ** ನವೆಂಬರ್೧, ೨೦೧೪ರಂದು ನೆರವೇರಿತು. ಅಲ್ಲಿನ ಝಾನ್ಸಿರಾಣಿ ಲಕ್ಷ್ಮೀಬಾಯಿ ರಸ್ತೆಯಲ್ಲಿರುವ ರೋಟರಿ ಸ್ಕೂಲ್ ಸಭಾಂಗಣದಲ್ಲಿ ಆಯೋಜಿಸಿದ ಈ ಕಾರ್ಯಕ್ರಮದಲ್ಲಿ ಅಧ್ಯಕ್ಷತೆ ವಹಿಸಿ ಕೃತಿಗಳ ಲೋಕಾರ್ಪಣೆ ಮಾಡಿದವರು ಪಿ.ಯು.ಸಿ.ಎಲ್.ನ ಅಧ್ಯಕ್ಷರಾದ ಡಾ|| ವಿ. ಲಕ್ಷ್ಮೀನಾರಾಯಣ. ಮೈಸೂರು ವಿ.ವಿ.ಯ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ವಿಶ್ರಾಂತ ಕನ್ನಡ ಪ್ರಾಧ್ಯಾಪಕ ಡಾ|| ಪಂಡಿತಾರಾಧ್ಯ ಕೃತಿಗಳ ಪರಿಚಯ ಮಾಡಿಕೊಟ್ಟರು. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಮೈಸೂರು ಘಟಕದ ಅಧ್ಯಕ್ಷ ಶ್ರೀ ಗೊ. ರು. ಪರಮೇಶ್ವರಪ್ಪ ಮತ್ತು ಲೇಖಕ, ಭಾಷಾ ವಿಜ್ಞಾನಿ, ಸಂವಹನ ತಜ್ಞ ಶ್ರೀ ಎಂ. ಅಬ್ದುಲ್ ರೆಹಮಾನ್ ಪಾಷ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಕೃತಿಗಳ ಲೇಖಕರಾದ ಎಸ್. ಸಾಯಿಲಕ್ಷ್ಮಿ, ಜಿ. ವಿ. ಗಣೇಶಯ್ಯ, ಪೂರ್ಣೇಶ್ ಮತ್ತಾವರ, ಕೆ. ಕೆ. ಗಂಗಾಧರನ್ ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಎನಿಸಿಕೊಳ್ಳುವುದು ಸೂಕ್ತದ ಕಡೆಯ ಎರಡು ಮಂತ್ರಗಳಿಂದಾಗಿ ಎನ್ನಬಹುದು. ಋಗ್ವೇದದ ಕವಿಯು ವಿಶ್ವದ ಅರ್ಥ ಮತ್ತು ವಿವರಣೆಗಳನ್ನು ಹುಡುಕುವ ಹುಂಬ, ನಿಗರ್ವಿ. ತನಗೆಲ್ಲಾ ತಿಳಿದಿದೆಯೆಂಬ ಹಮ್ಮು ಅವನಿಗಿಲ್ಲ. ನ್ಯೂಟನ್ನನ ಮಾತುಗಳಲ್ಲಿ ಹೇಳುವುದಾದರೆ ಅವನು ಸಮುದ್ರ ತಟದಲ್ಲಿ ಅಡ್ಡಾಡುತ್ತಾ ಒಂದೋ ಎರಡೋ ಸುಂದರ ನುಣುಪು ಕಲ್ಲುಗಳನ್ನು ಕೈಗೆತ್ತಿಕೊಳ್ಳುವಂಥವನು. ಸಮಸ್ತವೂ ತಿಳಿದಿದೆಯೆಂಬ ದಾರ್ಶ್ನಿಕ ಬೇಕಾದರೆ ಉಪನಿಷತ್ತುಗಳ ಕೆಲವು ಚಿಂತಕರತ್ತ ಬೆರಳು ಮಾಡಿ ತೋರಿಸಬೇಕು. ಅವರು ಎಲ್ಲ ನುಣುಪು ಕಲ್ಲುಗಳನ್ನೂ ಎತ್ತಿಕೊಂಡು ಬಿಟ್ಟಿರುವ ಮಹಾಜ್ಞಾನಿಗಳು, ಜನಕ ಮತ್ತು ಯಾಜ್ಞವಲ್ಕ್ಯನಂಥವರು! ನಿರಂತರವಾಗಿ ವಿಸ್ಮಯವನ್ನುಂಟುಮಾಡುವ ವಿಶ್ವದ ಸೃಷ್ಟಿಯ ಬಗೆಗೆ ನಾಸದೀಯ ಸೂಕ್ತದ ಕವಿಯು ತನ್ನ ಊಹಾತ್ಮಕ ನಿಲುವನ್ನು ಪ್ರಕಟಪಡಿಸಿ, ನಂತರ ಪುನರವಲೋಕನ ಮಾಡಿಕೊಳ್ಳುತ್ತಾನೆ; ಆಗ ತನ್ನ ನಿಲುವಿನ ಖಾತ್ರಿಯ ಬಗ್ಗೆ ಸಂಶಯದ ಮಹಾಪೂರ ಅವನನ್ನಾವರಿಸುತ್ತದೆ. "ನಾನೇನೋ ವಿಶ್ವಸೃಷ್ಟಿಯ ವಿವರಣೆ ನೀಡಿದೆ, ಆದರೆ ಅದು ಅನಿರ್ಧಾರಿತ ವಿಷಯವಾಗಿಯೇ ಉಳಿದಿದೆಯಲ್ಲ" ಎಂಬ ಪ್ರಜ್ಞೆ ಅವನಲ್ಲಿದೆ. ಆದ್ದರಿಂದಲೇ ಅವನು ಶ್ರೇಷ್ಠ ಮತ್ತು ಅವನ ಚಿಂತನೆ ಬಹಳ ಉದಾರವಾದುದು ಎಂಬುದು ಸ್ಪಷ್ಟ. ಆಂತರ್ಯದಲ್ಲಿ ತನ್ನ ವಿವರಣೆಯ ಬಗ್ಗೆ ಅವನಿಗೆ ಅಳುಕಿದೆ. ಆದ್ದರಿಂದ ಅವನು ತನಗೆ ತಾನೆ ಕೇಳಿಕೊಳ್ಳುತ್ತಾನೆ: "ಅರಿತಿಹನಾರು ಖಚಿತವಾಗಿಯೆ ಇದನು ? ಹೇಳುವವನು ಇಹನಾರು ಈ ಲೋಕದಲ್ಲಿ ?" ವಿಸ್ಮಯದ ಕಗ್ಗಂಟನ್ನು ಬಿಡಿಸುವುದಾದರೂ ಹೇಗೆ ? "ಕಾಣುತಿಹ ಈ ಎಲ್ಲ ಜಗತ್ತು, ಈ ವಿಧವಿಧ ಸೃಷ್ಟಿ, ಆದುದೇತರಲಿ ? ಜನಿಸಿತೆಲ್ಲಿಂದ ?" ದೇವತೆಗಳು ಮಾಡಿದ್ದು ಎನ್ನೋಣವೆ ಎಂದರೆ, ಅಯ್ಯೋ, ಆ ದೇವತೆಗಳು ಬಂದುದೇ ವಿಶ್ವದ ಸೃಷ್ಟಿಯ ನಂತರ ! ಇದು ಕವಿಯ ಅದ್ಭುತವಾದ ಒಳನೋಟ. "ದೇವರು ಮಾನವರನ್ನು ಸೃಷ್ಟಿಸಲಿಲ್ಲ, ಬದಲಾಗಿ ಮಾನವರು ದೇವರನ್ನು ಸೃಷ್ಟಿಸಿದರು" ಎಂಬ ಐತಿಹಾಸಿಕ ಸತ್ಯವನ್ನು ೨೧ನೆಯ ಶತಮಾನದ ವೈಜ್ಞಾನಿಕ ಯುಗದಲ್ಲಿ ಸಹ ಒಪ್ಪಲು ಮಾನಸಿಕ ಸಿದ್ಧತೆ ಇಲ್ಲದವರು ೩೫೦೦ ವರ್ಷಗಳ ಹಿಂದಿನ ನಾಸದೀಯ ಸೂಕ್ತದ ಆದರಣೀಯ ಕವಿಯ ಮನಸ್ಸನ್ನು ತಮ್ಮಲ್ಲಿ ಅಂಕುರಿಸಿಕೊಳ್ಳಬೇಕು. ಸಾಯಣನು ವ್ಯಾಖ್ಯಾನಿಸಿರುವಂತೆ "ದೇವತೆಗಳು ಈ ಜಗತ್ತಿನಲ್ಲಿ ಪ್ರಕೃತಿಯ ಸೃಷ್ಟಿಯ ನಂತರ ಅಸ್ತಿತ್ವಕ್ಕೆ ಬಂದಿರುವವರು" (ದೇವಾಃ ಅಸ್ಯ ಜಗತಃ ವಿಸರ್ಜನೇನ ವಿಯದಾದಿ ಭೂತೋತ್ಪತ್ತಿ ಅನಂತರಂ ವಿವಿಧಂ ಯತ್ ಭೌತಿಕಂ ಸರ್ಜನಂ ಸೃಷ್ಟಿಃ ತೇನ ಅರ್ವಾಕ್ ಅರ್ವಾಚೀನಾಃ ಕೃತಾಃ । ಭೂತಸೃಷ್ಟೇಃ ಪಶ್ಚಾತ್ ಜಾತಾಃ ಇತ್ಯರ್ಥಃ ॥). "ಈ ವಾಸ್ತವಿಕ ಸನ್ನಿವೇಶದಲಿ, ಎಂತು, ಯಾರಿಂದಾಯ್ತು ಇವೆಲ್ಲವು ಎಂದು ತಿಳಿದವರು ಯಾರಿಹರು ?" ಮಾನ್ಯ ಡಿ. ವಿ. ಜಿ.ಯವರ "ನಿವೇದನ" (ಮೇಲೆ ನೋಡೆ ಕಣ್ಣ ತಣಿಪ ನೀಲಪಟದಿ ವಿವಿಧ ರೂಪ ಜಾಲಗಳನು ಚಿತ್ರಿಸಿರುವ ಚಿತ್ರಚತುರನಾರ್...) ನೆನೆಸಿಕೊಂಡರೆ ಆ ಪ್ರಜ್ಞೆಗೂ ನಾಸದೀಯ ಸೂಕ್ತದ ಪ್ರಜ್ಞೆಗೂ ಇರುವ ವ್ಯತ್ಯಾಸವು ಕಣ್ಣಿಗೆ ರಾಚುವಂತಿದೆ. "ಸೃಷ್ಟಿಯನ್ನೆಲ್ಲಾ ಗೈದವನು ಅವನು" ಎಂದು ಡಿ. ವಿ. ಜಿ. ಕವನದ ಮುಕ್ತಾಯದಲ್ಲಿ ಘೋಷಿಸಿದ್ದಾರೆ, ಆದರೆ "ಸೃಷ್ಟಿ ಹೇಗಾಯಿತೋ ತಿಳಿಯದು ಮತ್ತು ಅದೆಲ್ಲಾ ಸಂಭವಿಸಿದ್ದ ತರುವಾಯದಲ್ಲಿ ದೇವರ ಸೃಷ್ಟಿಯನ್ನು ಮಾನವ ಮಾಡಿಕೊಂಡ" ಎಂದು ಋಗ್ವೇದದ ಕವಿ ಬಿನ್ನವಿಸಿಕೊಳ್ಳುತ್ತಾನೆ. ಮಂತ್ರದ ಸಂರಚನೆಯು ಅದರ ಅರ್ಥವನ್ನು ವ್ಯಂಜಿಸುತ್ತಿದೆಯೋ ಎಂಬಂತಿದೆ (೬ : ಕೋ ಅದ್ಧಾ ವೇದ ಕ ಇಹ ಪ್ರ ವೋಚತ್ ಕುತಃ ಆಜಾತಾ ಕುತಃ ಇಯಂ ವಿಸೃಷ್ಟಿಃ । ಅರ್ವಾಕ್ ದೇವಾಃ ಅಸ್ಯ ವಿಸರ್ಜನೇನ ಅಥ ಕಃ ವೇದ ಯತಃ ಆಬಭೂವ ॥). ಅಂದರೆ, ಸೃಷ್ಟಿಯು ಪ್ರಶ್ನಾರ್ಥಕವಾಗಿಯೇ ಉಳಿಯುತ್ತದೆ.

ಕಡೆಯ ಮಂತ್ರದಲ್ಲಿ ಕವಿಯು ಇದನ್ನು ಮತ್ತೂ ವಿಶಿಷ್ಟ ಶೈಲಿಯಲ್ಲಿ ನಮ್ರತೆಯಿಂದ ವಿಸ್ಮಯದ ಅನುಸಂಧಾನ ಮಾಡಿಕೊಳ್ಳುತ್ತಾನೆ :

*ಯಾರಿಂದಲಾಯಿತೊ ಈ ವಿಚಿತ್ರ ಸೃಷ್ಟಿಗಳು,*
*ಧರಿಸಿ ಪೋಷಿಸುತಲಿರುವನೊ ಅವನು ಇವೆಲ್ಲವನು,*
*ಅಥವಾ ಪೋಷಿಸದೆ ಇರುವನೊ,*
*ಯಾವನು ಇವೆಲ್ಲದರ ಅಧ್ಯಕ್ಷನೊ,*
*ಯಾವನು ಬಹುಮೇಲೆ ಆಕಾಶದಿಂದಲೆಯೆ*
*ಇವೆಲ್ಲವನು ಬೆಳಕಿಟ್ಟು ಪರಿವೀಕ್ಷಿಸಬಲ್ಲನೊ,*
*– ದಿಟವೆ ! ಅವನೊಬ್ಬನೆ ಅರಿಯಬಲ್ಲನು ಇದನೆಲ್ಲ !*
*ಅರಿಯದವನಾದರೆ ಅವನು ಸಹ ?*
*ಹಹ್ಹ ! ಅರಿಯಬಲ್ಲವನು ಇನ್ನಾರು ?*

ಮಂತ್ರ (೧೦.೧೨೯.೭) ಹೀಗಿದೆ :

ಇಯಂ ವಿಸೃಷ್ಟಿಃ ಯತಃ ಆಬಭೂವ ಯದಿ ವಾ ದಧೇ ಯದಿ ವಾ ನ ।
ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್ ಸಃ ಅಂಗ ವೇದ ಯದಿ ವಾ ನ ವೇದ ॥

ಈ ಮಂತ್ರದಲ್ಲಿ 'ಅಧ್ಯಕ್ಷ' ಎಂಬ ಪದಪ್ರಯೋಗವಿದೆ. ಅವನು ಅಧಿವೀಕ್ಷಕ, ಅಷ್ಟೆ; ಸ್ವತಃ ಸೃಷ್ಟಿಕರ್ತನಲ್ಲ. ಅಲ್ಲೆಲ್ಲೋ ಮೇಲೆ ನಿಂತು ಅವನು ವಿಶ್ವವನ್ನೆಲ್ಲಾ ವೀಕ್ಷಿಸುತ್ತಿದ್ದಾನೆ. ಸೃಷ್ಟಿಯ ಸಮಾಚಾರದ ವಿವರಗಳು ಅವನಿಗೆ ತಿಳಿದಿದೆಯೋ ಏನೋ ! ಅಥವಾ, ಅವನಿಗೂ ಅದು ತಿಳಿದಿಲ್ಲದಿರುವ ಸಾಧ್ಯತೆಯೇ ಹೆಚ್ಚು.

ಒಟ್ಟಿನಲ್ಲಿ, ವಿಶ್ವದ ವಿಸ್ಮಯಕ್ಕೆ ಉತ್ತರವೆಂದರೆ ದ್ವಿಗುಣಿತವಾದ ವಿಸ್ಮಯ, ಅಷ್ಟೆ. ಋಗ್ವೇದದ ಕವಿಗಳು ಎಲ್ಲ ನಿಗೂಢಗಳನ್ನೂ ಭೇದಿಸಿದ್ದ ಸರ್ವಜ್ಞರು, ವೇದವು ಅಪೌರುಷೇಯ, ಅದರಲ್ಲಿಲ್ಲದುದೇನೂ ಇಲ್ಲ, ಇತ್ಯಾದಿ ಅಪಲಾಪ ಮಾಡುವ ವಿದ್ವಜ್ಜನರು ನಾಸದೀಯ ಸೂಕ್ತದ ಕವಿಯ ಅಂತರಾಳವನ್ನು ಭೇದಿಸಿ ಅವನ ವಿನೀತ ಭಾವದ ಕೌತುಕವನ್ನು ತಮ್ಮದಾಗಿಸಿಕೊಂಡರೆ ಧನ್ಯರು.

---

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ,
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಕ್ಷ - ಕಿರಣ

- ಪ್ರಕಾಶ್ ಎಸ್.

ಮಹಾರಾಷ್ಟ್ರ ಚುನಾವಣೆ :
ಬಿಜೆಪಿ–ಶಿವಸೇನೆ ಮೈತ್ರಿ ಭಂಗ




ಆಸ್ಟ್ರೇಲಿಯಾದಲ್ಲಿ
ಗಾಂಧಿ ಪ್ರತಿಮೆ ಪ್ರತಿಷ್ಠಾಪನೆ







ಭವಿಷ್ಯ ಹೇಳುವ ನಿಮ್ಮ ಭವಿಷ್ಯ ಏನು ಗುರೂಜಿ...?



ಸ್ವಾತಂತ್ರ್ಯಾನಂತರದ ಭಾರತ – ೧೨

# ರಾಜೀವ ಗಾಂಧಿಗೆ ಅಂಟಿದ ಬೋಫೋರ್ಸ್ ಹಗರಣ, ಮೃತ್ಯುಕೂಪವಾದ ಶ್ರೀಲಂಕಾ ಪ್ರಕರಣ

**ಸಿ. ಆರ್. ಕೃಷ್ಣರಾವ್**

ರಾಜಕೀಯದಲ್ಲಿ, ಆಡಳಿತ ನಿರ್ವಹಣೆಯಲ್ಲಿ ಅನುಭವ ಇಲ್ಲದೆ ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡ ಮೇಲೆ ರಾಜೀವ ಗಾಂಧಿ ಕೆಲವು ಉಪಕ್ರಮಗಳನ್ನು ಮುಖ್ಯವಾಗಿ ಟೆಲಿಸಂಪರ್ಕದಲ್ಲಿ ನಾವೀನ್ಯತೆ, ಪಂಚಾಯತ್ ರಾಜ್ಯ ವ್ಯವಸ್ಥೆಯನ್ನು ಚುರುಕುಗೊಳಿಸಲು ನಡೆಸಿದ ಪ್ರಯತ್ನ, ಶಾಸಕರ ಪಕ್ಷಾಂತರ ತಡೆಯಲು ತಂದ ಕಾನೂನು – ತೆಗೆದು ಕೊಂಡರೂ ಬೋಫೋರ್ಸ್ ಫಿರಂಗಿ ಖರೀದಿಯಲ್ಲಿ ನಡೆದ ಅವ್ಯವಹಾರ ಬಲವಾಗಿ ಅಂಟಿಕೊಂಡಿತು. ಹಾಗೆಯೇ ಶ್ರೀಲಂಕಾ ತಮಿಳರ ಹೋರಾಟದ ವಿಚಾರದಲ್ಲಿ ಇರಿಸಿದ ತಪ್ಪು ಹೆಜ್ಜೆ ಅವರ ಜೀವಕ್ಕೇ ಮುಳುವಾಯಿತು. ಗ್ರಾಮ ಪಂಚಾಯಿತಿಗಳಿಗೆ ಚುನಾವಣೆಗಳನ್ನು ಕಡ್ಡಾಯಗೊಳಿಸುವ, ಅವನ್ನು ಬಲಗೊಳಿಸುವ ಉದ್ದೇಶದಿಂದ ಸಂವಿಧಾನಕ್ಕೆ ತಂದ ತಿದ್ದುಪಡಿ ಮಸೂದೆ ರಾಜ್ಯಸಭೆಯಲ್ಲಿ ಬಹುಮತದ ಕೊರತೆಯಿಂದ ಅಂಗೀಕಾರವಾಗಲಿಲ್ಲ. ಇದರಿಂದ ವಿಚಲಿತರಾಗದ ರಾಜೀವ ಗಾಂಧಿ ೧೯೮೯ರಲ್ಲಿ ಪಂಚಾಯಿತಿರಾಜ್ ಸಮ್ಮೇಳನವೊಂದನ್ನು ನಡೆಸಿದರು. ಈ ಸಮ್ಮೇಳನದಲ್ಲಿ ೮೦೦೦ ಪ್ರತಿನಿಧಿಗಳು ಭಾಗ ವಹಿಸಿದ್ದರು. ಗ್ರಾಮಪಂಚಾಯಿತಿಗಳಲ್ಲಿ ಮೂರನೇ ಒಂದು ಭಾಗವನ್ನು ಮಹಿಳೆಯರಿಗೆ ಮೀಸಲಾಗಿಸುವ ಶಿಫಾರಸು ಬಂದದ್ದು ಆಗಲೆ. ವರದಕ್ಷಿಣೆ ನಿಷೇಧ ಕಾಯಿದೆಯನ್ನು ಬಲಗೊಳಿಸಲು ಕ್ರಮ ಕೈಗೊಂಡಾಗ್ಯೂ ಮುಸ್ಲಿಮ್ ಮಹಿಳೆಯರ ವಿಚಾರಕ್ಕೆ ಬಂದಾಗ ತೋರಿದ ತಾರತಮ್ಯ ಅಕ್ಷಮ್ಯ. ಶಾಬಾನು ಪ್ರಕರಣ ಎಂದೇ ಹೆಸರಾಗಿರುವ ಮೊಕದ್ದಮೆಯಲ್ಲಿ ವಿಚ್ಛೇದನ ಪಡೆದುಕೊಂಡ ಪತ್ನಿಗೆ ಪತಿ ಜೀವನಾಂಶ ನೀಡಬೇಕೆಂದು ಸರ್ವೋಚ್ಚ ನ್ಯಾಯಾಲಯ ತೀರ್ಪು ನೀಡಿತ್ತು. ಇದು ನಿಜಕ್ಕೂ ಮುಸ್ಲಿಮ್ ಮಹಿಳೆಯರಿಗೆ ಖಾಜಿ ನ್ಯಾಯದಿಂದ ಮುಕ್ತಿಯಾಗಿತ್ತು. ಆದರೆ ಇಸ್ಲಾಮಿಕ್ ಮೂಲಭೂತ ವಾದಿಗಳ ಒತ್ತಡಕ್ಕೆ ಮಣಿದು ಸಂವಿಧಾನಕ್ಕೆ ತಿದ್ದುಪಡಿ ತಂದು ಸುಪ್ರೀಮ್ ಕೋರ್ಟ್‌ನ ತೀರ್ಪನ್ನು ನಗಣ್ಯವಾಗಿಸಲಾಯಿತು. ರಾಜೀವ ಗಾಂಧಿ ತಳೆದ ಈ ಧೋರಣೆಯಿಂದ ಸಂಪುಟದಲ್ಲಿ ಕೂಡ ಒಡಕುತಂದಿತು. ಸಂಪುಟದಲ್ಲಿ ಸಚಿವರಾಗಿದ್ದ ಅರೀಫ್ ಮಹಮದ್ ಖಾನ್, ಅರುಣ್ ನೆಹರು, ವಿ. ಪಿ. ಸಿಂಗ್ ಮೊದಲಾದವರು ರಾಜೀವ್ ವಿರುದ್ಧ ತಿರುಗಿಬಿದ್ದರು ಈ ವಿಚಾರದಲ್ಲಿ.

ರಕ್ಷಣಾ ಇಲಾಖೆಯು ಖರೀದಿಸುವ ಆಯುಧ ಸಾಮಗ್ರಿಗಳಿಗೂ ಭ್ರಷ್ಟಾಚಾರಕ್ಕೂ ಬಹಳ ಹಿಂದಿನಿಂದ ಬಂದ ಒಂದು ಬಗೆಯ ನಂಟು. ಸ್ವಾತಂತ್ರ್ಯಾನಂತರದಲ್ಲಿ ಮೊದಲು ಹೊರಬಿದ್ದ ಪ್ರಕರಣ ಸೇನೆಗೆ ಅಗತ್ಯವಾದ ಜೀಪ್‌ಗಳನ್ನು ಖರೀದಿಸುವುದರಲ್ಲಿ ನಡೆದಿದೆ ಎನ್ನಲಾದ ಹಗರಣ. ಅನಂತರ ನಾನಾಬಗೆಯ ಅವ್ಯವಹಾರಗಳು ರಕ್ಷಣಾ ಸಾಮಗ್ರಿಗಳ ಖರೀದಿಯಲ್ಲಿ ಸಂಭವಿಸಿವೆ. ಸ್ವೀಡನ್ನಿನಿಂದ ಖರೀದಿಸಲಾದ ಬೋಫೋರ್ಸ್ ಫಿರಂಗಿಗಳ ಗುಣಮಟ್ಟದ ಬಗ್ಗೆ ಸಾಕಷ್ಟು ವಿವಾದ ವಿದ್ದರೂ, ಪ್ರಧಾನವಾಗಿ ಹೊರಗೆ ಬಂದದ್ದು ಭ್ರಷ್ಟಾಚಾರ. ಈ ರಕ್ಷಣಾ ಖರೀದಿ ವ್ಯವಹಾರ ಯಾವ ಮಧ್ಯವರ್ತಿಯೂ ಇಲ್ಲದೆ ನೇರವಾಗಿ ಸರಕಾರಗಳ ನಡುವೆ ಆದದ್ದು ಎನ್ನುವುದು ಸರಕಾರದ ನಿಲುವು. ಈ ವ್ಯವಹಾರದಲ್ಲಿ ಫಿರಂಗಿ ತಯಾರಿಸುತ್ತಿದ್ದ ಬೋಫೋರ್ಸ್ ಕಂಪೆನಿಯು ಇಟಲಿಯ ಮಧ್ಯವರ್ತಿ ಯೊಬ್ಬನಿಗೆ ವ್ಯವಹಾರ ಕುದುರಿಸಲು ಕಮೀಶನ್ ನೀಡಿದ್ದು, ಅದರ ಫಲಾನುಭವಿಗಳು ರಾಜೀವ ಗಾಂಧಿ ಕುಟುಂಬದವರು ಎನ್ನುವುದು ಆರೋಪ. ಈ ಇಡೀ ವ್ಯವಹಾರದಲ್ಲಿ ಭ್ರಷ್ಟಾಚಾರದ ಮೊತ್ತ ಸುಮಾರು ೬೪ ಕೋಟಿ ರೂಪಾಯಿಗಳು. ಅಂದಿನ ದಿನಗಳಲ್ಲಿ ಅದೇ ದೊಡ್ಡದು. ಈಗಿನಂತೆ ಸಾವಿರಾರು ಕೋಟಿಗಳ ಅವ್ಯವಹಾರವೇನಲ್ಲ. ಸರಕಾರ ಬೋಫೋರ್ಸ್ ತನಿಖೆಗೆ ಖರ್ಚು ಮಾಡಿದ ಹಣ ೬೪ ಕೋಟಿಗಿಂತ ಎಷ್ಟೋ ಪಟ್ಟು ಅಧಿಕ. ಈಗಲೂ ಈ ಕಳಂಕ ಗಾಂಧಿ ಕುಟುಂಬಕ್ಕೆ ಅಂಟಿಕೊಂಡಿದೆ, ಸಂಬಂಧಪಟ್ಟ ಇಟಾಲಿಯನ್ ಮಧ್ಯಸ್ತಿಕೆದಾರ ತೀರಿಕೊಂಡಾಗ್ಯೂ. ಈ ಇಡೀ ಪ್ರಕರಣ ರಾಜೀವ ಗಾಂಧಿಯ 'ಶುದ್ಧ ಹಸ್ತದ' ಪ್ರತಿರೂಪಕ್ಕೆ ಹತ್ತಿಕೊಂಡ ಕಪ್ಪು ಚುಕ್ಕೆ. ಮುಂದೆ ಚುನಾವಣೆಗಳಲ್ಲಿ ಬೋಫೋರ್ಸ್ ಪ್ರಕರಣ ಪ್ರಮುಖ ಪ್ರಶ್ನೆಯಾಗಿ ಕಾಂಗ್ರೆಸ್ ಪಕ್ಷವನ್ನು ಕಾಡಿತು. ಬೋಫೋರ್ಸ್ ಪ್ರಕರಣ ಪ್ರಧಾನಿ ಹಾಗೂ ರಾಷ್ಟ್ರಪತಿ ಮಧ್ಯೆ ವಿವಾದಗ್ರಸ್ತವಾಗಿ, ರಾಷ್ಟ್ರಪತಿಯವರು ಸಂಪುಟವನ್ನು ವಜಾ ಮಾಡುವವರೆಗೆ ಹೋಗಿತ್ತು. ಆದರೆ ಒದಗಬಹು ದಾಗಿದ್ದ ಸಂವಿಧಾನ ಬಿಕ್ಕಟ್ಟು ದೂರವಾಯಿತು ಹಾಗಾಗದೆ. ಇಡೀ ಬೋಫೋರ್ಸ್ ಪ್ರಕರಣವನ್ನು ಬಯಲಿಗೆ ಎಳೆದದ್ದು 'ಹಿಂದು' ಪತ್ರಿಕೆಯ ಮಾಲೀಕರಲ್ಲಿ ಒಬ್ಬರಾದ ಎನ್. ರಾಮ್ ಅವರು. 'ಹಿಂದು' ಪತ್ರಿಕೆ ಅವರ ವರದಿಯನ್ನು ಪ್ರಕಟಿಸಲು ನಿರಾಕರಿಸಿದಾಗ ಎನ್. ರಾಮ್ 'ಹಿಂದು' ಪತ್ರಿಕೆಗೆ ರಾಜೀನಾಮೆ ನೀಡಿ ಪ್ರತಿಸ್ಪರ್ಧಿ 'ಇಂಡಿಯನ್ ಎಕ್ಸ್‌ಪ್ರೆಸ್' ಪತ್ರಿಕೆಯಲ್ಲಿ ಅದನ್ನು ಪ್ರಕಟಿಸಿದರು. ಬೋಫೋರ್ಸ್ ಪ್ರಕರಣದ ಸಂದರ್ಭದಲ್ಲಿ ಸಂಭವಿಸಿದ ಒಂದು ಪ್ರಸಂಗ ಇದು.



ತಮಿಳುನಾಡಿನ ಶ್ರೀಪೆರಂಬದೂರಿನಲ್ಲಿ ರಾಜೀವ ಗಾಂಧಿ ಸ್ಮಾರಕ

ಶ್ರೀಲಂಕಾದ ತಮಿಳರ ಹೋರಾಟದ ವಿಚಾರದಲ್ಲಿ ರಾಜೀವ ಗಾಂಧಿ ಸರಕಾರ ತಳೆದ ಧೋರಣೆ ಗೊಂದಲಮಯ. ಸ್ವಾತಂತ್ರ್ಯಾನಂತರ ಉದ್ಭವಿಸಿದ

ತಮಿಳರ ಪ್ರಶ್ನೆ ಇಂದಿಗೂ ಪರಿಹಾರವನ್ನು ಕಾಣದೆ ಎರಡೂ ದೇಶಗಳ ನಡುವೆ ಸಂಬಂಧಗಳಲ್ಲಿ ಇರಸುಮುರುಸಾಗಿದೆ. ಮೂಲತಃ ಇದು ಬ್ರಿಟಿಷರು ತಮ್ಮ ಆಡಳಿತ ಕಾಲದಲ್ಲಿ ಹುಟ್ಟುಹಾಕಿದ ಸಮಸ್ಯೆ. ಶ್ರೀಲಂಕಾದಲ್ಲಿ ಇಂಗ್ಲಿಷರು ಸ್ಥಾಪಿಸಿದ ಪ್ಲಾಂಟೇಷನ್ನುಗಳಲ್ಲಿ ದುಡಿಯಲು ಲಕ್ಷಾಂತರ ಮಂದಿ ತಮಿಳು ಕೆಲಸಗಾರರನ್ನು ಶ್ರೀಲಂಕಾದಲ್ಲಿ ನೆಲೆಗೊಳಿಸಿದ್ದರು. ಅದಕ್ಕೂ ಮೊದಲು ಶ್ರೀಲಂಕಾ ತಮಿಳು ಅರಸರ ಆಳ್ವಿಕೆಯಲ್ಲಿದ್ದ ಕಾಲದಲ್ಲಿ ತಮಿಳರು ಬಂದು ನೆಲೆಸಿದ್ದರು ದೇಶದ ಉತ್ತರಭಾಗದಲ್ಲಿ. ೧೯೫೦ರ ದಶಕದಲ್ಲಿ ಭಾರತ – ಶ್ರೀಲಂಕಾ ನಡುವೆ ಒಪ್ಪಂದವಾಗಿ ಶ್ರೀಲಂಕಾ ಸರಕಾರ ನಿಗದಿತ ಸಂಖ್ಯೆಯ ತಮಿಳರಿಗೆ ನಾಗರಿಕತ್ವ ನೀಡಲು ಸಮ್ಮತಿಸಿತು. ಉಳಿದವರು ನಿರಾಶ್ರಿತರಾಗಿ ತಮಿಳುನಾಡಿಗೆ ವಾಪಸ್ಸಾದರು. ಕ್ರಮೇಣ ಶ್ರೀಲಂಕಾ ಸರಕಾರ ತಮಿಳು ಪ್ರಜೆಗಳ ಬಗ್ಗೆ ತೋರಲಾರಂಭಿಸಿದ ತಾರತಮ್ಯ ಮತ್ತು ತಮಿಳು ಭಾಷೆಯನ್ನು ಕಡೆಗಣಿಸಿ ಸಿನ್ಹಾಲ ಭಾಷೆಯನ್ನು ಹೊರಿಸಲು ನಡೆಸಿದ ಪ್ರಯತ್ನಗಳು ತಮಿಳು ಜನಾಂಗದವರಿಂದ ಪ್ರತಿಭಟನೆ ತಂದಿತು. ತೀವ್ರಗೊಂಡ ತಮಿಳರ ಹೋರಾಟವನ್ನು ಬಗ್ಗು ಬಡಿಯಲು ಶ್ರೀಲಂಕಾ ಸರಕಾರ ಅನುಸರಿಸಿದ್ದು ದಬ್ಬಾಳಿಕೆಯ ನೀತಿ. ಕ್ರಮೇಣ ಹೋರಾಟ ಬಲಗೊಂಡಂತೆ ಸೌಮ್ಯವಾದಿ ತಮಿಳರ ಸಂಘಟನೆ ಸರಕಾರದೊಂದಿಗೆ ಸಂಧಾನಕ್ಕಾಗಿ ಹಾತೊರೆಯುತ್ತಿದ್ದರೆ ಉಗ್ರವಾದಿಗಳು ಸಶಸ್ತ್ರ ಸಂಗ್ರಾಮ ನಡೆಸುವ ಹಾದಿತುಳಿದರು. ಪ್ರಭಾಕರನ್ ಎಂಬುವವನ ನೇತೃತ್ವದಲ್ಲಿ ಸ್ಥಾಪನೆಗೊಂಡ ತಮಿಳರ ವಿಮೋಚನಾ ಸಂಸ್ಥೆ 'ಲಿಬರೇಶನ್ ಟೈಗರ್ಸ್ ಆಫ್ ದಿ ತಮಿಳ್ ಈಳಂ' (ಎಲ್‌ಟಿಟಿಇ) – ತಮಿಳರು ಬಹುಸಂಖ್ಯೆಯಲ್ಲಿ ವಾಸವಾಗಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡು ಜಾಫ್ನಾದಲ್ಲಿ ತನ್ನದೇ ಆದ ಸರಕಾರವನ್ನು ಸ್ಥಾಪಿಸಿಕೊಂಡು ಶ್ರೀಲಂಕಾ ಸರಕಾರದ ವಿರುದ್ಧ ಯುದ್ಧವನ್ನೇ ಸಾರಿತು. ಇದರ ಪರಿಣಾಮವಾಗಿ ಶ್ರೀಲಂಕಾದಿಂದ ತಮಿಳುನಾಡಿಗೆ ಲಕ್ಷಾಂತರ ಮಂದಿ ನಿರಾಶ್ರಿತರಾಗಿ ವಲಸೆ ಬಂದರು. ಶ್ರೀಲಂಕಾ ಸರಕಾರ ವಿಮೋಚಿತ ಪ್ರದೇಶಗಳ ಮೇಲೆ ದಿಗ್ಬಂಧನ ಹೊರಿಸಿದಾಗ, ೧೯೮೭ರ ಕಾಲದಲ್ಲಿ ತಮಿಳುನಾಡಿನ ಒತ್ತಡಕ್ಕೆ ಮಣಿದು ಕೇಂದ್ರದಲ್ಲಿ ಅಧಿಕಾರದಲ್ಲಿದ್ದ ರಾಜೀವ ಗಾಂಧಿ ಸರಕಾರ ಆಹಾರ ಸಾಮಗ್ರಿಗಳು ಮತ್ತು ಔಷಧಗಳನ್ನು ಮೀನುಗಾರರ ದೋಣಿ ಬಳಸಿ ಜಾಫ್ನಾಗೆ ರವಾನಿಸಲು ಕ್ರಮ ಕೈಗೊಂಡಿತು. ಶ್ರೀಲಂಕಾದ ನೌಕಾದಳ ಅದಕ್ಕೆ ಅಡ್ಡಿಪಡಿಸಿದ್ದರಿಂದ ವಿಮಾನದಿಂದ ವಸ್ತುಗಳನ್ನು ಉದುರಿಸಲು ಪ್ರಾರಂಭಿಸಿತು. ಈ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಶ್ರೀಲಂಕಾ ಅಧ್ಯಕ್ಷ ಜಯವರ್ಧನೆ ದೆಹಲಿಗೆ ಭೇಟಿ ನೀಡಿ ರಾಜೀವ ಗಾಂಧಿ ಜೊತೆ ಒಂದು ಒಪ್ಪಂದ ಮಾಡಿಕೊಂಡರು. ಈ ಒಪ್ಪಂದದ ಪ್ರಕಾರ ಶ್ರೀಲಂಕಾ ಸರಕಾರ ತಮಿಳರು ಅಧಿಕ ಸಂಖ್ಯೆಯಲ್ಲಿರುವ ಪ್ರದೇಶಗಳನ್ನು ಒಂದು ಪ್ರತ್ಯೇಕ ಪ್ರಾಂತವಾಗಿ ಸಂಘಟಿಸಿ ಸ್ವಾಯತ್ತತೆ ನೀಡಲು ಒಪ್ಪಿಕೊಂಡಿತು. ಎಲ್‌ಟಿಟಿಇ ಸಂಘಟನೆಯು ತನ್ನ ಬಳಿ ಇರುವ ಆಯುಧ ಸಾಮಗ್ರಿಗಳನ್ನು ಸರಕಾರಕ್ಕೆ ಒಪ್ಪಿಸಬೇಕೆಂದೂ ಒಪ್ಪಂದದಲ್ಲಿ ಸೂಚಿಸಲಾಗಿತ್ತು. ಒಪ್ಪಂದ ಮುರಿದು ಬಿದ್ದಲ್ಲಿ ಶ್ರೀಲಂಕಾ ಸರಕಾರ ಕೋರಿದಲ್ಲಿ ಭಾರತ ಸರಕಾರ ನೆರವಾಗಬೇಕು ಎಂದು ಅದರಲ್ಲಿ ನಮೂದಾಗಿತ್ತು. ಈ ಒಪ್ಪಂದಕ್ಕೆ ಮುಖ್ಯವಾಗಿ ಎಲ್‌ಟಿಟಿಇ ಭಾಗಿಯಾಗಿರಲಿಲ್ಲ. ಅದು ಸಹಿ ಹಾಕಿರಲಿಲ್ಲ. ಹಾಗಾಗಿ ಅದು ಶಸ್ತ್ರಾಸ್ತ್ರಗಳನ್ನು ಒಪ್ಪಿಸದೆ ಹೋರಾಟ ಮುಂದುವರಿಸಿತು. ಎರಡು ಸರಕಾರಗಳ ಮಧ್ಯೆ ಆಗಿದ್ದ ಒಪ್ಪಂದ ಮೇಲೇಳದೆ ಮುರಿದುಬಿತ್ತು. ಅನಿವಾರ್ಯವಾಗಿ ಭಾರತ ಸರಕಾರ ಶ್ರೀಲಂಕಾ ಸರಕಾರದ ಕೋರಿಕೆ ಮನ್ನಿಸಿ ಎಲ್‌ಟಿಟಿಇ ವಿರುದ್ಧ ಸೈನಿಕ ಕಾರ್ಯಾಚರಣೆಯಲ್ಲಿ ಪಾಲ್ಗೊಳ್ಳಬೇಕಾಯಿತು ಒಪ್ಪಂದವನ್ನು ಕಾರ್ಯಗತ ಮಾಡಲು. ಇದೊಂದು ಅನಗತ್ಯವಾದ ಫಜೀತಿಯಲ್ಲಿ ಸಿಕ್ಕಿಕೊಂಡಂತಾಯಿತು. ಈ ಮಧ್ಯೆ ಶ್ರೀಲಂಕಾದಲ್ಲಿ ಅಧಿಕಾರ ಬದಲಾಗಿ ಹೊಸ ಸರಕಾರ ಭಾರತದ ಸೇನೆಯನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂದು ಆಗ್ರಹಿಸಿತು. ೧೯೮೯ರ ವೇಳೆಗೆ ಭಾರತ ಸೇನೆ ಪೂರ್ಣವಾಗಿ ಸ್ವದೇಶಕ್ಕೆ ಮರಳಿತು.



ಜಯವರ್ಧನೆ

ಈ ಎಲ್ಲ ಅವಾಂತರಗಳ ಮಧ್ಯೆ ರಾಜೀವ ಗಾಂಧಿ ಶ್ರೀಲಂಕಾಗೆ ಭೇಟಿ ನೀಡಿ ಶ್ರೀಲಂಕಾ ಸೇನೆಯ ಗೌರವ ಸ್ವೀಕರಿಸುತ್ತಿದ್ದಾಗ ಸೈನಿಕನೊಬ್ಬ ಹಲ್ಲೆ ನಡೆಸಲೆತ್ನಿಸಿದ ಪ್ರಕರಣ ರಾಜತಾಂತ್ರಿಕತೆಯಲ್ಲಿ ಸಾಕಷ್ಟು ಗುಲ್ಲೆಬ್ಬಿಸಿತು. ಇದು ಒಂದು ಬಗೆಯ ಎಚ್ಚರಿಕೆ ಸೂಚನೆ. ಮುಂದೆ ಎಲ್‌ಟಿಟಿಇ ಆಕ್ರೋಶಕ್ಕೆ ಗುರಿಯಾಗಿದ್ದ ರಾಜೀವ ಗಾಂಧಿ, ಅದು ರೂಪಿಸಿದ್ದ ಸಂಚಿಗೆ ಆಹುತಿ ಯಾದರು. ೧೯೯೧ರಲ್ಲಿ ಚುನಾವಣಾ ಪ್ರಚಾರಕ್ಕಾಗಿ ತಮಿಳುನಾಡಿಗೆ ಆಗಮಿಸಿದ್ದ ಪ್ರಧಾನಿ ರಾಜೀವ ಗಾಂಧಿ ಎಲ್‌ಟಿಟಿಇ ಆತ್ಮಾಹುತಿ ದಳದ ದಾಳಿಗೆ ಬಲಿಯಾದರು. ತಮಿಳುನಾಡಿನಲ್ಲಿ ಅವರು ಹತ್ಯೆಯಾದ ಶ್ರೀಪೆರಂಬದೂರಿನಲ್ಲಿ ಅವರ ಸ್ಮಾರಕವೊಂದನ್ನು ನಿರ್ಮಿಸಲಾಗಿದೆ.

ಐದು ವರ್ಷದ ಅವಧಿಯನ್ನು ಪೂರ್ಣಗೊಳಿಸಿದ ರಾಜೀವ ಗಾಂಧಿ ತಾಯಿಯಂತೆಯೇ ಹುತಾತ್ಮರಾದರು. ಹೋಲಿಕೆಯಲ್ಲಿ ಇಬ್ಬರೂ ಪ್ರತ್ಯೇಕವಾದಿಗಳಿಂದ ದುರಂತಕ್ಕೀಡಾದರು. ಬೋಫೋರ್ಸ್ ಪ್ರಕರಣಕ್ಕೆ ಮುಂಚೆಯೇ ರಾಜೀವ ಗಾಂಧಿ ಸಂಪುಟದ ಹಿರಿಯ ಸಚಿವ ವಿ. ಪಿ. ಸಿಂಗ್ ಭಿನ್ನಾಭಿಪ್ರಾಯಗಳಿಂದಾಗಿ ರಾಜೀನಾಮೆ ಸಲ್ಲಿಸಿದ್ದರು ೧೯೮೭ರ ಪ್ರಾರಂಭದಲ್ಲಿ. ಇತರ ಕೆಲ ಸಚಿವರೂ ವರ್ಷದ ಕೊನೆಯ ಹೊತ್ತಿಗೆ ರಾಜೀನಾಮೆ ನೀಡಿ ಕಾಂಗ್ರೆಸ್ಸಿನಿಂದ ಹೊರಬಂದು ಜನಮೋರ್ಚಾ ಎಂಬ ಪಕ್ಷವನ್ನು ಸ್ಥಾಪಿಸಿಕೊಂಡಿದ್ದರು. ೧೯೮೯ರಲ್ಲಿ ನಡೆದ ಲೋಕಸಭಾ ಚುನಾವಣೆಗಳಲ್ಲಿ ಕಾಂಗ್ರೆಸ್ ಬಹುಮತ ಪಡೆಯದೇ ಹೋಯಿತು. ಆದರೆ ೧೯೭ ಸ್ಥಾನಗಳನ್ನು ಗಳಿಸಿ ಅತಿದೊಡ್ಡ ಪಕ್ಷವಾಗಿ ಹೊರಹೊಮ್ಮಿತು. ಈ ಚುನಾವಣೆಯಲ್ಲಿ ಹೆಚ್ಚು ಲಾಭವಾದ್ದು ಭಾಜಪಕ್ಕೆ. ೧೯೮೪ರಲ್ಲಿ ಕೇವಲ ೨ ಸ್ಥಾನಗಳನ್ನು ಪಡೆದಿದ್ದ ಪಕ್ಷ ೧೯೮೯ರಲ್ಲಿ ೮೫ ಸ್ಥಾನಗಳನ್ನು ಪಡೆದುಕೊಂಡಿತು. ಪ್ರತಿಪಕ್ಷಗಳ ಜೊತೆ ಮಾಡಿಕೊಂಡ ಹೊಂದಾಣಿಕೆ ಭಾಜಪಗೆ ವರದಾನವಾಯಿತು. ೧೯೮೮ರ ಅಕ್ಟೋಬರ್‌ನಲ್ಲಿ ವಿ. ಪಿ. ಸಿಂಗ್ ಸ್ಥಾಪಿಸಿದ್ದ ಜನಮೋರ್ಚಾ, ಸಂಸ್ಥಾ ಕಾಂಗ್ರೆಸ್, ಜನತಾದಳ ಮತ್ತು ಲೋಕದಳ ಒಂದುಗೂಡಿ ರಾಷ್ಟ್ರೀಯ ರಂಗ ಸ್ಥಾಪಿಸಿಕೊಂಡಿತು. ಎಡಪಕ್ಷಗಳನ್ನೂ ಒಳಗೊಂಡಂತೆ ಇತರ ಪಕ್ಷಗಳ ಜೊತೆ ಹೊಂದಾಣಿಕೆ ಮಾಡಿಕೊಂಡಿತು. ಚುನಾವಣೆಗಳ ಸಮಯದಲ್ಲಿ ೧೪೫ ಸ್ಥಾನಗಳನ್ನು ಪಡೆದುಕೊಂಡ ರಾಷ್ಟ್ರೀಯ ರಂಗ ೮೫ ಸ್ಥಾನ ಹೊಂದಿದ್ದ ಭಾಜಪ ಮತ್ತು ಎಡಪಕ್ಷಗಳ (ಅವು ೫೨ ಸ್ಥಾನಗಳನ್ನು ಪಡೆದಿದ್ದುವು) ಬೆಂಬಲದಿಂದ ಸರಕಾರ ರಚಿಸಲು ಮುಂದಾಯಿತು. ಮುಂದೆ ಎರಡು ವರ್ಷಗಳಲ್ಲೇ



ಪ್ರಭಾಕರನ್

ಮತ್ತೆ ಚುನಾವಣೆಗಳು ಜರುಗಿ ಕಾಂಗ್ರೆಸ್ ಅಧಿಕಾರಕ್ಕೆ ಬಂದಿತು. ೧೯೮೯ರಲ್ಲಿ ಬಹುಮತವಿಲ್ಲದ ಕಾಂಗ್ರೆಸ್ ಸರಕಾರ ರಚಿಸಲು ನಿರಾಕರಿಸಿತ್ತು. ಎರಡು ವರ್ಷಗಳ ಕಾಲ ಅಸ್ಥಿರತೆಯ ನಂತರ ಮತ್ತೆ ಚುನಾವಣೆ ೧೯೯೧ರಲ್ಲಿ.

ಏನೇ ಅವಾಂತರಗಳು ನಡೆದಿದ್ದಾಗ್ಯೂ ರಾಜೀವ ಗಾಂಧಿ ಅಧಿಕಾರಾವಧಿಯಲ್ಲಿ ೧೯೮೫ರಲ್ಲಿ ಅನುಮೋದನೆಯಾದ ಪಕ್ಷಾಂತರ ವಿರೋಧ ಕಾಯಿದೆ ಭಾರತ ರಾಜಕಾರಣದಲ್ಲಿ ಒಂದು ಮೈಲಿಗಲ್ಲು. ಎಲ್ಲ ಪಕ್ಷಗಳ ಸಮ್ಮತಿಯಿಂದ ಅನುಮೋದನೆಯಾದ ಈ ಕಾಯಿದೆ ಬಹುಮಟ್ಟಿಗೆ ಶಾಸಕರ ಖರೀದಿಯನ್ನು ತಡೆಯುವುದರಲ್ಲಿ ಯಶಸ್ವಿಯಾಗಿದೆ ಎಂದು ಹೇಳಬಹುದು. ಮಸೂದೆ ರಾಜಕೀಯ ಪಕ್ಷಗಳಿಗಷ್ಟೇ ಸೀಮಿತವಾಗಿರುವುದರಿಂದ ಸ್ವತಂತ್ರ ಸದಸ್ಯರುಗಳಿಗೆ ಸುಗ್ಗಿ. ಪಕ್ಷವೊಂದರಲ್ಲಿ ಒಡಕುಂಟಾಗಿ ಮೂರನೇ ಒಂದು ಭಾಗ ಸದಸ್ಯರು ಹೊರಬಂದಾಗ ಈ ಕಾಯಿದೆ ಅನ್ವಯವಾಗುವುದಿಲ್ಲ. ಅದಿಲ್ಲದೆ ಒಬ್ಬರು ಇಬ್ಬರು ಸದಸ್ಯರು ಪಕ್ಷಾಂತರ ಮಾಡಿದರೆ ಅವರು ತಮ್ಮ ಸ್ಥಾನ ಕಳೆದುಕೊಂಡು ಮತ್ತೆ ಚುನಾವಣೆ ಎದುರಿಸಬೇಕಾಗುತ್ತದೆ. ಅದೇ ಬಗೆಯಲ್ಲಿ ಸರ್ವ ಸಮ್ಮತಿಯಿಂದ ಅನುಮೋದನೆಯಾದ ಬಳಕೆದಾರರ ಸಂರಕ್ಷಣಾ ಕಾಯಿದೆ ಮತ್ತು ಲೋಕ ಅದಾಲತ್ ಕಾಯಿದೆ ಕೂಡ ಸ್ವಾಗತಾರ್ಹವಾದವು.

ದೇಶದ ಕೈಗಾರಿಕೀಕರಣಕ್ಕೆ ಬುನಾದಿ ನಿರ್ಮಿಸಿದ ಎರಡನೇ ಪಂಚವಾರ್ಷಿಕ ಯೋಜನೆಯಿಂದ ಪ್ರಾರಂಭಗೊಂಡ ನಗರೀಕರಣ ತ್ವರಿತಗತಿಯಿಂದ ಮುಂದುವರಿಯಿತು. ಸರಕಾರೀ ಕ್ಷೇತ್ರದಲ್ಲಿ, ಅಂದರೆ ಸಾರ್ವಜನಿಕ ಒಡೆತನದ ಉದ್ಯಮ ಕ್ಷೇತ್ರದ ಫಲಾನುಭವಿಗಳು ಬಂಡವಾಳಶಾಹಿಗಳು ಮತ್ತು ಶ್ರೀಮಂತರು. ಹಾಗೆಯೇ ಬೃಹತ್ ನೀರಾವರಿ ಯೋಜನೆಗಳ ಪ್ರಯೋಜನ ಪಡೆದುಕೊಂಡವರು ಶ್ರೀಮಂತ ರೈತರು ಮತ್ತು ಭೂಮಾಲಿಕರು. ತೀವ್ರಗತಿಯ ನಗರೀಕರಣದಿಂದ ಹುಟ್ಟಿಕೊಂಡ ಒಂದು ಉದ್ಯಮ ರಿಯಲ್ ಎಸ್ಟೇಟ್ ವಹಿವಾಟು. ಮುಂದೆ ಇದು ಇಪ್ಪತ್ತೊಂದನೆ ಶತಮಾನದ ಹೊತ್ತಿಗೆ ಬೃಹತ್ ಪ್ರಮಾಣದಲ್ಲಿ ಬೆಳೆದು, ಕಪ್ಪು ಹಣ ತೊಡಗಿಸುವುದಕ್ಕೆ, ಪಡೆದುಕೊಳ್ಳುವುದಕ್ಕೆ ಮೂಲವಾಯಿತು. ಭೂಸುಧಾರಣೆಗಳು ಹೋಗಿ ಭೂಕಬಳಿಕೆ ದಂಧೆ ಪ್ರಾರಂಭವಾದ್ದು ಕೂಡ ಈ ಕಾಲಾವಧಿಯಲ್ಲೇ. ರಾಜಧಾನಿ ದೆಹಲಿ, ಮೆಟ್ರೋಪಾಲಿಟನ್ ನಗರಗಳು ಎಂದು ಹೆಸರು ಪಡೆದಿದ್ದ ಮುಂಬಯಿ, ಚೆನ್ನೈ, ಕೊಲ್ಕತ್ತ ನಗರಗಳ ಜೊತೆಗೆ ವೇಗವಾಗಿ ಬೆಳೆದ ನಗರಗಳೆಂದರೆ ದಕ್ಷಿಣ ಭಾರತದಲ್ಲಿ ಹೈದರಾಬಾದ್, ಬೆಂಗಳೂರು, ಕೊಯಮತ್ತೂರು, ವಿಶಾಖಪಟ್ಟಣ ಮೊದಲಾದುವು. ಉತ್ತರಭಾರತದಲ್ಲಿ ಭೋಪಾಲ್, ಗುರಗಾಂವ್, ನಾಯ್ಡಾ ಮುಂತಾದವು. ಮಾಹಿತಿ ತಂತ್ರಜ್ಞಾನ ಉದ್ಯಮ ಪ್ರವೇಶದ ನಂತರ ನಗರೀಕರಣ ಮತ್ತಷ್ಟು ವೇಗಗೊಂಡಿತು. ಈ ಉದ್ಯಮ ಶಿಕ್ಷಣಕ್ಷೇತ್ರದಲ್ಲಿ ಇಂಜಿನಿಯರಿಂಗ್‌ಗೆ ಪ್ರಾಧಾನ್ಯತೆ ಹೆಚ್ಚಿಸಿತಲ್ಲದೆ, ಹೊಸ ಮಧ್ಯಮವರ್ಗವನ್ನೂ ಶ್ರೀಮಂತರನ್ನೂ  ಹುಟ್ಟುಹಾಕಿದ್ದು ಗಮನಾರ್ಹ. ಗಣಕಯಂತ್ರ ಜಗತ್ತು ತಂದ ಬದಲಾವಣೆ, ಅದು ಹುಟ್ಟುಹಾಕಿದ ಅನಿವಾಸಿ ಭಾರತೀಯರ ಪೀಳಿಗೆ ಉಳಿದೆಲ್ಲವನ್ನೂ ಹಿಂದೆಹಾಕಿತು. ಅದಕ್ಕೆ ಮುನ್ನ ಮಧ್ಯಮವರ್ಗಕ್ಕೆ ಆಕರ್ಷಕವೆನಿಸಿದ್ದುದು ಸರಕಾರಿ ನೌಕರಿಯನ್ನು ಬಿಟ್ಟರೆ, ಬ್ಯಾಂಕಿಂಗ್ ಮತ್ತು ಇನ್ಸೂರೆನ್ಸ್ ಉದ್ಯಮ. ಹೊಸ ಆವಿಷ್ಕಾರಗಳು, ತಂತ್ರಜ್ಞಾನದ ಬೆಳವಣಿಗೆ, ಎಲ್ಲಕ್ಕೂ ನುರಿತ, ವಿದ್ಯಾರ್ಹ ಕೆಲಸಗಾರರ ಪಡೆ ಹೆಚ್ಚಿಸಿದುವು. ಬಂಡವಾಳಶಾಹಿ ವ್ಯವಸ್ಥೆ ಬಲಗೊಳ್ಳುತ್ತಿದ್ದಂತೆ ಉದ್ಯಮಪತಿಗಳು, ಉದ್ಯಮಗಳು ಹೆಚ್ಚಿ ಕಾರ್ಪೊರೇಟ್‌ವಲಯ ವಿಸ್ತಾರಗೊಂಡು ಪ್ರಬಲತೆ ಪಡೆಯತೊಡಗಿತು. ಉದ್ಯೋಗಾವಕಾಶಗಳು ಉಂಟಾದರೂ ನಿರುದ್ಯೋಗ ಸಮಸ್ಯೆ ಮಾತ್ರ ಹೆಚ್ಚಿತೇ ಹೊರತು ಕಡಿಮೆಯಾಗಲಿಲ್ಲ. ಜನಸಂಖ್ಯೆಯ ಹೆಚ್ಚಳದ ಜೊತೆಗೆ, ತಂತ್ರಜ್ಞಾನದ ನಾವೀನ್ಯತೆಯೂ ಅದಕ್ಕೆ ಒಂದು ಕಾರಣ. ಈ ಎಲ್ಲ ಬೆಳವಣಿಗೆಗಳು ಬಡವ ಶ್ರೀಮಂತರ ನಡುವೆ ಅಂತರವನ್ನು ಮತ್ತಷ್ಟು ಹೆಚ್ಚಿಸುತ್ತಾ ಹೋದದ್ದರಲ್ಲಿ ಅಚ್ಚರಿಯೇನಿಲ್ಲ. ಜಾಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳದ ಓಲೈಕೆ ಮುಂತಾದವು ತಂದ ಪರಿಸ್ಥಿತಿಯನ್ನು ಮುಂದೆ ಪರಿಶೀಲಿಸೋಣ. ಬೆಂಗಳೂರು ನಗರದ ಜನಸಂಖ್ಯೆ ಬೆಳವಣಿಗೆಯನ್ನು ಗಮನಿಸಿದರೆ ದೇಶದಲ್ಲಿ ಇತರ ಪ್ರಮುಖ ನಗರಗಳ ಪರಿಸ್ಥಿತಿಯನ್ನು ಕಲ್ಪಿಸಿಕೊಳ್ಳಬಹುದು. ಸ್ವಾತಂತ್ರ್ಯಪೂರ್ವದಲ್ಲಿ, ೧೯೪೧ರಲ್ಲಿ  ಬೆಂಗಳೂರಿನ ಸಂಖ್ಯೆ ೪,೦೬,೭೬೦ ಇದ್ದುದು ೧೯೫೧ರ ವೇಳೆಗೆ ೭,೭೮,೯೭೭ ತಲುಪಿತ್ತು. ಮೂವತ್ತುವರ್ಷಗಳಾದ ಮೇಲೆ ೧೯೮೧ರಲ್ಲಿ ೨೪,೭೬,೩೫೫ ಇದ್ದುದು ೨೦೦೧ರ ವೇಳೆಗೆ ದ್ವಿಗುಣಗೊಂಡು ೫೦ ಲಕ್ಷವನ್ನು ಮೀರಿತು. ಮುಂದಿನ ಹತ್ತು ವರ್ಷಗಳಲ್ಲಿ ಅದು ಮತ್ತೆ ಎರಡರಷ್ಟು ಹೆಚ್ಚಿತು. ಇಂಥದೇ ಬೆಳವಣಿಗೆ ಇತರ ಪ್ರಮುಖ ನಗರಗಳಲ್ಲೂ ಸಂಭವಿಸಿದೆ. ಹೊಸ ಬಡಾವಣೆಗಳ ಸೃಷ್ಟಿಯಿಂದ ನಗರಗಳ ವಿಸ್ತೀರ್ಣವೂ ಹೆಚ್ಚಾಗಿದೆ. ಒಂದು ಬಗೆಯಲ್ಲಿ ಹೆಚ್ಚಿದ ನಗರೀಕರಣದ ಈ ಬೆಳವಣಿಗೆ ಅಸಮತೆಯನ್ನೂ ಹುಟ್ಟುಹಾಕಿದೆ.

**(ಮುಂದುವರಿಯುವುದು)**

ಸಿ. ಆರ್. ಕೃಷ್ಣರಾವ್
'ಚೌಬೀನ', ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು–೫೬೦೦೮೫





# ಒಂದು ಚಿಪ್ಪಿನ ಆತ್ಮಕಥೆ

ನನ್ನ ಮೇಲೆ ಸುಳಿದು
ನನ್ನನ್ನು ಕೊರೆದು
ನನ್ನೊಳಗೆ ಇಳಿದು
ನನ್ನದೆಂಬುದೆಲ್ಲವ ಹೀರಿ
ನನ್ನನ್ನು ಸವಿದು
ಬದುಕ ಬರುವ ಬಂದಳಿಕೆ ನೀನು !

ನಿನ್ನ ಸುತ್ತ ಬಳಸಿ
ಪದರ ಪದರವಾಗಿ ವ್ಯೂಹ ರಚಿಸಿ
ನನ್ನ ಉಳಿಸಿಕೊಳ್ಳಲು ನಿನ್ನ ಕಬಳಿಸಿ
ನನ್ನ ಬದುಕಿಸಿಕೊಳ್ಳಲೆತ್ನಿಸುವೆ ನಾನು !

ವ್ಯೂಹ ಬಿಡಿಸಿ
ನನ್ನ ತ್ಯಜಿಸಿ
ಬೆಳಕಿಗೆ ನೀನು ಮೈಯೊಡ್ಡಿದಾಗ
ಮುತ್ತಾಗಿ ಹೊಳೆವೆ
ಎಲ್ಲರ ಸೊತ್ತಾಗುವೆ
ಕಾವ್ಯಕ್ಕೆ ವಸ್ತುವಾಗುವೆ

ನಿನ್ನ ಕೊಲ್ಲಲು ರೊಚ್ಚಿನಲಿ
ನಾನೋ ಬರೀ ಮೂರು ಕಾಸ
ಚಿಪ್ಪಾಗೇ ಉಳಿದೆ !




ಕೆ. ನಲ್ಲತಂಬಿ
ಜಿಎಫ್–೩, ಆರ್. ಕೆ. ಮ್ಯಾನ್ಷನ್, ನಂ. ೧೮, ೭ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ಬನಶಂಕರಿ ೩ನೇ ಹಂತ, ಬೆಂಗಳೂರು – ೮೫



# ಶುಕ್ರನ ಆಗಮನ

**ಕ**ಳೆದ ತಿಂಗಳು ಮುಂಜಾವಿನ ಆಕಾಶದಿಂದ ಮಾಯವಾದ ಶುಕ್ರ ಈ ತಿಂಗಳು ಸಂಜೆಯ ಆಕಾಶದಲ್ಲಿ ಪ್ರತ್ಯಕ್ಷವಾಗಲಿದೆ. ಪಶ್ಚಿಮದಲ್ಲಿ ಅಷ್ಟೇನೂ ನಕ್ಷತ್ರಗಳಿಲ್ಲದ ಭಾಗದಲ್ಲಿ ಈ ಪ್ರಕಾಶಮಾನವಾದ ಚುಕ್ಕೆಯನ್ನು ಗುರುತಿಸುವುದು ಬಹಳ ಸುಲಭ. ಸಂಜೆಗೆಂಪಿನಲ್ಲಿಯೂ ಥಳಗುಟ್ಟುವ ಶುಕ್ರದ ಜೊತೆ ೨೩ರ ಸಂಜೆ ರೇಖಾ ಚಂದ್ರ ಕಾಣುತ್ತದೆ. ಮುಂದಿನ ಎರಡು ದಿನಗಳಲ್ಲಿ ಚಂದ್ರ ಮಂಗಳದ ಪಕ್ಕ ಕಾಣಿಸಿಕೊಳ್ಳುತ್ತದೆ. ಆದರೆ, ಮಂಗಳ ಅಷ್ಟೇನೂ ಪ್ರಕಾಶವಾಗಿಲ್ಲ; ಮಿನುಗದ ಚುಕ್ಕೆ ಎಂದು ಗುರುತಿಸಲು ಪ್ರಯತ್ನಿಸ ಬಹುದು. ಮಂಗಳ ಇರುವುದು ಮಕರರಾಶಿಯಲ್ಲಿ. ಮುಂದೆ ಕುಂಭಕ್ಕೆ ಚಲಿಸುತ್ತದೆ. ಈ ಎರಡೂ ರಾಶಿಗಳಲ್ಲಿ ಪ್ರಕಾಶಮಾನವಾದ ನಕ್ಷತ್ರಗಳಿಲ್ಲ. ಕುಂಭದ ದಕ್ಷಿಣಕ್ಕೆ ಬಕ ಪುಂಜದ ಎರಡು ನಕ್ಷತ್ರಗಳು ಕಾಣುತ್ತವೆ. ಮೀನರಾಶಿಯ ಎರಡು ಮೀನುಗಳನ್ನು ಗುರುತಿಸಲು ನಕುಲ (ಪೆಗಸಸ್) ಪುಂಜದ ಚೌಕವನ್ನು ಬಳಸಬಹುದು. ಇದು ನೆತ್ತಿಯಲ್ಲಿಯೇ (ಸಂಜೆ) ಇರುತ್ತದೆ. ಮುಂದಿನದು ಮೇಷದ ಪುಟ್ಟ ತ್ರಿಕೋಣ; ವೃಷಭದ ಹೈಯಡೆಸ್ ಗುಚ್ಛ. ಪೂರ್ವದ ಅಂಚಿನಲ್ಲಿ ಮಹಾವ್ಯಾಧ (ಒರೈಯನ್) ಉದಯಿಸುತ್ತಿರುತ್ತದೆ. ಉತ್ತರದಲ್ಲಿ ಕುಂತಿ, ಪಾರ್ಥ ಹಾಗೂ ವಿಜಯಸಾರಥಿ ಈ ಪುಂಜಗಳನ್ನು ಗುರುತಿಸ ಬಹುದು. ವಾಯವ್ಯದಲ್ಲಿ ಬೇಸಿಗೆ ತ್ರಿಕೋಣವನ್ನು ರಚಿಸುವ ಗರುಡ, ರಾಜಹಂಸ ಹಾಗೂ ವೀಣಾ ಪುಂಜಗಳನ್ನು ಕಾಣಬಹುದು. ದಕ್ಷಿಣದ ಬಕದ ಎರಡು ನಕ್ಷತ್ರಗಳಲ್ಲದೆ ಇನ್ನೊಂದು ಪ್ರಕಾಶಮಾನವಾದ ನಕ್ಷತ್ರವಿದೆ. ಅದಕ್ಕೆ ವೈತರಣೀ ಮುಖ ಎಂಬ ಹೆಸರನ್ನು ಹಿರಿಯರಾದ ಆರ್. ಎಲ್. ನರಸಿಂಹಯ್ಯನವರು ಸೂಚಿಸಿದ್ದಾರೆ. ಆದರೆ ಹಿಂದೆ ಯಮ ಎಂಬ ಹೆಸರಿತ್ತು ಎಂದು ಹಳೆಯ ಗ್ರಂಥವೊಂದು ಸುಳಿವು ನೀಡುತ್ತದೆ.




ರಾತ್ರಿ ಸುಮಾರು ೧೦ ಗಂಟೆಗೆ ಉದಯಿಸುವ ಗುರುಗ್ರಹ ಸಾಕಷ್ಟು ಪ್ರಕಾಶಮಾನವಾಗಿ ಇರುತ್ತದೆ. ೧೧ರ ರಾತ್ರಿ ಅದರ ಪಕ್ಕ ಚಂದ್ರನನ್ನು ಕಾಣಬಹುದು.

ಬುಧಗ್ರಹ ತಿಂಗಳ ಕೊನೆಗೆ ಸಂಜೆಯ ಆಕಾಶದಲ್ಲಿ ಕಾಣುವುದು. ಕ್ರಮೇಣ ಮೇಲೆ ಏರುವ ಅದು ಶುಕ್ರಗ್ರಹವನ್ನು ಸಮೀಪಿಸುವುದನ್ನೂ ಕಾಣಬಹುದು. ೩೧ರ ಸಂಜೆ ಎರಡೂ ಗ್ರಹಗಳನ್ನು ಗುರುತಿಸಬಹುದು.



ಡಿಸೆಂಬರ್ ೩೧ರ ಸಂಜೆ ಶುಕ್ರ – ಬುಧ ಪಶ್ಚಿಮದಲ್ಲಿ

ಸೂರ್ಯನನ್ನು ಆಚೆ ಬದಿಯಿಂದ ಹಾದುಬಂದ ಶನಿಗ್ರಹ ಮುಂಜಾವಿನಲ್ಲಿ ಕಾಣುವುದು. ೨೦ರಂದು ರೇಖಾಚಂದ್ರದ ಪಕ್ಕದಲ್ಲಿಯೇ ಕಾಣುವುದು.

ಈ ತಿಂಗಳಲ್ಲಿ ೧೨ರಿಂದ ೧೪ರ ಅವಧಿಯ ಮುಂಜಾವಿನಲ್ಲಿ ಉಲ್ಕಾವೃಷ್ಟಿ ಇದೆ. ಇದಕ್ಕೆ ಜೆಮಿನಿಡ್ಸ್ ಎಂದು ಹೆಸರು. ಮಿಥುನರಾಶಿಯಿಂದ ಹೊರಟಂತೆ ಕಾಣುತ್ತವೆ. ಇದಕ್ಕೆ ಮೂಲ ಫೇತಾನ್ ಎಂಬ ಆಕಾಶಕಾಯ. ಇದು ಧೂಮಕೇತುವೋ, ಕ್ಷುದ್ರಗ್ರಹವೋ ಎಂಬ ಜಿಜ್ಞಾಸೆ ಬಹಳ ದಿನದಿಂದ ನಡೆಯುತ್ತಿತ್ತು. ಇದಕ್ಕೆ ಬಾಲವಿಲ್ಲ; ಆದರೆ, ಕಕ್ಷೆ ಧೂಮಕೇತುವಿನದು ಎನ್ನಿಸುತ್ತದೆ. ಈಗ ಇದನ್ನು ಕ್ಷುದ್ರಗ್ರಹ ಎಂದೇ ಪರಿಗಣಿಸಲಾಗಿದೆ. ಸುಮಾರು ಒಂದೂವರೆ ವರ್ಷಕ್ಕೊಮ್ಮೆ ಇದು ಸೂರ್ಯನನ್ನು ಸುತ್ತುತ್ತದೆ. ವರ್ಷದಿಂದ ವರ್ಷಕ್ಕೆ ವೃಷ್ಟಿಯ ಉಲ್ಕೆಗಳ ಸಂಖ್ಯೆ ಹೆಚ್ಚುತ್ತಿದೆ. ಗಂಟೆಗೆ ನೂರಕ್ಕೂ ಹೆಚ್ಚು ಉಲ್ಕೆಗಳು ಬೀಳುತ್ತವೆ. ಇದು ವಿಜ್ಞಾನಿಗಳ ಕುತೂಹಲಕ್ಕೆ ಕಾರಣವಾಗಿದೆ.

ಈ ತಿಂಗಳ ೨೨ರಂದು ಉತ್ತರಾಯಣ. ಸೂರ್ಯ ದಕ್ಷಿಣದ ಮಿತಿಯನ್ನು ಮುಟ್ಟುವ ದಿನ. ಅಂದು ಹಗಲಿನ ಅವಧಿ ಕನಿಷ್ಠವಾಗಿರುತ್ತದೆ.

ದೂರದರ್ಶಕ ಇರುವವರಿಗೆ ಒಂದು ವಿಶೇಷ ಸುದ್ದಿ. ೧ ಮತ್ತು ೨೮ರಂದು ಚಂದ್ರ ಯುರೇನಸ್ ಗ್ರಹವನ್ನು ಆಚ್ಛಾದಿಸಲಿದೆ. ೧ರಂದು ರಾತ್ರಿ ಚಂದ್ರನ ಪಕ್ಕ ೨ ಡಿಗ್ರಿ ಅಂತರದಲ್ಲಿ ಕಾಣುತ್ತದೆ. ೨೮ರಂದು ೬ ಡಿಗ್ರಿ ಅಂತರದಲ್ಲಿರುತ್ತದೆ. ಯುರೇನಸ್ ಗ್ರಹವನ್ನು ಗುರುತಿಸಲು ಇದು ಸದವಕಾಶ.

**ಡಿಸೆಂಬರ್ ತಿಂಗಳ ಖಗೋಳ ದಿನಚರಿ**

೪ ಬುಧ – ಚಂದ್ರರ ಜೋಡಿ.
೬ ರೋಹಿಣಿ – ಚಂದ್ರ ಜೋಡಿ; ಹುಣ್ಣಿಮೆ ೧೭:೩೦ಕ್ಕೆ*
೮ ಬುಧ ಗ್ರಹ ಸೂರ್ಯನೊಡನೆ ಉಚ್ಚ ಯುತಿ
೯ ಗುರುಗ್ರಹದ ಹಿನ್ನಡೆ ಆರಂಭ
೧೨ ಗುರು – ಮಘ ನಡುವೆ ಚಂದ್ರ*
ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ
೧೪ ಚಾಂದ್ರಮಾಸದ ಕೊನೆಯ ಪಾದ; ಚಂದ್ರೋದಯ ನಡುರಾತ್ರಿಗೆ
೧೨ – ೧೪ ಮುಂಜಾವು ಜೆಮಿನಿಡ್ಸ್ ಉಲ್ಕಾವೃಷ್ಟಿ*
೨೦ ಶನಿ – ಚಂದ್ರ ಜೋಡಿ*
೨೨ ಉತ್ತರಾಯಣ; ಅಮಾವಾಸ್ಯೆ
೨೩ ಶುಕ್ರ – ಚಂದ್ರ ಜೋಡಿ*
೨೪ ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
೨೫ ಚಂದ್ರ – ಮಂಗಳ ಜೋಡಿ*
೨೮ ಚಾಂದ್ರಮಾಸದ ಮೊದಲ ಪಾದ
೩೧ ಸಂಜೆ ಶುಕ್ರ – ಬುಧ ಪಶ್ಚಿಮದಲ್ಲಿ

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಆಹಾರ ಭದ್ರತೆಗೆ ಪ್ರತಿಯಾಗಿ ವಿಶ್ವ ವ್ಯಾಪಾರ ಸಂಸ್ಥೆಯ ನಿಲುವು



ಸಿ. ಬಿ. ಪಾಟೀಲ

೨೦೧೩ನೇ ಸಾಲಿನ ಡಿಸೆಂಬರ್ ತಿಂಗಳಲ್ಲಿ ಬಾಲಿಯಲ್ಲಿ ಜರುಗಿದ ವಿಶ್ವ ವ್ಯಾಪಾರ ಸಂಸ್ಥೆಯ ಸಭೆಯಲ್ಲಿ ಚರ್ಚಿತವಾದ ಹಲವು ವಿಷಯಗಳಲ್ಲಿ ತೆಗೆದುಕೊಂಡ ನಿರ್ಣಯಗಳಲ್ಲಿ ಎರಡು ಮಹತ್ವದ ನಿರ್ಣಯಗಳೆಂದರೆ: ೧. ವ್ಯಾಪಾರ ವ್ಯವಹಾರಗಳಿಗೆ ಅನುಕೂಲಕ್ಕೆ ಸಂಬಂಧಿಸಿದ ಒಪ್ಪಂದ; ೨. ಆಹಾರ ಭದ್ರತೆಗೆ ಸಂಬಂಧಿಸಿದ ಸಾರ್ವಜನಿಕ ಸಂಗ್ರಹಣೆ. ಮೊದಲನೆಯದು, ವ್ಯಾಪಾರಕ್ಕೆ ಸಂಬಂಧಿಸಿದ ಆಡಳಿತಾತ್ಮಕ ಅಡೆತಡೆಗಳನ್ನು ಕಡಿಮೆಗೊಳಿಸುವುದಾಗಿದೆ. ಅಂದರೆ, ಅದು ವಾಣಿಜ್ಯ ತೆರಿಗೆಗಳ ನಿರ್ಬಂಧಗಳ ದಾಖಲೀಕರಣ ಮತ್ತು ಪಾರದರ್ಶಕತೆಗಳಿಗೆ ಸಂಬಂಧಿಸಿದ್ದಾಗಿದೆ. ನಂತರದ್ದು ಸಾರ್ವಜನಿಕ ಹಂಚಿಕೆಗಾಗಿ ಆಹಾರ ಧಾನ್ಯಗಳ ಸಂಗ್ರಹಣೆಯನ್ನು ರಾಜ್ಯ ಮೂಲದಿಂದ ಹೇಗೆ ಸಂಗ್ರಹ ಮಾಡುವುದು ಎನ್ನುವುದಾಗಿದೆ.

ವಿಶ್ವದಾದ್ಯಂತ ಮೇಲ್ಕಂಡ ಈ ಎರಡು ವಿಷಯಗಳಿಗೆ ಸಂಬಂಧಿಸಿದಂತೆ ಗಮನ ಹರಿಸಲಾಗುತ್ತಿದೆ. ಆಹಾರ ಭದ್ರತೆಗಾಗಿ ಸಾರ್ವಜನಿಕ ಸಂಗ್ರಹಣೆ ಕುರಿತು ಸಮಸ್ಯೆಯ ಶಾಶ್ವತ ಪರಿಹಾರವಾಗುವವರೆಗೆ ವ್ಯಾಪಾರ ಅನುಕೂಲಕ್ಕೆ ಸಂಬಂಧಿಸಿದ ನಿಬಂಧನೆಗಳ ಒಪ್ಪಂದವನ್ನು ಮುಂದೂಡಲು ಭಾರತ ತನ್ನ ವಾದ ಮಂಡಿಸಿತು. ವ್ಯಾಪಾರ ಒಪ್ಪಂದ ಕುರಿತು ಒಪ್ಪಂದದ ನಿಬಂಧನೆಯ ಗಡುವು ಜುಲೈ ೩೧, ೨೦೧೪ಕ್ಕೆ ಮುಗಿಯುವಾಗಲೂ ಭಾರತ ಹಲವು ಪ್ರಗತಿ ಹೊಂದಿದ ರಾಷ್ಟ್ರಗಳ, ಅದರಲ್ಲೂ ಅಮೆರಿಕಾದ ಒತ್ತಡಕ್ಕೂ ಮಣಿಯದೆ ತನ್ನ ಅಭಿಪ್ರಾಯಕ್ಕೆ ಬದ್ಧವಾಗಿ ಅಂಟಿಕೊಂಡಿತು. ಆಹಾರ ಭದ್ರತೆ ಕುರಿತು ಪರಿಷ್ಕರಣಾ ಉಪಾಯಗಳಿಗಾಗಿ ಅಭಿವೃದ್ಧಿಶೀಲ ರಾಷ್ಟ್ರಗಳು ಬದ್ಧವಾಗಿದ್ದರೂ ಈ ಕುರಿತ ಭಾರತದ ಅಭಿಪ್ರಾಯಕ್ಕೆ ಅಂಗೀಕಾರ ಪಡೆಯುವುದು ಅಷ್ಟು ಸರಳವಾಗಿರಲಿಲ್ಲ. ಕೇವಲ ಕ್ಯೂಬಾ, ಬೊಲಿವಿಯಾ ಮತ್ತು ವೆನಿಜುವೆಲಾ ಮಾತ್ರ ಭಾರತದ ಬೆಂಬಲಕ್ಕೆ ನಿಂತವು. ನಂತರ ವಿಶ್ವ ಸಂಸ್ಥೆಯ ಅಂಗ ಸಂಸ್ಥೆಯಾದ ಒಕ್ಕಲುತನದ ಅಭಿವೃದ್ಧಿಗಾಗಿ ಅಂತರರಾಷ್ಟ್ರೀಯ ನಿಧಿ ಸಂಸ್ಥೆ ಕೂಡ ಭಾರತದ ಬೆಂಬಲಕ್ಕೆ ಧಾವಿಸಿತು. ಜಗತ್ತಿನ ಹಲವಾರು ರಾಷ್ಟ್ರಗಳು ಭಾರತದ ನಿಲುವನ್ನು ಅಸಂಬದ್ಧ ಎಂದು ಟೀಕಿಸಿದವು.

**ಹಸಿವು ಮತ್ತು ಅಪೌಷ್ಟಿಕತೆ**

ಭಾರತವು ಹಸಿವು ಮತ್ತು ಅಪೌಷ್ಟಿಕತೆಯ ವಿಷಯದಲ್ಲಿ ತೀವ್ರ ಸಮಸ್ಯೆಯನ್ನೆದುರಿಸುತ್ತಿದೆ. ಕಳೆದ ಕೆಲವು ದಶಕಗಳ ರಾಷ್ಟ್ರೀಯ ಸಮೀಕ್ಷಾ ವರದಿಯನ್ನು

ಅಪೌಷ್ಟಿಕತೆಯಿಂದಾಗುವ ನೇರ ಪರಿಣಾಮಗಳ ಚಿತ್ರಣಗಳನ್ನು ನೋಡಿದಾಗ ಅದರ ಗಂಭೀರತೆಯು ಕಂಡುಬರುತ್ತದೆ. ಭಾರತದ ಕೌಟುಂಬಿಕ ಆರೋಗ್ಯ ಸಮೀಕ್ಷಾ ವರದಿಯನ್ನು (೨೦೦೫-೨೦೦೬) ನೋಡಿದಾಗ ೩ ವರ್ಷಕ್ಕೆ ಕೆಳಗಿನ ವಯೋಮಾನದ ಶೇ. ೪೦-೪೫ ಮಕ್ಕಳ ಸರಾಸರಿ ತೂಕ ಇರಬೇಕಾದ ಮಟ್ಟದಲ್ಲಿ ಇಲ್ಲವೆಂದು ತಿಳಿದುಬರುತ್ತದೆ. ಮುಂದುವರಿದು, ೬ರಿಂದ ೩೫ ತಿಂಗಳು ಕೆಳಗಿನ ವಯಸ್ಸಿನಲ್ಲಿ ಮಕ್ಕಳಲ್ಲಿ ಶೇ. ೮೦ರಷ್ಟು ಮಕ್ಕಳು ಮತ್ತು ಶೇ. ೫೮ರಷ್ಟು ೧೫ರಿಂದ ೪೯ ವರ್ಷ ವಯೋಮಾನದ ಗರ್ಭಿಣಿ ಸ್ತ್ರೀಯರು ರಕ್ತದ ಕೊರತೆಯಿಂದ ಬಳಲುತ್ತಿರುವುದಾಗಿಯೂ ತಿಳಿದುಬರುತ್ತದೆ. ಹಾಗೆಯೇ ೧೫ರಿಂದ ೪೯ ವರ್ಷದೊಳಗಿನ ೩೩% ಹೆಣ್ಣುಮಕ್ಕಳು ಹಾಗೂ ೨೮% ಪುರುಷರು ಸರಾಸರಿಗಿಂತ ಕಡಿಮೆ ದೇಹ ತೂಕ ಸೂಚ್ಯಂಕ ಹೊಂದಿರುವುದಾಗಿ ತಿಳಿದುಬರುತ್ತದೆ. ಅಪೌಷ್ಟಿಕತೆಯ ದೃಷ್ಟಿಯಿಂದ ಭಾರತದ ಸ್ಥಿತಿ ಉಪ ಸಹರಾ ಆಫ್ರಿಕಾ ದೇಶಗಳಿಗಿಂತಲೂ ಕಡಿಮೆ ಇರುವುದೆಂದು ವರದಿಯಿಂದ ತಿಳಿದುಬರುತ್ತದೆ.

ನೋಡಿದಾಗ ಭಾರತದಲ್ಲಿ ಜನರು ತೆಗೆದುಕೊಳ್ಳುವ ಆಹಾರದಲ್ಲಿನ ಕ್ಯಾಲರಿ ಮತ್ತು ಪೌಷ್ಟಿಕತೆ ನಿಧಾನವಾಗಿ ಇಳಿಮುಖವಾಗುತ್ತಾ ನಡೆದಿರುವುದು ತಿಳಿದು ಬರುತ್ತದೆ. ಗ್ರಾಮೀಣ ಭಾಗದಲ್ಲಿ ಪ್ರತಿಯೊಬ್ಬನೂ ೧೯೮೩ರಲ್ಲಿ ೨೨೨೧ ಕ್ಯಾಲರಿ ಗುಣಮಟ್ಟದ ಆಹಾರ ಸೇವಿಸುತ್ತಿದ್ದರೆ ೨೦೦೯-೧೦ರಲ್ಲಿ ೨೦೨೦ ಕ್ಯಾಲರಿ ಗುಣಮಟ್ಟದ ಆಹಾರ ಸೇವಿಸುತ್ತಿದ್ದಾನೆ. ಇದೇ ಅವಧಿಯಲ್ಲಿ ಪ್ರತಿಯೊಬ್ಬನೂ ತೆಗೆದುಕೊಳ್ಳುವ ಆಹಾರವು ೬೨ ಗ್ರಾಂನಿಂದ ೫೫ ಗ್ರಾಂಗೆ ಇಳಿದಿದೆ. ಅದೇ ರೀತಿ ನಗರ ಪ್ರದೇಶದಲ್ಲಿ ೧೯೮೩ರಲ್ಲಿ ೨೦೮೯ ಕ್ಯಾಲರಿ ಆಹಾರ ಸೇವಿಸುತ್ತಿದ್ದವರು ೨೦೦೯-೧೦ರಲ್ಲಿ ೧೯೪೬ ಕ್ಯಾಲರಿ ಸರಾಸರಿ ಆಹಾರ ಸೇವನೆ ಮಾಡುವ ಕುರಿತು ತಿಳಿದುಬಂದಿದೆ. ಹೀಗಾಗಿ ದೇಶದಲ್ಲಿ ಬಹುಸಂಖ್ಯಾತರು ಅಪೌಷ್ಟಿಕತೆ ಯಿಂದ ಬಳಲುತ್ತಿರುವುದಾಗಿ ತಿಳಿದುಬಂದಿದೆ.

ಅಪೌಷ್ಟಿಕತೆಯಿಂದಾಗುವ ನೇರ ಪರಿಣಾಮಗಳ ಚಿತ್ರಣಗಳನ್ನು ನೋಡಿದಾಗ ಅದರ ಗಂಭೀರತೆಯು ಕಂಡುಬರುತ್ತದೆ. ಭಾರತದ ಕೌಟುಂಬಿಕ ಆರೋಗ್ಯ ಸಮೀಕ್ಷಾ ವರದಿಯನ್ನು (೨೦೦೫-೨೦೦೬) ನೋಡಿದಾಗ ೩ ವರ್ಷಕ್ಕೆ ಕೆಳಗಿನ ವಯೋಮಾನದ ಶೇ. ೪೦-೪೫ ಮಕ್ಕಳ ಸರಾಸರಿ ತೂಕ ಇರಬೇಕಾದ ಮಟ್ಟದಲ್ಲಿ ಇಲ್ಲವೆಂದು ತಿಳಿದುಬರುತ್ತದೆ. ಮುಂದುವರಿದು, ೬ರಿಂದ ೩೫ ತಿಂಗಳ ಕೆಳಗಿನ ವಯಸ್ಸಿನ ಮಕ್ಕಳಲ್ಲಿ ಶೇ. ೮೦ರಷ್ಟು ಮಕ್ಕಳು ಮತ್ತು ಶೇ. ೫೮ರಷ್ಟು ೧೫ರಿಂದ ೪೯ ವರ್ಷ ವಯೋಮಾನದ ಗರ್ಭಿಣಿ ಸ್ತ್ರೀಯರು ರಕ್ತದ ಕೊರತೆಯಿಂದ ಬಳಲುತ್ತಿರುವುದಾಗಿ ತಿಳಿದುಬರುತ್ತದೆ. ಹಾಗೆಯೇ ೧೫ರಿಂದ ೪೯ ವರ್ಷದೊಳಗಿನ ೩೩% ಹೆಣ್ಣುಮಕ್ಕಳು ಹಾಗೂ ೨೮% ಪುರುಷರು ಸರಾಸರಿಗಿಂತ ಕಡಿಮೆ ದೇಹ ತೂಕ ಸೂಚ್ಯಂಕ ಹೊಂದಿರುವುದಾಗಿ ತಿಳಿದುಬರುತ್ತದೆ. ಅಪೌಷ್ಟಿಕತೆಯ ದೃಷ್ಟಿಯಿಂದ ಭಾರತದ ಸ್ಥಿತಿ ಉಪ ಸಹರಾ ಆಫ್ರಿಕಾ




ದೇಶಗಳಿಗಿಂತಲೂ ಕಡಿಮೆ ಇರುವುದೆಂದು ವರದಿಯಿಂದ ತಿಳಿದುಬರುತ್ತದೆ.

**ಆಹಾರ ಭದ್ರತೆಯೆಂಬ ಹಸುವಿಗೆ ವ್ಯಾಪಾರವೆಂಬ ವ್ಯಾಘ್ರದ ಮುಖಾಮುಖಿ**

ಮೇಲ್ಕಂಡಂತೆ ಹಸಿವು ಮತ್ತು ಅಪೌಷ್ಟಿಕತೆಯ ಹಿನ್ನೆಲೆಯಲ್ಲಿ ಭಾರತವು ಆಹಾರ ಭದ್ರತೆಗೆ ಪ್ರಥಮ ಪ್ರಾಶಸ್ತ್ಯ ನೀಡುವುದು ಸಹಜವಾಗಿದೆ. ಹಸಿವು ಮತ್ತು ಅಪೌಷ್ಟಿಕತೆಯ ಕುರಿತ ಸಮಸ್ಯೆ ನಿವಾರಣೆಗೆ ಸಾರ್ವಜನಿಕ ವಿತರಣೆ ಪದ್ಧತಿಯೊಂದೇ ಕೀಲಿಕೈ ಎನ್ನಲು ಅಭ್ಯಂತರವಿಲ್ಲ. ಸಾರ್ವಜನಿಕ ಹಂಚಿಕೆ ಪದ್ಧತಿಯು ರೈತರಿಂದ ಸಂಗ್ರಹಿಸಿದ ಆಹಾರ ಧಾನ್ಯಗಳ ಸಾಗಣೆ ಮತ್ತು ಅವುಗಳನ್ನು ಶೇಖರಿಸಿಡುವ ಗೋದಾಮುಗಳಲ್ಲಿ ಸೂಕ್ತ ರಕ್ಷಣೆ ಹಾಗೂ ಗ್ರಾಹಕರ ಕೈಗೆ ನ್ಯಾಯಯುತವಾಗಿ ಸೇರಬೇಕಾದ ಏನೆಲ್ಲ ಅಂಶಗಳನ್ನೂ ಒಳಗೊಂಡಿರುತ್ತದೆ. ಆಹಾರ ಧಾನ್ಯ ಸಂಗ್ರಹಣೆಯ ಸಂದರ್ಭದಲ್ಲಿ ರೈತರಿಗೆ ನಿಗದಿಪಡಿಸಲಾದ ಕನಿಷ್ಠ ಬೆಂಬಲ ಬೆಲೆಯನ್ನು ನಿಗದಿಪಡಿಸಲಾಗಿರುತ್ತದೆ. ಇದು ಸಾಮಾನ್ಯವಾಗಿ ಮುಕ್ತ ಮಾರುಕಟ್ಟೆ ಬೆಲೆಗಿಂತಲೂ ಹೆಚ್ಚಾಗಿರುತ್ತದೆ. ಹಾಗೆಯೇ ಗ್ರಾಹಕರಿಂದ ಆಹಾರ ಧಾನ್ಯ ಹಂಚಿಕೆಗೆ ಪ್ರತಿಯಾಗಿ ಪಡೆಯುವ ಬೆಲೆಗೆ – ಬಿಡುಗಡೆ ಬೆಲೆ ಎಂದು ಕರೆಯುವರು. ಇದು ಮಾರುಕಟ್ಟೆ ಬೆಲೆಗಿಂತ ಕಡಿಮೆ ಇರುತ್ತದೆ.

ಸಾರ್ವಜನಿಕ ವಿತರಣಾ ಪದ್ಧತಿ ಎಂದರೆ ಮತ್ತೇನಲ್ಲ ಅದು ರೈತ ಮತ್ತು ಗ್ರಾಹಕರಿಬ್ಬರಿಗೂ ಸೋಡಿ ನೀಡುವುದಾಗಿದೆ, ಅಷ್ಟೆ. ಒಟ್ಟು ಶೇ. ೨೦ರಷ್ಟು ಸೋಡಿಯನ್ನು ಎಲ್ಲ ಆಹಾರ ಧಾನ್ಯಗಳ ಮೇಲೂ ನೀಡಿ ಬಡ ರೈತರಿಗೆ ಆದಾಯ ಬೆಂಬಲ ವನ್ನೊದಗಿಸುವ ಗುರಿ ಈ ಯೋಜನೆಯದು. ಹಸಿವು ಮತ್ತು ಅಪೌಷ್ಟಿಕತೆಯ ವಿಸ್ತೃತ ಸಮಸ್ಯೆಯ ಕುರಿತು ಜನರಿಗೆ ತಿಳಿವಳಿಕೆ ನೀಡಿ ಅವಶ್ಯಕ ಆಹಾರ ಧಾನ್ಯಗಳನ್ನು ಗ್ರಾಹಕರಿಗೆ ಸೋಡಿ ಮತ್ತು ಸಹ್ಯ ಬೆಲೆಯಲ್ಲಿ ಸಾಕಷ್ಟು ದೊರೆಯುವ ಹಾಗೆ ಮಾಡಿ ಸಾಮಾನ್ಯರಲ್ಲಿ ಉಪಭೋಗ ಹೆಚ್ಚಿಸಬೇಕಾದ ಅನಿವಾರ್ಯತೆಯಿದೆ.

ವಿಶ್ವ ವ್ಯಾಪಾರ ಸಂಸ್ಥೆಯ ಒಪ್ಪಂದಗಳಿಗೆ ಭಾರತ ಮತ್ತು ಸದಸ್ಯ ರಾಷ್ಟ್ರಗಳು ಕಟ್ಟುಬಿದ್ದಿದ್ದವು. ವಿಶ್ವ ವ್ಯಾಪಾರ ಸಂಸ್ಥೆಯ ಒಪ್ಪಂದದಲ್ಲಿ ಕೃಷಿ ಒಪ್ಪಂದಕ್ಕೆ ಸಂಬಂಧಿಸಿದ ಅಧಿನಿಯಮ – ೬ಕ್ಕೆ ಸಂಬಂಧಿಸಿದಂತೆ ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆ ನೀಡುವುದನ್ನು ಮಿತಿಗೊಳಿಸಲಾಗಿದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಕೃಷಿ ಉತ್ಪನ್ನಗಳಿಗೆ ಶೇ. ೧೦ಕ್ಕಿಂತ ಅಂದರೆ, "ಕನಿಷ್ಠ ಬೆಂಬಲ"ಕ್ಕಿಂತ ಹೆಚ್ಚಿಗೆ ಕೊಡಕೂಡದೆಂದು ಒಪ್ಪಲಾಗಿತ್ತು. ಭಾರತದಲ್ಲಿ ಸಾರ್ವಜನಿಕ ಹಂಚಿಕೆ ಯೋಜನೆಯಲ್ಲಿ ಕನಿಷ್ಠ ಬೆಂಬಲ ಬೆಲೆ ಮತ್ತು ಆಹಾರ ಧಾನ್ಯಗಳ

## ಎಂ. ಮೋಹನ ಶೆಟ್ಟಿಗೆ ನಮನ



ಕಳೆದ ತಿಂಗಳು ಅಕ್ಟೋಬರ್ ೨೫ರಂದು ಹಿರಿಯ ಪತ್ರಕರ್ತ ಎಂ. ಮೋಹನ್ ಶೆಟ್ಟಿಯವರು ತಮ್ಮ ೮೮ನೆಯ ವಯಸ್ಸಿನಲ್ಲಿ ನಿಧನರಾದರೆಂದು ಪ್ರಕಟಿಸಲು ವಿಷಾದಿಸುತ್ತೇವೆ. ಶ್ರೀಯುತರು 'ಹೊಸತು' ಪತ್ರಿಕೆಯ ಓದುಗರು, ಹಿತೈಷಿಗಳು ಆಗಿದ್ದರು. ಅವರಿಗೆ 'ಹೊಸತು' ನಮನ ಸಲ್ಲಿಸುತ್ತದೆ.

ಆ ದಿನಗಳ ಎಲ್ಲ ಯುವಕರಂತೆ ಸ್ವಾತಂತ್ರ್ಯ ಹೋರಾಟದಿಂದ ಪ್ರೇರಿತರಾದ ಮೋಹನ ಶೆಟ್ಟಿ ರಾಮ ಮನೋಹರ ಲೋಹಿಯ ವಿಚಾರಧಾರೆಯ ಪ್ರಭಾವಕ್ಕೆ ಒಳಗಾಗಿ ಸೋಷಿಯಲಿಸ್ಟ್ ಪಾರ್ಟಿಯ ಸದಸ್ಯರಾಗಿ, ಕಾರ್ಯಕರ್ತರಾಗಿದ್ದರು. ಆ ಪಕ್ಷದ ವಿಚಾರದಲ್ಲಿ ಭ್ರಮನಿರಸನಗೊಂಡ ಅವರು ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರಾದರು. ಮೂಲತಃ ಮಂಗಳೂರಿನವರಾದ ಶೆಟ್ಟರು ಕೆಲಕಾಲ ಮಂಗಳೂರಿನ ಪ್ರಭಾತ್ ಬುಕ್ ಹೌಸ್‌ನ ಮ್ಯಾನೇಜರ್ ಆಗಿದ್ದರು. ಈ ಪುಸ್ತಕದ ಮಳಿಗೆ ಸೋವಿಯತ್ ಒಕ್ಕೂಟದಿಂದ ಪ್ರಕಟವಾಗಿದ್ದ ಪುಸ್ತಕಗಳನ್ನು ಮತ್ತು ಮಾರ್ಕ್ಸ್‌ವಾದಿ ಸಾಹಿತ್ಯವನ್ನು ವಿತರಿಸುತ್ತಿತ್ತು. ಕಮ್ಯುನಿಸ್ಟ್ ಪಾರ್ಟಿಯಲ್ಲಿ ಒಡಕುಂಟಾದ ಮೇಲೆ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಾರ್ಟಿಗೆ ಹೋದ ಅವರು ಸ್ವಲ್ಪಕಾಲ ಅದರ ಮುಖಪತ್ರ 'ಐಕ್ಯರಂಗ'ಕ್ಕೆ ಸಂಪಾದಕರಾಗಿದ್ದರು. ಮತ್ತೆ ಭಾರತ ಕಮ್ಯುನಿಸ್ಟ್ ಪಾರ್ಟಿಗೆ ಮರಳಿದ ಮೋಹನ ಶೆಟ್ಟಿ ನವಕರ್ನಾಟಕ ಪ್ರಕಾಶನ ಸಂಸ್ಥೆಯಲ್ಲಿ ಸಂಪಾದಕರಾಗಿದ್ದರು. ಅನಂತರ ಅವರು ಸೋವಿಯತ್ ವಾರ್ತಾ ಸಂಸ್ಥೆ ಪ್ರಕಟಿಸುತ್ತಿದ್ದ 'ಸೋವಿಯತ್ ದೇಶ' ಹಾಗೂ 'ಸೋವಿಯತ್ ಸಮೀಕ್ಷೆ' ನಿಯತಕಾಲಿಕೆಗಳ ಸಂಪಾದಕರಾಗಿ ಕೆಲಸ ಮಾಡಿದರು. ಎಲ್ಲ ಪ್ರಗತಿಪರ ಜನಪರ ಚಳವಳಿಗಳಲ್ಲಿ ಭಾಗವಹಿಸುತ್ತಿದ್ದ ಅವರು ನಿವೃತ್ತರಾದ ಮೇಲೆ ಬೆಂಗಳೂರಿನಲ್ಲಿ ನೆಲೆಸಿದ್ದರು.

ಸಾರ್ವಜನಿಕ ಸಂಗ್ರಹಣೆಗೆ ಒತ್ತುನೀಡಲಾಗಿದೆ. ಇನ್ನು ಕೆಲ ವರ್ಷಗಳಲ್ಲಿ ಭಾರತದಲ್ಲಿ ಕೃಷಿ ಉತ್ಪನ್ನಗಳಿಗೆ ಶೇ. ೧೦ಕ್ಕಿಂತಲೂ ಹೆಚ್ಚಿಗೆ ಬೆಂಬಲ ಬೆಲೆ ನೀಡುವ ಸಾಧ್ಯತೆಯಿದೆ. ಕೃಷಿ ಒಪ್ಪಂದವನ್ನು ಭಾರತವು ವಿರೋಧಿಸಿದರೆ ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯ ರಾಷ್ಟ್ರಗಳಿಂದ ಕಾನೂನು ಪ್ರಕ್ರಿಯೆಗೊಳಗಾಗಬೇಕಾಗುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ – ವ್ಯಾಪಾರ ಮತ್ತು ಆಹಾರ ಭದ್ರತೆ ಎರಡೂ ಭಾರತ ದೇಶಕ್ಕೆ ಸಂಬಂಧಿಸಿದಂತೆ, ಒಂದಕ್ಕೊಂದು ವಿರೋಧಿ ಪ್ರಕ್ರಿಯೆಗಳಾಗಿವೆ. ಒತ್ತಡಕ್ಕೆ ಸಿಲುಕಿ ಭಾರತ ಸಾರ್ವಜನಿಕ ಹಂಚಿಕೆ ಪದ್ಧತಿಗೆ ಬದ್ಧವಾಗಲೇಬೇಕಾದ ಮತ್ತು ಮುಂದುವರಿಸಲೇಬೇಕಾದ ಅನಿವಾರ್ಯತೆಯಿದೆ. ಇದು ಸಂಗ್ರಹಣೆ ಮತ್ತು ಆಹಾರ ಧಾನ್ಯಗಳ ಸಾರ್ವಜನಿಕ ಸಂಗ್ರಹಣೆಯನ್ನೊಳಗೊಂಡಿದೆ. ಇನ್ನೊಂದೆಡೆ ವಿಶ್ವ ವ್ಯಾಪಾರ ಸಂಸ್ಥೆ ಸದಸ್ಯ ರಾಷ್ಟ್ರಗಳು ಸಬ್ಸಿಡಿಗೆ ಸಂಬಂಧಿಸಿದ ವಿಷಯದಲ್ಲಿ ಭಾರತದ ವಿಷಯದಲ್ಲಿ ಬಿಗಿ ನಿಲುವು ತೆಗೆದುಕೊಳ್ಳುತ್ತವೆ.

**ಉಪೇಕ್ಷಿಸಲ್ಪಟ್ಟ (ಮರೆಮಾಚಲಾದ) ಪರಿಹಾರ ಸಾಧ್ಯತೆ**

ಬಾಲಿಯಲ್ಲಿ ಕೃಷಿಗೆ ಸಂಬಂಧಿಸಿದ ಚರ್ಚೆಯಲ್ಲಿ ವ್ಯಾಪಾರ ಮತ್ತು ಆಹಾರ ಭದ್ರತೆಗೆ ಸಂಬಂಧಿಸಿದ ವಿಷಯದ ಚರ್ಚೆ ಬಹಳ ತಾರಕಕ್ಕೇರಿತ್ತು. ಇಲ್ಲಿ ಎರಡು ಪರಿಹಾರಗಳುಂಟು. ಮೊದಲನೆಯದು, ನವೆಂಬರ್ ೨೦೧೨ರಲ್ಲಿ ಜಿ – ೩೩ ರಾಷ್ಟ್ರಗಳಿಂದ ಮಂಡಿಸಲಾದ ಪ್ರಸ್ತಾವನೆ. ಈ ಪ್ರಸ್ತಾವನೆಯು ಕೃಷಿ ಒಪ್ಪಂದಗಳ ತಿದ್ದುಪಡಿಗೆ ಸಂಬಂಧಿಸಿದ್ದಾಗಿದೆ. ಅಲ್ಲದೆ, ರೈತ ಸಮುದಾಯಕ್ಕೆ ಬೆಂಬಲವಾಗಿ (ಆಹಾರ ಧಾನ್ಯ ಸಂಗ್ರಹಕ್ಕೆ ಸಂಬಂಧಿಸಿದಂತೆ) ಹಾಗೂ ರೈತರಿಗೆ ನೀಡುವ ಸಬ್ಸಿಡಿಯ ಮಿತಿಯನ್ನು ತೆಗೆದುಹಾಕಲು ಸೂಚಿಸಿತು.

ಎರಡನೆಯ ಪರಿಹಾರವು ಭಾರತವು ಬಾಲಿ ಸಮ್ಮೇಳನದಲ್ಲಿ ಸಭೆಗೆ ನಿವೇದಿಸಿದುದಾಗಿತ್ತು. ಅದೇನೆಂದರೆ ವಿಶ್ವ ವ್ಯಾಪಾರ ಸಂಸ್ಥೆ ಸಬ್ಸಿಡಿಗಾಗಿ ೧೯೮೬–೮೮ರ ಬೆಲೆ ಸೂಚ್ಯಂಕಕ್ಕೆ ಅಂಟಿಕೊಂಡು ಅದೇ ಲೆಕ್ಕಾಚಾರಕ್ಕೆ ಅಂಟಿಕೊಂಡಿದೆ; ಅದನ್ನು ಭಾರತ ಮತ್ತು ಸಹಮತ ರಾಷ್ಟ್ರಗಳು ಸಾಂದರ್ಭಿಕ ಬೆಲೆಯಾನುಸಾರ ಮಾತ್ರ ಸಬ್ಸಿಡಿ ಲೆಕ್ಕಾಚಾರಕ್ಕೆ ಅಂಟಿಕೊಳ್ಳಲು ಬದಲಾಯಿಸುವಂತೆ ತಿಳಿಸುತ್ತಿದ್ದವು. ಹೀಗಾಗಿ ವಿಶ್ವ ವ್ಯಾಪಾರ ಸಂಸ್ಥೆ ಅಸಂಬದ್ಧ ಲೆಕ್ಕಾಚಾರಕ್ಕೆ ಕಟ್ಟುಬೀಳದೆ ೧೯೮೬–೮೮ರಿಂದ ಇಲ್ಲಿಯವರೆಗೆ ಹಲವಾರು ಪಟ್ಟು ಬೆಲೆಯೇರಿಕೆಯಾಗಿರುವುದರಿಂದ ಪ್ರಸ್ತುತ ಬೆಲೆ ಸೂಚ್ಯಂಕವನ್ನು ಗಣನೆಗೆ ತೆಗೆದುಕೊಳ್ಳಲು ಭಾರತ ನಿವೇದಿಸಿತು. ಪ್ರಸ್ತುತ ಸಾಂದರ್ಭಿಕ ಬೆಲೆ ಪಟ್ಟಿ ಉಪಯೋಗಿಸಲು ಮತ್ತು ಲೆಕ್ಕಾಚಾರ ಪರಿಗಣಿಸಲು ಒತ್ತು ನೀಡಿತು. ಅಭಿವೃದ್ಧಿಶೀಲ ದೇಶಗಳ ಈ ಎರಡು ಪರಿಹಾರಗಳನ್ನು ವಿಶ್ವ ವ್ಯಾಪಾರ ಸಂಸ್ಥೆಯಲ್ಲಿರುವ ಬಲಾಢ್ಯ ರಾಷ್ಟ್ರಗಳು ಮರೆಮಾಡಲು, ತಳ್ಳಿಹಾಕಲು ಯತ್ನಿಸುತ್ತಿದ್ದವು. ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ತಮ್ಮ ಸ್ವಾರ್ಥ ವ್ಯಾವಹಾರಿಕ ಅನುಕೂಲಗಳಿಗಾಗಿ ಹಾತೊರೆಯುತ್ತಿದ್ದವು. ಮಾತುಕತೆಯಲ್ಲಿ ಸಾರ್ವಜನಿಕ ಸಂಗ್ರಹಣೆಗೆ ಒತ್ತು ನೀಡಲು ಭಾರತ ಮತ್ತು ಬೆಂಬಲಿಗ ರಾಷ್ಟ್ರಗಳು ಕಟ್ಟುಬಿದ್ದವು. ಮುಂದೆ ನಾಲ್ಕು ವರ್ಷಗಳ ನಂತರ ಬರುವ ೧೧ನೇ ಮಂತ್ರಿಮಟ್ಟದ ಸಮ್ಮೇಳನದಲ್ಲಿ ಸಾರ್ವಜನಿಕ ಸಂಗ್ರಹಕ್ಕೆ ಮಹತ್ವ ನೀಡಲು ಮತ್ತು ವ್ಯಾಪಾರ ಶಿಷ್ಟಾಚಾರಕ್ಕೆ ಮಹತ್ವ ನೀಡಲು ಹಾಗೂ ಅದನ್ನು ಅನುಸರಿಸಿ ಅಂತಿಮ ಪರಿಹಾರ ಸಾಧ್ಯತೆ ಕುರಿತು ಚರ್ಚಿಸಲಾಯಿತು. ಕೇವಲ ವ್ಯಾಪಾರ ದೃಷ್ಟಿಯ ಅನುಕೂಲಕ್ಕೆ ಒಪ್ಪಿಕೊಳ್ಳಲು ಭಾರತ ತನ್ನ ಒಪ್ಪಿಗೆಯನ್ನು ಸೂಚಿಸಲಿಲ್ಲ.

ಈ ಹಿನ್ನೆಲೆಯಲ್ಲಿ ಭಾರತ ಮತ್ತು ಬೆಂಬಲಿತ ರಾಷ್ಟ್ರಗಳು ತಮ್ಮ ದೇಶದಲ್ಲಿರುವ ಹಸಿವು ಹಾಗೂ ಅಪೌಷ್ಟಿಕತೆಗೆ ಸಂಬಂಧಿಸಿದ ನೈಜ ಕಾಳಜಿಯನ್ನು ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯ ರಾಷ್ಟ್ರಗಳಿಗೆ ಮನವರಿಕೆ ಮಾಡಿಕೊಡಲು ಹಾಗೂ ಹಾಗೆ ವರ್ತಿಸುವಂತೆ ನಿರ್ಧಾರಕ್ಕೆ ಬಂದವು. ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯ ರಾಷ್ಟ್ರಗಳಿಗೆ ಒಂದು ಪ್ರಮುಖ ಮತ್ತು ನೈಜ ಅಂಜಿಕೆಯೇನೆಂದರೆ, ಭಾರತವು ತನ್ನಲ್ಲಿರುವ ಬೃಹತ್ ಆಹಾರ ಧಾನ್ಯ ಸಂಗ್ರಹವನ್ನು ವಿಶ್ವ ಮಾರುಕಟ್ಟೆಗೆ ಬಿಡುಗಡೆಗೊಳಿಸಿ ಆಹಾರ ಧಾನ್ಯ ಬೆಲೆಯನ್ನು ಪಾತಾಳಕ್ಕೊಯ್ಯುವುದೆಂಬುದಾಗಿತ್ತು. ಭಾರತವು ಆಹಾರ ಧಾನ್ಯದ ದೊಡ್ಡ ಸಂಗ್ರಹವನ್ನೇ ಹೊಂದಿರುವುದರಿಂದ ಹಾಗೂ ಇದನ್ನು 'ಕೆಲಸಕ್ಕೆ ಕಾಳು' ಕಾರ್ಯಕ್ರಮದಡಿ ಹಂಚುವುದರಿಂದ ಆಹಾರ ಸಬ್ಸಿಡಿ ಬಿಲ್ಲು ಹೆಚ್ಚಳವಾಗುವ ಅಂಜಿಕೆಯಿರುವುದು ಸದಸ್ಯ ರಾಷ್ಟ್ರಗಳ ಒಳಗುದಿಯಾಗಿತ್ತು. ತನ್ನ ನಾಗರಿಕರಿಗೆ ಪೌಷ್ಟಿಕ ಅವಶ್ಯಕತೆಗೆ ಸಂಬಂಧಿಸಿದಂತೆ ಸ್ಥಳೀಯ ಮಾರುಕಟ್ಟೆಗೆ ಮಾತ್ರ ಆಹಾರ ಧಾನ್ಯ ಬಿಡುಗಡೆ ಮಾಡುವುದು ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯ ರಾಷ್ಟ್ರಗಳ ಬೇಗುದಿಯಾಗಿದೆ.



**ಹಣಕ್ಕಾಗಿ ಆಹಾರ (ಕ್ಯಾಷ್ ಫ್ಲಾರ್ ಫುಡ್)**

ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯ ರಾಷ್ಟ್ರಗಳಲ್ಲಿ ಭಾರತದ ಕಾಳಜಿಯ ಬಗ್ಗೆ ಹಲವು ವರದಿಗಾರರು ಸಹಮತ ಹೊಂದಿದ್ದರು. ಈಗ ಪ್ರಚಲಿತದಲ್ಲಿರುವ ಕೂಲಿಗಾಗಿ ಕಾಳು ಬದಲಾಗಿ ಹಣಕ್ಕಾಗಿ ಶ್ರಮ ನೀತಿಯನ್ನು ಅಳವಡಿಸಿಕೊಳ್ಳಲು ಪ್ರಸ್ತಾವವೊಂದನ್ನು ಮಂಡಿಸಲಾಯಿತು. ಇದು ಕೃಷಿಕರಿಗೆ ನೀಡುವ ಸಬ್ಸಿಡಿ ಹಾಗೂ ವಿಶ್ವ ವ್ಯಾಪಾರ ಸಂಸ್ಥೆ ಎದುರಿಸುತ್ತಿರುವ ಸಮಸ್ಯೆ ಎರಡನ್ನೂ ಏಕಕಾಲಕ್ಕೆ ಪರಿಹರಿಸುವುದೆಂದು ತಿಳಿಸಲಾಯಿತು. ಸಾರ್ವಜನಿಕ ಹಂಚಿಕೆ ಪದ್ಧತಿಯಲ್ಲಿ ಧಾನ್ಯ ಹಂಚಿಕೆಯ ಪದ್ಧತಿಯ ಬದಲಾಗಿ ಹಣವನ್ನೇ ನೇರವಾಗಿ ಹಂಚುವ ಕುರಿತು ಸಮರ್ಥನೆ ಮಾಡಲಾಯಿತು. ಹೀಗೆ ಮಾಡುವುದರಿಂದ ಯೋಜನೆಯಲ್ಲಿ ಇರುವ ಹಲವಾರು ಲೋಪದೋಷಗಳು ಮತ್ತು ರೈತರು ನೀಡಬೇಕಾಗುವ ಲಂಚವನ್ನು ನಿವಾರಿಸಬಹುದೆಂದು ತಿಳಿಸಲಾಯಿತು. ಒಟ್ಟಿನಲ್ಲಿ ಸಾರ್ವಜನಿಕ ವಿತರಣಾ ಪದ್ಧತಿಯನ್ನು ಕೈಬಿಡಲು ಚರ್ಚಿಸಲಾಯಿತು. ಈ ವಾದಗಳು ಸಮಸ್ಯಾತ್ಮಕವೆಂದುದು ಎರಡು ರೀತಿಯಲ್ಲಿ ಮಂಡಿಸಲಾಯಿತು. ಸಾರ್ವಜನಿಕ ವಿತರಣಾ ವ್ಯವಸ್ಥೆಯು ಹಲವಾರು ವರ್ಷಗಳಿಂದ ಚಾಲ್ತಿಯಲ್ಲಿರುವುದರಿಂದ ಅದೇ ಪರಿಣಾಮಕಾರಿಯಾಗಿದೆ ಎಂಬುದು ಒಂದು ವಿಚಾರವಾದರೆ, ಇನ್ನೊಂದು, ರಾಜ್ಯದಿಂದ ರಾಜ್ಯಕ್ಕೆ ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿ ಹಲವಾರು ಏರುಪೇರುಗಳಿರುವುದರಿಂದ ಅದನ್ನೇ ಮೇಲೆನ್ನಲಾಯಿತು. ಇದಕ್ಕೆ ಉದಾಹರಣೆಯಾಗಿ ಹಿಮಾಚಲ ಪ್ರದೇಶ, ಕೇರಳ, ತಮಿಳುನಾಡು, ಉತ್ತರಾಂಚಲ ಹಾಗೂ ಛತ್ತೀಸಗಡಗಳ ಸಾಧನೆಯನ್ನು ನೋಡಬಹುದು. ಈ ಹಿನ್ನೆಲೆಯಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಕೈ ಬಿಡುವುದನ್ನು ಅತಾರ್ಕಿಕವೆನ್ನಲಾಯಿತು. ಇದನ್ನು ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯ ಶ್ರೀಮಂತ ರಾಷ್ಟ್ರಗಳು ಅಭಿವೃದ್ಧಿಹೊಂದುತ್ತಿರುವ ರಾಷ್ಟ್ರಗಳ ರೈತಾಪಿಗಳ ಜೀವನವನ್ನು ಕಸಿಯುವ ಹಿಂಬಾಗಿಲ ಪ್ರಯತ್ನವೆಂದೂ ವಿವರಿಸಲಾಯಿತು.

ಭಾರತವು ತನ್ನ ಅಭಿಪ್ರಾಯದೊಂದಿಗೆ ವಿಶ್ವ ವ್ಯಾಪಾರ ಸಂಸ್ಥೆಯಲ್ಲಿ ಸದಸ್ಯ ರಾಷ್ಟ್ರವಾಗಿ ಮುಂದುವರಿಯಲು ಹಾಗೂ ವ್ಯಾಪಾರದ ದೃಷ್ಟಿಯಿಂದ ಅನುಕೂಲಕ್ಕಾಗಿರುವ ಶಿಷ್ಟಾಚಾರಕ್ಕೆ ಶಾಶ್ವತ ಪರಿಹಾರ ಕಂಡುಕೊಳ್ಳುವ ದಿಸೆಯಲ್ಲಿ ಯೋಚಿಸುವಂತೆ ತಿಳಿಸಲಾಯಿತು. ಹಾಗೆಯೇ ಆಹಾರ ಧಾನ್ಯಾಧಾರಿತವಾದ ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ತೆಗೆದುಹಾಕುವ ನಿಟ್ಟಿನಲ್ಲಿ ವಿಚಾರ ಮಾಡಲು ಮತ್ತು ಪ್ರಯತ್ನಿಸಲು ತಿಳಿಸಿ 'ಕಾಳಿಗೆ ಬದಲು ಹಣ' ಪದ್ಧತಿಯನ್ನು ಬಲಪಡಿಸಲು ಪ್ರಯತ್ನ ಮುಂದುವರಿಸುವಂತೆ ವಿಶ್ವ ವ್ಯಾಪಾರ ಸಂಸ್ಥೆಯ ರಾಷ್ಟ್ರಗಳು ನಿರ್ದೇಶನ ನೀಡಿದವು. ಇದೆಲ್ಲಾ ಈವರೆಗಿನ ವಿದ್ಯಮಾನಗಳು. ಈಚೆಗೆ ವಿಶ್ವ ವ್ಯಾಪಾರ ಸಂಸ್ಥೆಯು ಭಾರತದ ನಿಲುವನ್ನು ಅಂಗೀಕರಿಸಿದೆ.


ಸಿ. ಬಿ. ಪಾಟೀಲ

ಪ್ಲಾಟ್ ನಂ. ೮೬, ಆಕೃತಿ ಕಾಲೋನಿ, ಸೋಲಾಪುರ ರಸ್ತೆ, ವಿಜಯಪುರ – ೫೮೬ ೧೦೩

ಸಂಪರ್ಕಗಳಿರಲಿಲ್ಲ. ಸಾರಿಗೆ ವ್ಯವಸ್ಥೆಯೂ ಕನಿಷ್ಠ ಮಟ್ಟದಲ್ಲಿತ್ತು. ಹೀಗಾಗಿ ವಿಶ್ವದ ಅನೇಕ ಜನಾಂಗಗಳು ತಮ್ಮ ಪಾಡಿಗೆ ತಾವು ತಮಗೆ ಲಭ್ಯವಿದ್ದ ವೃತ್ತಿಗಳನ್ನು ಅವಲಂಬಿಸಿದರು. ಇಂದು ಈ ಜಾತಿಯೇ ದುರಂತಕ್ಕೆ ಕಾರಣವಾಗಿದೆ. ಇದೊಂದು ಶಾಪವಾಗಿದೆ. ಸೋಜಿಗದ ಸಂಗತಿ ಎಂದರೆ ಇಪ್ಪತ್ತೊಂದನೆಯ ಶತಮಾನದಲ್ಲಿದ್ದ ನಾವು, ಚಂದ್ರಲೋಕ, ಮಂಗಳ ಗ್ರಹಗಳಲ್ಲಿ ಕಾಲೂರಿ ಅವನ್ನು ಮಾನವರ ವಸತಿಗೆ ಸಜ್ಜುಗೊಳಿಸಬೇಕೆಂಬ ಮನೋದಾರ್ಢ್ಯ ಹೊಂದಿದ್ದರೂ ಈ ಕ್ಷುಲ್ಲಕ ಭಾವನೆಯಿಂದ ಮುಕ್ತರಾಗಿಲ್ಲ. ಇಂದು ನಾವು ಆಂಗ್ಲಭಾಷೆಯ ರಿಲಿಜನ್ ಹಾಗೂ ಕ್ಲಿಷ್ಟಪದಗಳು ವಿವರಿಸುವಂತೆ, ಯಾವುದೇ ಜಾತಿ, ಧರ್ಮ, ಭಾಷೆ, ಲಿಂಗಭೇದ ಭಾವನೆಗಳನ್ನು ಬದಿಗಿರಿಸಿ, ಬದುಕಿಗಾಗಿ ವೃತ್ತಿಜೀವನಕ್ಕೆ ಮೊರೆಹೋಗಿದ್ದೇವೆ. ಹೀಗಾಗಿ ಇಂದಿನ ದಿನಗಳಲ್ಲಿ ವೃತ್ತಿಯೇ ಒಂದು ಜಾತಿ ಸ್ವರೂಪವನ್ನು ಪಡೆದಿರುವುದನ್ನು ನಾವು ಗಮನಿಸಿಲ್ಲ. ಹೀಗಾಗಿ ಹಿಂದೆ ಪುರಾಣಗಳಲ್ಲಿ ಅಥವಾ ಧರ್ಮದಲ್ಲಿ ಹೇಳಲಾದ ವರ್ಣವ್ಯವಸ್ಥೆ ಅಥವಾ ಜಾತಿವ್ಯವಸ್ಥೆ ತಮ್ಮ ಔಚಿತ್ಯವನ್ನು ಕಳೆದುಕೊಂಡಿವೆ. ಇದನ್ನು ಅರಿತೇ ನಮ್ಮ ಸಂವಿಧಾನದಲ್ಲಿ ನಾವು ಜಾತ್ಯತೀತ ಪದ್ಧತಿಯನ್ನು ಅಳವಡಿಸಿಕೊಂಡಿದ್ದೇವೆ. ಇಂದು ಜಾತಿ ಎಂದರೆ ನಮ್ಮ ಉದ್ಯೋಗಗಳು.



# ಜಾತಿ – ಒಂದು ವಿವೇಚನೆ

**ಭಾ**ರತ ಒಂದು ಪುರಾತನ ದೇಶ. ಮಾನವ ಜನಾಂಗದ ಸಂಸ್ಕೃತಿಯ ನೆಲೆಯಾಗಿ ಮೆರೆದ ದೇಶಗಳಲ್ಲಿ ಭಾರತವೂ ಒಂದು. ಜಾತಿ ಹೇಗೆ ನುಸುಳಿ ಬಂತು ಎಂದು ನಿಖರವಾಗಿ ಗುರುತಿಸಲಾಗದೇ ಹೋದರೂ ಅದೊಂದು ಅನಿಷ್ಟ ವ್ಯವಸ್ಥೆಯಾಗಿ, ಅನೇಕ ಕಷ್ಟನಷ್ಟಗಳ ಅವಹೇಳನಕ್ಕೆ ಅವಕಾಶ ನೀಡಿರುವುದು ಸ್ಪಷ್ಟ. ಒಂದಾನೊಂದು ಕಾಲದಲ್ಲಿ ಸಮಾಜದ ನಿಯಂತ್ರಣಕ್ಕೆಂದೇ ಜಾರಿಗೆ ಬಂದ ಕುಟುಂಬ ವ್ಯವಸ್ಥೆ, ರಾಜ್ಯ ವ್ಯವಸ್ಥೆಯಂತೆ ವೃತ್ತಿಯೂ ಜಾರಿಗೆ ಬಂತು ಎಂದೇ ಹಲವು ವಿದ್ವಾಂಸರ ಹೇಳಿಕೆ. ಉದ್ಯೋಗಂ ಪುರುಷ ಲಕ್ಷಣಂ ಎಂದಾಗ ಮಾನವರ ಬದುಕಿಗೆ ಉದ್ಯೋಗ ಬೇಕು. ಅದು ಹೆಣ್ಣು ಹಾಗೂ ಗಂಡಿಗೂ ಅನಿವಾರ್ಯ. ಸಮಾಜ ಅನೇಕ ಸಮೂಹ ಮತ್ತು ಸಂಘಟನೆಗಳಿಂದ ಕೂಡಿದ್ದು, ಇವನ್ನು ನಿಯಂತ್ರಿಸಲು ಹಲವಾರು ವ್ಯವಸ್ಥೆಗಳು ಜಾರಿಗೆ ಬಂದವು.

ಈ ಒಂದು ಸಾಮಾನ್ಯ ಅಥವಾ ಸಾಧಾರಣ ಹಿನ್ನೆಲೆಯಲ್ಲಿ ವಿವೇಚನೆ ಮಾಡಿದರೆ ನಮ್ಮ ಇಂದಿನ ದ್ವೇಷ, ಅಸೂಯೆ, ನಿಂದನೆ ಒಬ್ಬರ ಮೇಲೊಬ್ಬರು ಕಿರಿಚಾಡುವ, ಕೆಸರನ್ನು ಎರಚುವ ಅನೇಕ ವಿಕೃತ ಭಾವನೆಗಳಿಗೆ ಪರಿಹಾರ ದೊರೆತು ಪ್ರಕೃತಿ ಸಹಜವಾದ ಶಾಂತಿಯುತ ಸುಖಜೀವನ ನಡೆಸಬಹುದೇನೋ. ಪ್ರಕೃತಿ, ಪ್ರಾಣಿಗಳಲ್ಲಿ ಕಂಡುಬರುವ ಜಾತಿ ಎಂದರೆ ಹೆಣ್ಣು ಮತ್ತು ಗಂಡು. ಇದನ್ನು ಜಾತಿ ಪದದಿಂದ ಕರೆಯಬಹುದೇ ಎಂಬುದನ್ನು ಆಲೋಚಿಸಬೇಕು.

ಒಂದು ವಿಷಯವನ್ನು ನಾವು ಮನವರಿಕೆ ಮಾಡಿಕೊಳ್ಳಲೇಬೇಕು. ಬುದ್ಧ, ಅಶೋಕ, ಬಸವ ಮುಂತಾದ ಅನೇಕ ಮಹನೀಯರು ಈ ಅನಿಷ್ಟ ಪದ್ಧತಿಯ ವಿರುದ್ಧ ಹೋರಾಡಿದರು. ಆದರೂ ನಾವು ನಮ್ಮ ಜೀವನಶೈಲಿಯನ್ನು ಅಧಿಕವಾಗಿ ಬದಲಾಯಿಸಿಕೊಳ್ಳಲಿಲ್ಲ. ಆದರೆ ಆಂಗ್ಲರ ಸಂಪರ್ಕ ಹಾಗೂ ಅವರ ಶಿಕ್ಷಣ ಪದ್ಧತಿಯು ನಮ್ಮ ಜೀವನಶೈಲಿಯಲ್ಲಿ ಅಗಾಧವಾದ ಪರಿವರ್ತನೆಗಳನ್ನು ಉಂಟುಮಾಡಿತು.

ಜಾತಿ ಒಂದು ವೃತ್ತಿವಾಚಕ. ಈ ಒಂದು ಸತ್ಯಸಂಗತಿಯನ್ನು ಮರೆಮಾಚಿ ಅದನ್ನು ಹಿಗ್ಗಾ–ಮುಗ್ಗಾ ಎಳೆದಾಡಿ ನಮ್ಮ ಅವಸಾನಕ್ಕೆ ನಾವೇ ಕಾರಣೀಭೂತರಾದೆವು; ಏಕೆಂದರೆ ದೇಶದ ವಿಕಾಸಕ್ಕೆ ಅದು ಅಡ್ಡಿಯಾಗಿದೆ. ಒಂದಾನೊಂದು ಕಾಲದಲ್ಲಿ ಅಂದರೆ ಔದ್ಯೋಗೀಕರಣ ಹಾಗೂ ಆಧುನೀಕರಣಕ್ಕೆ ಮುಂಚೆ ವಿಶ್ವದಲ್ಲಿ ಬೇಸಾಯವೇ ಜೀವನಕ್ಕೆ ಪ್ರಮುಖ ವೃತ್ತಿ. ದೇಶಗಳ ನಡುವೆ ನಿಕಟ

ವಸ್ತುಸ್ಥಿತಿ ಹೀಗಿದ್ದರೂ, ರಾಜಕಾರಣಿಗಳು, ಪಟ್ಟಭದ್ರ ಹಿತಾಸಕ್ತಿಗಳು, ಲಾಭಕೋರರು, ಜಾತಿ, ಧರ್ಮಗಳ ಹೆಸರಿನಲ್ಲಿ ನಮ್ಮನ್ನು ಬಲಿಪಶುಗಳನ್ನಾಗಿ ಮಾಡಿರುವುದು ಖಂಡನೀಯ. ಇದು ಮನಸ್ಸಿಗೆ ನೋವನ್ನುಂಟುಮಾಡುವ ಸಂಗತಿ. ಏಕೆಂದರೆ ಜಗತ್ತಿನ ಯಾವ ಧರ್ಮ ಹಾಗೂ ಜಾತಿಗಳೂ ಹಿಂಸೆ, ದ್ವೇಷ, ಅಸೂಯೆ ಮುಂತಾದ ವಿಷಯಗಳನ್ನು ಬೋಧಿಸಿಲ್ಲ.

ಮಾನವ ಮೂಲತಃ ಶಾಂತಿಯುತ ಬದುಕನ್ನೇ ಅರಸಿಕೊಂಡು ಬಂದ ಜೀವಿ. ಹೀಗಾಗಿ ವಿಶ್ವದ ವಿವಿಧ ಭಾಗಗಳಲ್ಲಿ ನೆಲೆಸಿರುವ ಮಾನವರು ತಮ್ಮ ತಮ್ಮ ಭೌಗೋಳಿಕ, ಸಾಮಾಜಿಕ ಹಾಗೂ ಆರ್ಥಿಕ ಪರಿಸ್ಥಿತಿಗಳಿಗೆ ಅನುಗುಣವಾಗಿ ತಮ್ಮ ಬದುಕಿನ ಮಾರ್ಗವನ್ನು ಕಂಡುಕೊಂಡು ತಮ್ಮದೇ ಆದ ಜೀವನಶೈಲಿಯನ್ನು ನಿರ್ಮಿಸಿಕೊಂಡಿದ್ದಾರೆ. ಆದರೆ ನಾವು ಮನವರಿಕೆ ಮಾಡಿಕೊಳ್ಳಲೇಬೇಕಾದ ವಿಷಯ ಎಂದರೆ ಸಮಾಜದಲ್ಲಿರಬಹುದಾದ ಅಸಮಾನತೆ. ಸಮಾಜ ವಿವಿಧ ಆಸಕ್ತಿ, ಆಕಾಂಕ್ಷೆಗಳಿಂದ ಕೂಡಿದ ಮಾನವರ ಸಮೂಹ. ಮೇಲುನೋಟಕ್ಕೆ ಮಾನವರೆಲ್ಲರೂ ಸರಿಸಮಾನರು ಎಂದೆಲ್ಲಾ ಹೇಳಿದರೂ ಸಾಮರ್ಥ್ಯ, ಬುದ್ಧಿ ಮುಂತಾದ ಗುಣಗಳಲ್ಲಿ ವಿಭಿನ್ನರಾಗಿದ್ದಾರೆ. ಈ ವಿಭಿನ್ನತೆಯನ್ನು ತೊಲಗಿಸುವಲ್ಲಿ ನಮ್ಮ ಜ್ಞಾನ–ವಿಜ್ಞಾನಗಳು ಎಡವಿ ಮುಗ್ಗರಿಸಿವೆ. ಮಾನವ ಕಲ್ಯಾಣವನ್ನೇ ಮರೆತು, ಮಾನವರ ವಿನಾಶಕ್ಕೆ ನಾಂದಿಯಾಗಿರುವ ವಿಜ್ಞಾನ, ನಾವೆಲ್ಲರೂ ಮಾನವರು ಒಂದೇ ಎಂದು ಅರುಹದೇ ಇರುವ ಜ್ಞಾನಗಳಿಂದ ಯಾವ ಪ್ರಯೋಜನವೂ ಆಗಿಲ್ಲ. ಈ ನಿಟ್ಟಿನಲ್ಲಿ ರಾಜ್ಯಗಳೂ ಧರ್ಮಗಳೂ ವಿಫಲವಾಗಿವೆ ಎಂದು ಹೇಳಲೇಬೇಕಾಗಿದೆ.

ಒಂದೆಡೆ ಜಾತ್ಯತೀತತೆಯನ್ನು ಪ್ರತಿಪಾದಿಸುವವರೇ ತಮ್ಮ ಲಾಭಕ್ಕಾಗಿ ಮೀಸಲಾತಿ ಪದ್ಧತಿಯನ್ನು ದುರುಪಯೋಗಪಡಿಸಿಕೊಂಡು 'ಮತಬ್ಯಾಂಕ್' ಜಾತಿಯನ್ನು ಸೃಷ್ಟಿಸಿರುವುದು ಸರಿಯೇ ? ವಿಶ್ವದ ಮಟ್ಟದಲ್ಲಿ ಅಭಿವೃದ್ಧಿ ಹೊಂದಿದ ಅಭಿವೃದ್ಧಿಶೀಲ, ಮೂರನೇ ವಿಶ್ವದವರು ಎಂಬ ನಾನಾ ಭೇದಗಳಿಂದ ಮುಂದವರಿಯುತ್ತಲೇ ಹೋದರೆ, ವಿಶ್ವಶಾಂತಿ ಒಂದು ಮರೀಚಿಕೆಯಾಗುವುದರಲ್ಲಿ ಸಂದೇಹವೇ ಇಲ್ಲ.

**ಪ್ರೊ॥ ಎಂ. ಧ್ರುವನಾರಾಯಣ**

# ೧೦/೨, ೧೩ನೇ 'ಎ' ಅಡ್ಡರಸ್ತೆ, ೨ನೇ ಬ್ಲಾಕ್, ಜಯನಗರ ಬೆಂಗಳೂರು – ೫೬೦ ೦೧೧

# ಸುಧಾರಣೆಯ ಸೋಗಿನಲ್ಲಿ
# ಕಾರ್ಮಿಕ ಹಕ್ಕುಗಳ ಮೇಲೆ ದಾಳಿ

**"ಮೇಕ್ ಇನ್ ಇಂಡಿಯ" – ಸುಲಿಗೆಗೆ ಕರೆ**

– ೨೦೧೪, ಆಗಸ್ಟ್ ೧೫ರಂದು ಪ್ರಧಾನ ಮಂತ್ರಿ ನರೇಂದ್ರ ಮೋದಿ ಮಾಡಿದ ಭಾಷಣ ಮತ್ತು ಆ ಸಂದರ್ಭದಲ್ಲಿ "ಬನ್ನಿ, ಭಾರತದಲ್ಲಿ ಉತ್ಪಾದಿಸಿ" ಎಂಬ ಕರೆ ಅದರ ಅಂತರಾರ್ಥ ತಿಳಿದ ಬಂಡವಳಿಗರಿಗೆ ಮತ್ತು ಆ ಕರೆಯ ಭೀಕರ ಪರಿಣಾಮಗಳನ್ನು ಅರಿಯದ ಜನಗಳಿಗೆ ಕರ್ಣಾನಂದವಾಗಿದ್ದರೆ, "ಮೇಕ್ ಇನ್ ಇಂಡಿಯ" ಕರೆ ಈ ದೇಶದ ಕಾರ್ಮಿಕ ಹಾಗೂ ರೈತ ವರ್ಗಕ್ಕೆ ತರಲಿರುವ ದುಷ್ಪರಿಣಾಮಗಳ ಬಗ್ಗೆ ವಿಶ್ಲೇಷಿಸಿದಾಗ ಅಂದು ಮೋದಿ ಮಾಡಿದ ಭಾಷಣ ದೇಶದ ಸ್ವಾತಂತ್ರ್ಯಹರಣಕ್ಕೆ ಕೊಟ್ಟ ಕರೆ ಎಂಬುದು ಮನದಟ್ಟಾಗುತ್ತದೆ. ಸ್ವಾತಂತ್ರ್ಯದ ದಿನದಂದು ದೆಹಲಿಯ ಕೆಂಪುಕೋಟೆಯಿಂದ ವಿದೇಶಿ ಬಂಡವಳಿಗರಿಗೆ ಭಾರತವನ್ನು ಮತ್ತೆ ಸುಲಿಗೆ ಮಾಡಲು ಮೋದಿ ನೀಡಿದ ಆಹ್ವಾನ ಬ್ರಿಟಿಷ್ ಸಾಮ್ರಾಜ್ಯಶಾಹಿಗಳ ವಿರುದ್ಧ ತಮ್ಮ ಜೀವವನ್ನೇ ಮುಡುಪಿಟ್ಟು ತಮ್ಮ ಸರ್ವಸ್ವವನ್ನೂ ಸಮರ್ಪಿಸಿ "ಬ್ರಿಟಿಷರೇ ಭಾರತವನ್ನು ಬಿಟ್ಟು ತೊಲಗಿ" ಎಂದು ಘರ್ಜಿಸಿ ಹೋರಾಡಿದ ಕ್ರಾಂತಿಕಾರಿ ಸ್ವಾತಂತ್ರ್ಯ ಸೇನಾನಿಗಳಿಗೆ ಮಾಡಿದ ಘೋರ ಅಪಮಾನ ಮತ್ತು ಸ್ವಾತಂತ್ರ್ಯದ ಹಿರಿಮೆಗೆ ಮಾಡಿದ ಅಪಚಾರ. ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ದಾಸ್ಯದ ಸಂಕೋಲೆಯನ್ನು ಕಿತ್ತೆಸೆದು ೧೯೪೭ರಲ್ಲಿ ಸ್ವಾತಂತ್ರ್ಯವನ್ನು ಗಳಿಸಿದ ಭಾರತ ಬಯಸಿದ್ದು ಸರ್ವಸ್ವತಂತ್ರ, ಸಾರ್ವಭೌಮ, ಪ್ರಜಾಪ್ರಭುತ್ವವಾದಿ, ಸಮಾಜವಾದಿ, ಧರ್ಮನಿರಪೇಕ್ಷ ಗಣರಾಜ್ಯವನ್ನು. ಈ ದೇಶದ ಸಂಪತ್ತನ್ನು ೩೦೦ ವರ್ಷ ಅವ್ಯಾಹತವಾಗಿ ಸಾಮ್ರಾಜ್ಯಶಾಹಿಗಳು ಕೊಳ್ಳೆ ಹೊಡೆದ ದಾರುಣ ಚರಿತ್ರೆಯನ್ನು ಓದಿದಲ್ಲಿ ಅದು ಈ ಪೀಳಿಗೆಯ ಬುದ್ಧಿವಂತ ಯುವ ಜನತೆಯನ್ನು ನಾಚಿಕೆಯಿಂದ ತಲೆ ತಗ್ಗಿಸುವಂತೆ ಮಾಡುತ್ತದೆ, ಬಂಡವಾಳಶಾಹಿಯ ವರ್ಗಗುಣವನ್ನು ಬಯಲು ಮಾಡುತ್ತದೆ. ಮತ್ತು ಸ್ವಾತಂತ್ರ್ಯದ ನಿಜವಾದ ಮೌಲ್ಯಗಳನ್ನು ಪರಿಚಯಿಸುತ್ತದೆ. ಆದರೆ ಈ ದೇಶದಲ್ಲಿ ಮರುಕಳಿಸುತ್ತಿರುವ ದುರಂತವೆಂದರೆ ಈ ಭೀಕರ ಸುಲಿಗೆಯ ವಾಸ್ತವತೆಯನ್ನು ತಿಳಿದೊ ಅಥವಾ ತಿಳಿಯದೆಯೊ ದೇಶದ ಪ್ರಧಾನ ಮಂತ್ರಿ ತಾನು ಪ್ರಧಾನ ಸೇವಕನೆಂದು ಹೇಳಿಕೊಂಡು ಸ್ವಾತಂತ್ರ್ಯದ ದಿನದಂದೇ ಭಾರತವನ್ನು ಮತ್ತೆ ಸುಲಿಗೆಗೆ ಒಡ್ಡಲು ಪ್ರಪಂಚದ ಎಲ್ಲ ಸುಲಿಗೆಕೋರರನ್ನೂ ಏಕಕಾಲಕ್ಕೆ ಈ ದೇಶಕ್ಕೆ ಆಹ್ವಾನಿಸಿರುವುದು. ಈಗ ಮೋದಿ ಭಾರತದ ಬಂಡವಳಿಗರ ಪ್ರಧಾನ ಸೇವಕ ಮಾತ್ರವಲ್ಲ, ಇಡೀ ವಿಶ್ವದ ಎಲ್ಲ ಬಂಡವಳಿಗರ ಪ್ರಧಾನ ಸೇವಕ, ಎಚ್ಚರವಿರಲಿ !

**ಭಾರತ – ವಿದೇಶಿ ಬಂಡವಾಳಕ್ಕೆ ಫಲವತ್ತಾದ ಪ್ರದೇಶ**

– ೧೨೦ ಕೋಟಿ ಜನಸಂಖ್ಯೆಯ ಭಾರತದ ಮಾರುಕಟ್ಟೆ, ಇಲ್ಲಿಯ ಅಗಾಧ ಮಾನವ ಸಂಪನ್ಮೂಲ, ಬಡತನ, ರೋಗ, ನಿರುದ್ಯೋಗ ಇವೇ ವಿದೇಶಿ ಬಂಡವಳಿಗರಿಗೆ ಈ ದೇಶದಲ್ಲಿ ಬಂಡವಾಳ

**"ಮೇಕ್ ಇನ್ ಇಂಡಿಯ" ಎಂಬ ಘೋಷಣೆಯ ಅಂತರಾರ್ಥವೆಂದರೆ ರಫ್ತು ಆಧಾರಿತ ಕೈಗಾರಿಕಾ ಬೆಳವಣಿಗೆ. ಅಂದರೆ ವಿಶ್ವದ ಮಾರುಕಟ್ಟೆಗಾಗಿ ಪೈಪೋಟಿ. ವಿದೇಶೀ ಬಂಡವಾಳಗಾರರು ಭಾರತದಲ್ಲಿ ಬಂಡವಾಳ ಹೂಡಬೇಕೆಂದರೆ ಅವರು ಈ ದೇಶದಲ್ಲಿ ಉತ್ಪಾದಿಸುವ ಉತ್ಪನ್ನಗಳು ಕಡಿಮೆ ಖರ್ಚಿನಲ್ಲಾಗಬೇಕು. ಅದು ಸಾಧ್ಯವಾಗಬೇಕೆಂದರೆ ಕಾರ್ಮಿಕರ ಕೂಲಿ ಕನಿಷ್ಠವಾಗಬೇಕು, ಕೆಲಸದ ಅವಧಿ ಗರಿಷ್ಠವಾಗಬೇಕು. ಕಾರ್ಮಿಕರಲ್ಲಿನ ಶಿಸ್ತು ಹೆಚ್ಚಾಗಬೇಕು, ಕಾರ್ಮಿಕ ಕಾನೂನುಗಳು, ಭೂ ಕಾನೂನುಗಳು, ಅರಣ್ಯ ಕಾನೂನುಗಳು ಮತ್ತು ಪರಿಸರ ಕಾನೂನುಗಳು ಪೂರಾ ಸಡಿಲಗೊಳ್ಳಬೇಕು.**

ಮುರಳಿಧರ ಚಿಕ್ಕಮಗಳೂರು

ಮೇಕ್ ಇನ್ ಇಂಡಿಯ

*ನೆಹರು ಕಾಲದ 'ಮೇಡ್ ಇನ್ ಇಂಡಿಯ' ಸ್ವಾವಲಂಬನೆ ಮತ್ತು ಹೆಮ್ಮೆಯ ವಿಷಯ; ಮೋದಿಯವರ 'ಮೇಕ್ ಇನ್ ಇಂಡಿಯ' ಅಪಮಾನ ಮತ್ತು ಅಪಯಶದ ಸಂಕೇತ*

ಹೂಡಲು ಆಕರ್ಷಣೀಯ ಅಂಶಗಳು. ಬಂಡವಾಳದ ವರ್ಗಗುಣವೆಂದರೆ ಸುಲಿಗೆ ಮತ್ತು ಲಾಭಗಳಿಕೆ, ಇವೆರಡಕ್ಕೂ ಮುಕ್ತ ಅವಕಾಶ ನೀಡುವ ದೇಶಗಳ ಅರಸುವಿಕೆ ಮತ್ತು ಪ್ರತಿರೋಧಿಸುವ ಆಳ್ವಿಕೆಗಳ ಉಚ್ಚಾಟನೆ. ದಾರಿ ಸುಗಮಗೊಳಿಸಿಕೊಳ್ಳಲು ನಿರಂತರ ಕುತಂತ್ರ. ಶಾಂತಿ ಮಂತ್ರ ಜಪಿಸುತ್ತಲೇ ಜಗತ್ತನ್ನು ಕುದಿಯುತ್ತಿರುವ ಹಂಡೆಯನ್ನಾಗಿಡುವ ಸತತ ಯತ್ನ. ಬಂಡವಾಳಶಾಹಿಯ ಈ ವರ್ಗಗುಣವನ್ನು ಅರಿಯಲು ಬೃಹತ್ ಗ್ರಂಥಗಳೇನನ್ನೂ ಓದಬೇಕಿಲ್ಲ. ಕ್ಯೂಬ, ವಿಯೆಟ್ನಾಂ, ಇರಾಕ್, ಆಫ್ಘಾನಿಸ್ತಾನ, ಲಿಬಿಯ, ಸಿರಿಯ, ಉಕ್ರೇನ್ ಇತ್ಯಾದಿ ರಾಷ್ಟ್ರಗಳಲ್ಲಿ ಇವರು ನಡೆಸಿದ ಮತ್ತು ನಡೆಸುತ್ತಿರುವ ಬೀಭತ್ಸ ಕೃತ್ಯಗಳೇ ಸಾಕು.

**ಬಂಡವಾಳದ ಬಯಕೆ–ಕನಿಷ್ಠ ಸರ್ಕಾರ–ಗರಿಷ್ಠ ಆಡಳಿತ**

– ಮೋದಿಯ "ಮೇಕ್ ಇನ್ ಇಂಡಿಯ" ಕರೆ ವಿದೇಶಿ ಬಂಡವಾಳಿಗರನ್ನು ಉದ್ದೇಶಿಸಿದ್ದುದು ಎಂಬುದು ವಿವಾದಾತೀತ. ಅಂದರೆ ಸ್ವದೇಶಿ ಬಂಡವಾಳಿಗರು ತಮ್ಮ ದೇಶದಲ್ಲೇ ಬಂಡವಾಳ ಹೂಡಲಾರದಷ್ಟು ಅಶಕ್ತರೆ ಎಂಬ ಪ್ರಶ್ನೆ ಸಹಜವಾಗಿ ಉದ್ಭವಿಸುತ್ತದೆ. ಅರವತ್ತರ ದಶಕದಲ್ಲಿ ಹಿಂದೂಸ್ತಾನ್ ಮಷೀನ್ ಟೂಲ್ಸ್ ಉದ್ದಿಮೆ ಕೈಗಡಿಯಾರಗಳ ಉತ್ಪಾದನೆಯನ್ನು ಕೈಗೊಂಡಾಗ ಈ ದೇಶದ ಖಾಸಗಿ ಕ್ಷೇತ್ರಕ್ಕೆ ಭಾರಿ ಪ್ರಮಾಣದಲ್ಲಿ ಕೈಗಡಿಯಾರ ತಯಾರಿಸುವ ಕ್ಷಮತೆಯಿರಲಿಲ್ಲ. ಅಷ್ಟೇಕೆ ದೈನಂದಿನ ಬ್ರೆಡ್ ತಯಾರಿಸಿ ಜನಸಾಮಾನ್ಯರ ಅಗತ್ಯವನ್ನು ಪೂರೈಸುವ ಬೃಹತ್ ಬೇಕರಿಯನ್ನೂ ಕೂಡ ಸಾರ್ವಜನಿಕ ಕ್ಷೇತ್ರದಲ್ಲೇ ಸ್ಥಾಪಿಸಬೇಕಾಯಿತು. ಜಾಗತೀಕರಣ ವ್ಯವಸ್ಥೆಯಲ್ಲಿ ಈಗ ಎಲ್ಲವೂ ಬುಡಮೇಲಾಗಿದೆ. ಸರ್ಕಾರವೇಕೆ ಕೈಗಡಿಯಾರ, ಬ್ರೆಡ್, ಸಾಬೂನು, ಔಷಧ ಇತ್ಯಾದಿಗಳ ಉತ್ಪಾದನೆಯಲ್ಲಿ ತೊಡಗಬೇಕು ಎಂದು ಪ್ರಶ್ನೆ ಕೇಳುವಷ್ಟು ಖಾಸಗಿ ಕ್ಷೇತ್ರ ಬೆಳೆದು ನಿಂತಿದೆ. ಜಾಗತೀಕರಣ ಆರ್ಥಿಕ ವ್ಯವಸ್ಥೆ ನೀತಿಯ ಒಂದು ಅಂತರ್ಗತ ಭಾಗ ಖಾಸಗೀಕರಣ. ಹಾಗಾಗಿ ೧೯೯೧–೯೨ರ ಹೊಸ ಆರ್ಥಿಕ ನೀತಿಗಳು ಜಾರಿಗೊಂಡು ವಿದೇಶಿ ಬಂಡವಾಳ ಹೂಡಿಕೆಯ ಮೇಲಿದ್ದ ಹಲವಾರು ನಿರ್ಬಂಧಗಳನ್ನು ಸರ್ಕಾರ ತೆಗೆದುಹಾಕಿದ ಇಲ್ಲವೆ ಸಡಿಲಿಸಿದ ಪರಿಣಾಮವೇ ಉಂಟಾದದ್ದು ಸ್ವದೇಶಿ–ವಿದೇಶಿ ಬಂಡವಾಳದ ಮೈತ್ರಿಕೂಟ. ಇದು ಸರ್ಕಾರವನ್ನು, ರಾಜಕೀಯ ಪಕ್ಷಗಳನ್ನು, ರಾಜಕಾರಣಿಗಳನ್ನು, ಅಧಿಕಾರಶಾಹಿಯನ್ನು ತಾನು ಹಾಕುವ ತಾಳಕ್ಕೆ ತಕ್ಕಂತೆ ಕುಣಿಯುವಂತೆ ಮಾಡಿದೆ. ಮಾರುಕಟ್ಟೆಗೆ ತನ್ನದೇ ಆದ ಚಲನಾತ್ಮಕ ಶಕ್ತಿಯಿದೆ, ಸರ್ಕಾರ ಇದರಲ್ಲಿ ಮೂಗು ತೂರಿಸಬಾರದು ಮತ್ತು ನಿಯಂತ್ರಿಸಬಾರದು ಎಂಬುದು ಬಂಡವಾಳಿಗರ ವಾದ. "ಕನಿಷ್ಠ ಸರ್ಕಾರ–ಗರಿಷ್ಠ ಆಡಳಿತ" ಇವರು ಬಯಸುವ ವ್ಯವಸ್ಥೆ. ಮೋದಿ ಇದನ್ನೇ ಗಿಳಿಪಾಠದಂತೆ ಪುನರುಚ್ಚರಿಸುತ್ತಿರುವುದು.

**ಉದ್ಯೋಗ ರಹಿತ ಬೆಳವಣಿಗೆ**

ದೇಶದ ಯುವ ಜನತೆಗೆ ಅತ್ಯಗತ್ಯವಾಗಿ ಬೇಕಾದದ್ದು ಉದ್ಯೋಗ. ಅಗಾಧ ಪ್ರಮಾಣದಲ್ಲಿರುವ ನಿರುದ್ಯೋಗವನ್ನು ಮಿತಗೊಳಿಸುವ ಏಕೈಕ ಪರಿಹಾರವೆಂದರೆ ಅಗಾಧ ಪ್ರಮಾಣದಲ್ಲಿ ಉದ್ಯೋಗಗಳ ಸೃಷ್ಟಿ. ಉತ್ಪಾದನಾ ಕ್ಷೇತ್ರವೇ ಭಾರಿ ಪ್ರಮಾಣದ ಉದ್ಯೋಗಗಳನ್ನು ಸೃಷ್ಟಿಸುವ ಸಾಮರ್ಥ್ಯ ಹೊಂದಿರುವುದು. ಶಾಲಾ–ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಕೇಂದ್ರಗಳಿಂದ ಹೊರಬರುವ ವಿದ್ಯಾರ್ಥಿ–ಯುವಜನರಿಗೆ ಉದ್ಯೋಗಾವಕಾಶ ಕಲ್ಪಿಸಬೇಕಾದದ್ದು ಸರ್ಕಾರದ ಜವಾಬ್ದಾರಿ. ಈ ದಿಸೆಯಲ್ಲಿ ಉತ್ಪಾದನಾ ಕ್ಷೇತ್ರದ ಬೆಳವಣಿಗೆಗೆ ಆದ್ಯತೆ ಕೊಡಬೇಕಾದದ್ದು ಅತ್ಯಗತ್ಯ. ಈ ಹಿನ್ನೆಲೆಯಲ್ಲಿ ಜಾಗತೀಕರಣದ ಪರಿಣಾಮಗಳನ್ನು ವಿಶ್ಲೇಷಿಸಿದಲ್ಲಿ ೧೯೯೦–೯೧ರ ಅವಧಿಯಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ (ಜಿ.ಡಿ.ಪಿ.) ಉತ್ಪಾದನಾ ಕ್ಷೇತ್ರದ ಪಾಲು ೨೭% ಇದ್ದದ್ದು ಅದು ಸತತವಾಗಿ ಇಳಿಮುಖವಾಗುತ್ತಲೆ ಇದ್ದು ೨೦೧೩–೧೪ರಲ್ಲಿ ೧೬% ಬಂದಿದೆ. ವಿಶೇಷವಾಗಿ ಗಮನಿಸಬಹುದಾದ ಅಂಶವೆಂದರೆ ೧೯೯೦–೯೧ ರಿಂದ ೨೦೧೩–೧೪ರ ಅವಧಿಯಲ್ಲಿ ವಿವಿಧ ರೀತಿಯಲ್ಲಿ ಖಾಸಗೀಕರಣದ ಪ್ರಕ್ರಿಯೆಗಳು ಬಿರುಸಿನಿಂದ ಜಾರಿಗೊಂಡದ್ದು. ಅಂದರೆ ಖಾಸಗಿ ಕ್ಷೇತ್ರವು ಸರ್ಕಾರಗಳಿಂದ ಅನೇಕ ರಿಯಾಯಿತಿಗಳನ್ನು ಪಡೆದರೂ ಉದ್ಯೋಗ ಸೃಷ್ಟಿಯಲ್ಲಿ ಅದರ ಪಾತ್ರ ಗೌಣ. ಒಟ್ಟು ರಾಷ್ಟ್ರೀಯ ಉತ್ಪನ್ನ ಮತ್ತು ಉದ್ಯೋಗ ಸೃಷ್ಟಿಯ ಪ್ರಮಾಣಗಳನ್ನು ತುಲನೆ ಮಾಡಿದಲ್ಲಿ ಜಾಗತೀಕರಣದ ಪ್ರಕ್ರಿಯೆಗಳು ಒಟ್ಟು ರಾಷ್ಟ್ರೀಯ ಉತ್ಪಾದನೆಯ ಪ್ರಮಾಣವನ್ನು ಹೆಚ್ಚಿಸಿದ್ದರೂ ಉದ್ಯೋಗ ಸೃಷ್ಟಿಯ ಪ್ರಮಾಣ ಇಳಿಮುಖವಾದದ್ದನ್ನು ಈ ಕೆಳಗಿನ ಅಂಕಿ–ಅಂಶಗಳಿಂದ ತಿಳಿಯಬಹುದು.

| ಅವಧಿ | ಒಟ್ಟು ರಾಷ್ಟ್ರೀಯ ಉತ್ಪನ್ನದ ಪ್ರಮಾಣ (%) | ಉದ್ಯೋಗ ಸೃಷ್ಟಿಯ ಪ್ರಮಾಣ (%) |
|---|---|---|
| ೧೯೭೨–೮೩ | ೪.೭% | ೨% |
| ೧೯೮೩–೯೪ | ೫.೦% | ೧.೮೪% |
| ೧೯೯೫–೦೪ | ೬.೨೫% | ೦.೨೨% |
| ೨೦೦೫–೨೦೧೦ | ೮.೫೦% | ೧.೫% |

ಮೇಲ್ಕಂಡ ಅಂಶಗಳಿಂದ ಸ್ಪಷ್ಟವಾಗಿ ಗೋಚರವಾಗುವ ವಸ್ತು ಸತ್ಯವೆಂದರೆ ಜಾಗತೀಕರಣದ ಪರಿಣಾಮವೆಂದರೆ ಉದ್ಯೋಗರಹಿತ ಬೆಳವಣಿಗೆ. ಅಸಮಾನತೆಯ ಬೆಳವಣಿಗೆ. ಅಭಿವೃದ್ಧಿಯೆಂದರೆ ಶ್ರೀಮಂತರ ಶ್ರೀಮಂತಿಕೆಯ ಅಭಿವೃದ್ಧಿಯಲ್ಲ, ದೇಶದ ಬಡಜನರ ಅಭಿವೃದ್ಧಿ. ಸರ್ವೋಚ್ಚ ನ್ಯಾಯಾಲಯ ಗುಜರಾತ್ ಎಲೆಕ್ಟ್ರಿಸಿಟಿ ಬೋರ್ಡ್ (ಎ.ಐ.ಆರ್. ೧೯೫೫ ಎಸ್.ಸಿ. ೧೯೮೩) ಪ್ರಕರಣದಲ್ಲಿ ಮಾನವ ಎಲ್ಲ ಅಭಿವೃದ್ಧಿಯ ಕೇಂದ್ರ ಬಿಂದುವಾಗಬೇಕು ಎಂದು ವ್ಯಾಖ್ಯಾನಿಸಿದೆ. ಸಮಾಜದ ಅತ್ಯಂತ ಶೋಷಿತ ವರ್ಗದ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿಯ ಮಾಪನವಾಗಬೇಕು. ಈ ಹಿನ್ನೆಲೆಯಲ್ಲಿ ಮೋದಿಯ ಅಭಿವೃದ್ಧಿಯ ಪ್ರಚಾರವು ವಂಚನೆಯ ಮಾತುಗಳೆಂದು ಸ್ಪಷ್ಟವಾಗುತ್ತದೆ. ಬಂಡವಾಳಿಗರ ಅಭಿವೃದ್ಧಿಗೆ ಅನುಕೂಲವಾಗುವ ರೀತಿಯಲ್ಲಿ ಕಾರ್ಮಿಕ ಕಾನೂನುಗಳು ಮತ್ತು ಭೂ ಕಾನೂನುಗಳು ಮಾರ್ಪಾಟಾಗಬೇಕೆಂಬ ಮೋದಿ ಸರ್ಕಾರದ ನಿಲುವು, ಇದರ "ಅಭಿವೃದ್ಧಿ" ಮತ್ತು "ಮೇಕ್ ಇನ್ ಇಂಡಿಯ" ವಂಚನೆಯ ಪ್ರಚಾರದ ಮುಖವಾಡವನ್ನು ಕಳಚಿದೆ.

**ಬಂಡವಾಳ ಹೂಡಿಕೆ–ಕಾರ್ಮಿಕ ಕಾನೂನು**

ಭಾರತದಲ್ಲಿ ಬಂಡವಾಳ ಹೂಡಲು ಬಹು ದೊಡ್ಡ ತೊಡಕೆಂದರೆ ಚಾಲ್ತಿಯಲ್ಲಿರುವ ಕಾರ್ಮಿಕ ಕಾನೂನುಗಳೆಂದೂ ಮತ್ತು ಇಲ್ಲಿಯ ನಿಯಂತ್ರಿತ ವಾತಾವರಣ ವಿದೇಶಿ ಸಂಸ್ಥೆಗಳಿಗೆ ವ್ಯಾಪಾರ–ವ್ಯವಹಾರ ನಡೆಸಲಿಕ್ಕೆ ಪೂರಕವಾಗಿಲ್ಲವೆಂದೂ ವಿಶ್ವಬ್ಯಾಂಕ್ ಘೋಷಿಸಿಬಿಟ್ಟಿದೆ. ಈ ದೇಶದ ಬಂಡವಾಳಿಗರ ಸಂಘಟನೆಗಳಾದ ಕಾನ್‌ಫೆಡರೇಷನ್ ಆಫ್ ಇಂಡಿಯನ್ ಇಂಡಸ್ಟ್ರೀಸ್, ಫೆಡರೇಷನ್ ಆಫ್ ಇಂಡಿಯನ್ ಚೇಂಬರ್ ಆಫ್ ಕಾಮರ್ಸ್, ಅಖಿಲ ಭಾರತ ಮಾಲೀಕರ ಸಂಸ್ಥೆ ಇತ್ಯಾದಿಗಳು ಕಾರ್ಮಿಕ ಕಾನೂನುಗಳು ಸುಧಾರಣೆಯಾಗದಿದ್ದಲ್ಲಿ ಬಂಡವಾಳ ಹೂಡಿಕೆಗೆ ಉತ್ತೇಜನ ದೊರೆಯುವುದಿಲ್ಲವೆಂದೂ, ಕೈಗಾರಿಕಾ ಅಭಿವೃದ್ಧಿ ಆಗಲಾರದೆಂದೂ, ಉದ್ಯೋಗ ಸೃಷ್ಟಿಯಾಗುವುದಿಲ್ಲವೆಂದೂ ಹೇಳುತ್ತಾ ಕಾರ್ಮಿಕ ಕಾನೂನುಗಳನ್ನು ತಮಗೆ ತಕ್ಕಂತೆ ಮಾರ್ಪಾಡು ಮಾಡಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಮೇಲೆ ಒತ್ತಡ ಹೇರುತ್ತಲೇ ಬಂದಿವೆ. ಕೇಂದ್ರ ಕಾರ್ಮಿಕ ಮಂತ್ರಿ ನರೇಂದ್ರ ಸಿಂಗ್ ತೋಮರ್ ಅವರು ಕಾನೂನಿರುವುದು ಸಮಸ್ಯೆಗಳ ಪರಿಹಾರಕ್ಕೆ; ಯಾವ ಕಾನೂನು ಅಭಿವೃದ್ಧಿಗೆ ತೊಡಕುಂಟುಮಾಡುವುದೊ ಮತ್ತು ಇಂದಿನ ಸಂದರ್ಭಕ್ಕೆ ಅಸಮಂಜಸವಾಗಿದೆಯೊ ಅಂತಹ ಕಾನೂನನ್ನು ನಾವು



ಗಣನೆಯಲ್ಲಿಟ್ಟು ಅದನ್ನು ಪರಿಸಬೇಕಾದ ಅಗತ್ಯವಿಲ್ಲವೆಂದು ನಿರ್ಣಯಿಸಿಬಿಟ್ಟಿದ್ದಾರೆ. ಕಾರ್ಮಿಕ ಕಾನೂನುಗಳಿರುವುದು ಕಾರ್ಮಿಕರ ಸಮಸ್ಯೆಗಳ ಪರಿಹಾರಕ್ಕೆಂಬ ಕನಿಷ್ಠ ತಿಳುವಳಿಕೆಯೂ ಈ ಕಾರ್ಮಿಕ ಮಂತ್ರಿಗಳಿಗೆ ಇದ್ದಂತಿಲ್ಲ. ಕಾರ್ಮಿಕ ಕಾನೂನುಗಳನ್ನು ಜಾರಿಗೊಳಿಸುತ್ತಿರುವ ಪ್ರಗತಿಶೀಲ ಕೈಗಾರಿಕೋದ್ಯಮಿಗಳಿಗೆ ಇವು ತೊಡಕು ಎಂದೆನಿಸಿಲ್ಲ. ಕಾರ್ಮಿಕರನ್ನು ಶೋಷಣೆ ಮಾಡಬಯಸುವ ಬಂಡವಳಿಗರಿಗೆ ಮಾತ್ರ ಕಾರ್ಮಿಕ ಕಾನೂನುಗಳು ತೊಡಕಾಗಿವೆ. ಆಧುನಿಕ ತಂತ್ರಜ್ಞಾನದೊಂದಿಗೆ ಉದ್ದಿಮೆಗಳನ್ನು ಸ್ಥಾಪಿಸಲು ಬಯಸುವ ಬಂಡವಳಿಗರ ಶ್ರಮಶಕ್ತಿಯ ಬಗೆಗಿನ ದೃಷ್ಟಿಕೋನ ಮಾತ್ರ ಊಳಿಗಮಾನ್ಯ ಹಂತದಲ್ಲೇ ಇದೆ. ಈ ಜನರೇ ಸುಧಾರಣೆಯ ಹೆಸರಿನಲ್ಲಿ ಶ್ರಮಿಕರನ್ನು ಅವರ ಸಂವಿಧಾನಿಕ ಹಕ್ಕುಗಳಿಂದ ಮತ್ತು ಅವಕಾಶಗಳಿಂದ ವಂಚಿತರನ್ನಾಗಿಸಲು ಆಳುವ ಸರ್ಕಾರಗಳ ಮೇಲೆ ಒತ್ತಡ ಹೇರುತ್ತಿರುವುದು ಮತ್ತು ಸರ್ಕಾರಗಳು ಅವರ ದಲ್ಲಾಳಿಗಳಂತೆ ವರ್ತಿಸುತ್ತಿರುವುದು. ಇದು ಕಾರ್ಮಿಕ ಕಾನೂನುಗಳ ಸುಧಾರಣೆಯಲ್ಲ; ಕಾರ್ಮಿಕ ಹಕ್ಕುಗಳ ನಾಶ, ಮೋದಿ ಸರ್ಕಾರ ಮುಂಬರುವ ದಿನಗಳಲ್ಲಿ ಕಾರ್ಮಿಕರು ಮತ್ತು ಅವರ ಸಂಘಟನೆಗಳ ಮೇಲೆ ನಡೆಸಲಿರುವ ದಾಳಿಯ ಪೂರ್ವ ಸೂಚನೆ. ಸಂಘಟಿತ ಶ್ರಮಿಕ ಶಕ್ತಿಯ ಬಗ್ಗೆ ಸರ್ವಾಧಿಕಾರಿಗಳಿಗಿರುವ ಅಳುಕು ಮತ್ತು ಆತಂಕವೇ ಅವರನ್ನು ದಮನಕ್ಕೆ ಪ್ರಚೋದಿಸುವುದು. ಕೈಗಾರಿಕಾ ಪ್ರಜಾಪ್ರಭುತ್ವದ ಅಳಿವೇ ಇವರ ಗುರಿ.

**ಹಕ್ಕುಗಳಿಗಾಗಿ ಹೋರಾಟ**

ಈ ದೇಶದ ಕಾರ್ಮಿಕ ಕಾನೂನುಗಳ ಉಗಮಕ್ಕೆ ತಮ್ಮದೇ ಆದ ಚರಿತ್ರೆಯಿದೆ. ಯಾವುದೇ ಕಾರ್ಮಿಕ ಕಾನೂನನ್ನೂ ಬ್ರಿಟಿಷ್ ಸಾಮ್ರಾಜ್ಯಶಾಹಿಗಳಾಗಲೀ ಅಥವಾ ಸ್ವಾತಂತ್ರ್ಯೋತ್ತರ ಭಾರತದ ಆಳುವ ವರ್ಗವಾಗಲೀ ಅನುಕಂಪದಿಂದ ಜಾರಿಗೊಳಿಸಿದ್ದಲ್ಲ. ಎಲ್ಲವನ್ನೂ ಕಾರ್ಮಿಕ ವರ್ಗ ಪ್ರತಿಭಟನೆ ಮತ್ತು ಹೋರಾಟಗಳ ಮೂಲಕ ಪಡೆದದ್ದು. ದಿನಕ್ಕೆ ಎಂಟು ಗಂಟೆಗಳ ದುಡಿಮೆಗಾಗಿ ನಡೆದ ಹೋರಾಟ ಚಿರಸ್ಮರಣೀಯವಾಗಿ ಉಳಿದಿದೆ. ಕಾರ್ಮಿಕ ಸಂಘಟನೆಗಳ ಕಾಯ್ದೆ, ೧೯೨೬ರ ಉದಾಹರಣೆಯನ್ನೇ ನೋಡಿದಲ್ಲಿ, ೧೯೨೦ರಲ್ಲಿ ಮುಷ್ಕರ ನಿರತ ಕಾರ್ಮಿಕರ ಸಂಘಟನೆ, ಮದ್ರಾಸ್ ಗಿರಣಿ ಕಾರ್ಮಿಕರ ಸಂಘದ ಪದಾಧಿಕಾರಿಗಳ ಮೇಲೆ ಮದ್ರಾಸ್‌ನ ಬಕಿಂಗ್‌ಹ್ಯಾಮ್ ಮತ್ತು ಕರ್ನಾಟಕ ಮಿಲ್‌ನ ಮಾಲೀಕರು ತಮಗೆ ಮುಷ್ಕರದಿಂದ ಉಂಟಾದ ನಷ್ಟ ಪರಿಹಾರಕ್ಕೆ ಹೂಡಿದ ಸಿವಿಲ್ ದಾವೆ ಮತ್ತು ತಮ್ಮ ವಿರುದ್ಧ ಪಿತೂರಿ ನಡೆದಿದೆ ಎಂಬ ಆರೋಪದ ಮೇಲೆ ಹೂಡಿದ ಕ್ರಿಮಿನಲ್ ಮೊಕದ್ದಮೆಯ ಪರಿಣಾಮವಾಗಿ ನಡೆದ ವ್ಯಾಪಕ ಪ್ರತಿಭಟನೆ ಮತ್ತು ಮುಷ್ಕರವೇ ಕಾರ್ಮಿಕ ಸಂಘಗಳ ಕಾಯ್ದೆ, ೧೯೨೬ರ ಜನನಕ್ಕೆ ಕಾರಣವಾದದ್ದು. ಪ್ರಸ್ತುತ ಚಾಲ್ತಿಯಲ್ಲಿರುವ ಎಲ್ಲ ಕಾರ್ಮಿಕ ಕಾನೂನುಗಳೂ ಹಂತ ಹಂತವಾಗಿ ಜಾರಿಗೊಂಡವು ಎಂದು ಕಾರ್ಮಿಕ ವರ್ಗದ ಚರಿತ್ರೆಯಿಂದ ತಿಳಿದುಬರುತ್ತದೆ. ಕೈಗಾರಿಕಾ ಶಾಂತಿ, ಸಾಮಾಜಿಕ ಭದ್ರತೆ ಮತ್ತು ಕಾರ್ಮಿಕ ಸೇವಾ ನಿಯಮಗಳಿಗಾಗಿ ಜಾರಿಗೊಂಡ ಕಾನೂನುಗಳು ಹಲವಾರು. ಹೀಗೆ ಪ್ರತಿಯೊಂದು ವಿಷಯಕ್ಕೂ ಒಂದು ಕಾರ್ಮಿಕ ಕಾನೂನಿನ ಅಗತ್ಯ ಬಂದದ್ದು. ಈ ಬೆಳವಣಿಗೆ ಒಂದೆಡೆ ಬಂಡವಾಳಶಾಹಿ ವ್ಯವಸ್ಥೆಯಲ್ಲಿನ ಶೋಷಣೆಯ ಅಗಾಧತೆಯ ಸೂಚ್ಯವಾದರೆ, ಇನ್ನೊಂದೆಡೆ ಈ ದೇಶದ ಬಂಡವಳಿಗರ ಪ್ರತಿಗಾಮಿ ಮತ್ತು ಹಿಂದುಳಿದ ಮನೋಭಾವನೆಯ ಪ್ರತಿಫಲನವೂ ಹೌದು. ಶ್ರಮಿಕರ ಶೋಷಣೆಯ ನಿಯಂತ್ರಣವೇ ಕಾರ್ಮಿಕ ಕಾನೂನುಗಳ ಉದ್ದೇಶವಾದಲ್ಲಿ ಅದು ಸಾಕಾರಗೊಂಡಿದೆಯೇ ಎನ್ನುವುದು ಇನ್ನೊಂದು ಪ್ರಶ್ನೆ. ಸಂಕ್ಷಿಪ್ತವಾಗಿ ಹೇಳುವುದಾದಲ್ಲಿ ರಾಷ್ಟ್ರೀಯ ಕಾರ್ಮಿಕ ಆಯೋಗಗಳ ವರದಿಗಳ ಪ್ರಕಾರ ಕಾರ್ಮಿಕ ಕಾನೂನುಗಳನ್ನು ಕಾರ್ಮಿಕರ ಹಿತವನ್ನು ಗಮನದಲ್ಲಿಟ್ಟು ಜಾರಿಗೊಳಿಸುವಲ್ಲಿ ಸರ್ಕಾರಗಳು ವಿಫಲವಾಗಿವೆ. ಅಂದರೆ ಕಾರ್ಮಿಕ ಕಾನೂನುಗಳು ಜಾರಿಗೊಳ್ಳದಂತೆ ಅಥವಾ ಅವುಗಳನ್ನು ಉಲ್ಲಂಘಿಸಿ ಜಾರಿಗೊಳ್ಳದಂತೆ ತಂತ್ರ ಹೂಡಿ ಅದರ ಲಾಭವನ್ನು ಪಡೆಯುವುದೂ ಈ ದೇಶದ ಉದ್ಯಮಿಗಳೇ ಎಂಬ ಸತ್ಯ ಕಾರ್ಮಿಕರ ಅರಿವಿಗೆ ಬಂದಿದೆ. ಕೇಂದ್ರ ಕಾರ್ಮಿಕ ಮಂತ್ರಿ ನರೇಂದ್ರ ಸಿಂಗ್ ತೋಮರ್‌ನಂತೆ ಕಾರ್ಮಿಕ ಇಲಾಖೆಯ ಬಹುಪಾಲು ಅಧಿಕಾರಿಗಳು ಬಂಡವಳಿಗರ ಪರವಾಗಿ ನಿಂತಿದ್ದಾರೆ.

**ಒಂದನೇ ರಾಷ್ಟ್ರೀಯ ಕಾರ್ಮಿಕ ಆಯೋಗ – ಸಮ ಸಮಾಜದೆಡೆಗೆ**

ಕೇಂದ್ರ ಸರ್ಕಾರ ೧೯೬೬ರಲ್ಲಿ ಸರ್ವೋಚ್ಚ ನ್ಯಾಯಾಲಯದ ವಿಶ್ರಾಂತ ಮುಖ್ಯ ನ್ಯಾಯಮೂರ್ತಿ ಶ್ರೀ ಗಜೇಂದ್ರಗಡ್ಕರ್ ಅವರ ಅಧ್ಯಕ್ಷತೆಯಲ್ಲಿ ಮೊದಲನೇ ರಾಷ್ಟ್ರೀಯ ಕಾರ್ಮಿಕ ಆಯೋಗವನ್ನು ರಚಿಸಿತು. ೧೯೬೯ರಲ್ಲಿ ಈ ಆಯೋಗ ಸಲ್ಲಿಸಿದ ವರದಿ ಮತ್ತು ಮಾಡಿದ ಶಿಫಾರಸ್ಸುಗಳು "ಕೈಗಾರಿಕಾ ಪ್ರಜಾಪ್ರಭುತ್ವ", "ಸಾಮಾಜಿಕ ನ್ಯಾಯ" ಸಾಮಾಜಿಕ ಭದ್ರತೆ ಮುಂತಾದವು ಶ್ರಮಿಕ ಪರವಾಗಿದ್ದು ಸಂವಿಧಾನದ ಆಶಯಗಳಿಗನುಸಾರವಾಗಿ ಸಮಾಜವಾದಿ ವ್ಯವಸ್ಥೆಯ ನಿರ್ಮಾಣಕ್ಕೆ ಪೂರಕವಾಗಿದ್ದವು. ಈ ಆಯೋಗದ ಶಿಫಾರಸ್ಸುಗಳನ್ನಾಧರಿಸಿ ಬಂದ ಅನೇಕ ಕಾರ್ಮಿಕ ಕಾನೂನುಗಳು ಆಯೋಗದ ಆಶಯಗಳನ್ನು ಸಾಕಾರಗೊಳಿಸಿದ್ದವು. ೧೯೭೦ರಲ್ಲಿ ಜಾರಿಗೊಂಡ ಗುತ್ತಿಗೆ ಕಾರ್ಮಿಕ ಪದ್ಧತಿ (ನಿಯಂತ್ರಣ ಮತ್ತು ರದ್ದತಿ) ಕಾಯ್ದೆ, ೧೯೭೨ರಲ್ಲಿ ಜಾರಿಯಾದ ಉಪದಾನ ಕಾಯ್ದೆ, ೧೯೭೧ರಲ್ಲಿ ಕೈಗಾರಿಕಾ ವಿವಾದಗಳ ಕಾಯ್ದೆಗೆ ತಂದ ಕಾರ್ಮಿಕ ಪರ ತಿದ್ದುಪಡಿ ಈ ದಿಸೆಯಲ್ಲಿನ ಕೆಲವು ಉದಾಹರಣೆಗಳು. ಒಟ್ಟಾರೆ ಮೊದಲನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ವರದಿ ಕಾರ್ಮಿಕರು ಮತ್ತು ಕಾರ್ಮಿಕ ಸಂಘಗಳನ್ನು ಕೈಗಾರಿಕೆಗಳಲ್ಲಿ ಒಂದು ಶಕ್ತಿಕೇಂದ್ರವನ್ನಾಗಿಸುವ ಪ್ರಯತ್ನವಾಗಿತ್ತು.

**ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗ – ಬದಲಾದ ದಿಕ್ಕು**

೧೯೯೯ರಲ್ಲಿ ಮಾಜಿ ಕೇಂದ್ರ ಕಾರ್ಮಿಕ ಮಂತ್ರಿ ರವೀಂದ್ರ ವರ್ಮ ನೇತೃತ್ವದಲ್ಲಿ ಎನ್.ಡಿ.ಎ. ಸರ್ಕಾರ ರಚಿಸಿದ ರಾಷ್ಟ್ರೀಯ ಕಾರ್ಮಿಕ ಆಯೋಗದ ಉದ್ದೇಶ ಮೊದಲನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ಉದ್ದೇಶಕ್ಕೆ ತದ್ವಿರುದ್ಧವಾಗಿತ್ತು. ೧೯೯೧ರ ಹೊಸ ಆರ್ಥಿಕ ನೀತಿ, ಅದರ ಹಿನ್ನೆಲೆಯಲ್ಲಿ ಬದಲಾದ ಆರ್ಥಿಕ ಪರಿಸರ, ತತ್ಪರಿಣಾಮವಾಗಿ ತೀವ್ರ ಬದಲಾವಣೆ ಹೊಂದಿದ ಕೈಗಾರಿಕಾ ಪರಿಸ್ಥಿತಿ, ಶ್ರಮ ಮಾರುಕಟ್ಟೆ , ದುಡಿಮೆಯ ಸ್ಥಳಗಳಲ್ಲುಂಟಾದ ಬದಲಾವಣೆ, ಬದಲಾದ ಉದ್ಯೋಗ ಸ್ವರೂಪ, ಇತ್ಯಾದಿಗಳು ಕಾರ್ಮಿಕ ಕಾನೂನುಗಳ ಹಿನ್ನೆಲೆಯಲ್ಲಿ ಹೊಸ ದೃಷ್ಟಿಕೋನ ಹೊಂದಲು, ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗ ರಚಿಸಲು ಕಾರಣವೆಂದು ಕೇಂದ್ರ ಸರ್ಕಾರವೇ ಅಧಿಕೃತವಾಗಿ ಪ್ರಕಟಿಸಿತ್ತು. ೨೦೦೨ರಲ್ಲಿ ಈ ಆಯೋಗ ನೀಡಿದ ವರದಿ ಮತ್ತು ಶಿಫಾರಸ್ಸುಗಳು ಸರ್ಕಾರದ ಅಪೇಕ್ಷೆಗೆ ಅನುಗುಣವಾಗಿದ್ದವು. ಎರಡನೇ ಆಯೋಗದ ಶಿಫಾರಸ್ಸುಗಳು ಸಾಮಾಜಿಕ ನ್ಯಾಯ ಮತ್ತು ಕೈಗಾರಿಕೆಯಲ್ಲಿ ಕಾರ್ಮಿಕ ಸಂಘಗಳ ಪಾತ್ರವನ್ನು ಗೌಣವಾಗಿಸಿದ್ದವು. ಶ್ರಮಶಕ್ತಿಯು ಬಂಡವಾಳಕ್ಕೆ ಸಹಕರಿಸುವ ಒಂದು ಅಧೀನ ಅಂಶವೆಂದು ಅಭಿಪ್ರಾಯ ರೂಪಿಸಿತು. ಕೈಗಾರಿಕಾ

**ಹೊಸತು ೨೦೧೫ ಜನವರಿ ಸಂಚಿಕೆ**

ಆತ್ಮೀಯ ಓದುಗರಿಗೆ,

ಜನವರಿ ತಿಂಗಳ ಸಂಚಿಕೆ ವಿಶೇಷ ಸಂಚಿಕೆ ಎಂಬುದು ತಮ್ಮೆಲ್ಲರಿಗೂ ತಿಳಿದ ವಿಷಯ. ಈ ಸಲದ ವಿಶೇಷ ಸಂಚಿಕೆಯ ಓದುಗರ ವೇದಿಕೆಯ ವಿಷಯ 'ಪರಿಸರ'.

ಪರಿಸರ ಎಂದಾಕ್ಷಣ ಕೇವಲ ಅರಣ್ಯ, ಗಿಡ, ಮರ ಮಾತ್ರವಲ್ಲ. ಅವನ್ನೂ ಒಳಗೊಂಡು ನೀರು, ಕೆರೆ, ನದಿ, ಅಂತರ್‌ಜಲ, ಗಾಳಿ, ಬೆಳಕು, ನಗರ ನೈರ್ಮಲ್ಯ, ವಾಯು ನೈರ್ಮಲ್ಯ, ಭೂಮಿಯ ಬಳಕೆ–ದುರ್ಬಳಕೆ ಎಲ್ಲ ವಿಷಯಗಳನ್ನೂ ಒಳಗೊಳ್ಳಬಹುದು. ಈ ವಿಷಯಗಳ ಕುರಿತು ೨೫೦ ಪದಗಳಿಗೆ ಮೀರದಂತೆ ಓದುಗರು ತಮ್ಮ ಅನಿಸಿಕೆ, ಅಭಿಪ್ರಾಯಗಳನ್ನು ಡಿಸೆಂಬರ್ ೧೦ ರೊಳಗೆ ತಲುಪುವಂತೆ ಕಳಿಸಬೇಕಾಗಿ ವಿನಂತಿ –ಸಂ.

ಸಂಬಂಧಗಳ ವಿಚಾರದಲ್ಲಿ ಸರ್ಕಾರಗಳ ನಿರ್ಲಿಪ್ತತೆಯನ್ನು ಬಯಸಿದ್ದ ಬಂಡವಳಿಗರ ಪ್ರಮುಖ ಬೇಡಿಕೆಯನ್ನು ಆಯೋಗ ಪುರಸ್ಕರಿಸಿತ್ತು. ಹಾಗಾಗಿ ಕಾರ್ಮಿಕರ ಪಾಡನ್ನು ನಿರ್ಧರಿಸುವ ಅಧಿಕಾರವನ್ನು ಮಾಲೀಕರಿಗೇ ನೀಡಿತ್ತು. ಕಾರ್ಮಿಕ ಸಂಘಗಳು "ಹೋರಾಟ ಸಮಿತಿ", "ಐಕ್ಯ ಹೋರಾಟ"ಗಳ ಮೂಲಕ ಸರ್ಕಾರಗಳ ನೀತಿಗಳನ್ನೇ ಪ್ರಶ್ನಿಸುವುದು ಸಲ್ಲದೆಂದು ತಿಳಿಸಿತು. ವೇತನ ಮಂಡಲಿಗಳ ಮೂಲಕ ನಡೆಯುವ ಸಾಮೂಹಿಕ ಚೌಕಾಸಿ ಅಸಮಂಜಸವೆಂದು ಅಭಿಪ್ರಾಯ ವ್ಯಕ್ತಪಡಿಸಿತು. ಕೈಗಾರಿಕಾ ವಿವಾದಗಳ ಕಾಯ್ದೆ, ಗುತ್ತಿಗೆ ಕಾರ್ಮಿಕ ಪದ್ಧತಿ ಕಾಯ್ದೆ, ಕಾರ್ಮಿಕ ಸಂಘಗಳ ಕಾಯ್ದೆಗೆ ಮಾಲೀಕರ ಇಚ್ಛೆಗನುಸಾರವಾಗಿ ಮಾರ್ಪಾಡುಗಳನ್ನು ಸೂಚಿಸಿತು. ಒಟ್ಟಾರೆ ಹೇಳುವುದಾದಲ್ಲಿ ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ವರದಿಯು ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಪ್ರಕ್ರಿಯೆಗಳಿಗೆ ಅನುಗುಣವಾಗಿದ್ದು, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಬಂಡವಾಳ ಮತ್ತು ಕೂಲಿಯ ನಡುವಿನ ನಿಜಜೀವನದ ಮೂಲಭೂತ ಸಂಘರ್ಷವನ್ನು ಅವಿತಿಡುವ ಪ್ರಯತ್ನವಾಗಿತ್ತು. ಒಂದನೇ ಕಾರ್ಮಿಕ ಆಯೋಗ ಸಮಾಜವಾದಿ ವ್ಯವಸ್ಥೆಯ ಪರಿಕಲ್ಪನೆ ಹೊಂದಿದ್ದರೆ, ಎರಡನೇ ಆಯೋಗ ಬಂಡವಾಳಶಾಹಿ ವ್ಯವಸ್ಥೆಯ ದಲ್ಲಾಳಿಯಂತೆ ವರ್ತಿಸಿತ್ತು. ಕಾರ್ಮಿಕ ಸಂಘಗಳ ಪ್ರತಿಭಟನೆ ಹಾಗೂ ತೀವ್ರ ವಿರೋಧದಿಂದಾಗಿ ಎರಡನೇ ಆಯೋಗದ ಶಿಫಾರಸ್ಸುಗಳು ಸಂಪೂರ್ಣವಾಗಿ ಜಾರಿಗೊಳ್ಳದೆ ನೆನೆಗುದಿಯಲ್ಲಿತ್ತು.

**ಸಂವಿಧಾನದ ಆಶಯ – ಬುಡಮೇಲು**

ಈ ದೇಶದಲ್ಲಿ ಚುನಾವಣೆಯ ಮೂಲಕ ಅಧಿಕಾರ ಪಡೆಯುವ ರಾಜಕೀಯ ಪಕ್ಷಗಳು ಸಂವಿಧಾನಾತ್ಮಕವಾಗಿ ಆಡಳಿತ ನಡೆಸಬೇಕು. ಅಂದರೆ ಸಂವಿಧಾನದ ಗೊತ್ತು-ಗುರಿ ಮತ್ತು ಆಶಯಗಳನ್ನು ಈಡೇರಿಸಲು ಪ್ರಯತ್ನಿಸಬೇಕು. ಸಮಾನತೆ, ಸಮಾನಾವಕಾಶ, ಸಂಪನ್ಮೂಲಗಳ ಸಮಾನ ಹಂಚಿಕೆ, ಕಲ್ಯಾಣಕಾರಿ ರಾಜ್ಯ ವ್ಯವಸ್ಥೆ, ಬದುಕುವ ಹಕ್ಕು, ಶೋಷಣೆಯನ್ನು ವಿರೋಧಿಸುವ ಹಕ್ಕು, ಧರ್ಮ ಸ್ವಾತಂತ್ರ್ಯದ ಹಕ್ಕು, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಹಕ್ಕುಗಳು ಮುಂತಾದವು ಭಾರತ ಸಂವಿಧಾನದ ಮೂಲಭೂತ ಹಕ್ಕುಗಳು ಮತ್ತು ರಾಜ್ಯ ನೀತಿಯ ನಿರ್ದೇಶಕ ತತ್ವಗಳು. ಹೊಸ ಆರ್ಥಿಕ ನೀತಿ ಈ ದೇಶದಲ್ಲಿ ಜಾರಿಗೊಂಡ ನಂತರ ಸರ್ಕಾರದಲ್ಲಿದ್ದ ಕಾಂಗ್ರೆಸ್, ಬಿ.ಜೆ.ಪಿ., ಇತ್ಯಾದಿ ಪಕ್ಷಗಳು ಸಂವಿಧಾನದ ಉದ್ದೇಶಗಳಿಗೆ ವಿರುದ್ಧವಾಗಿ ನಡೆದುಕೊಂಡಿವೆ. ದೇಶೀಯ ಹಾಗೂ ವಿದೇಶೀಯ ಬಂಡವಾಳ ಹೂಡಿಕೆಯೇ ಈ ದೇಶದ ಅಭಿವೃದ್ಧಿಗೆ ಸಿದ್ಧೌಷಧವೆಂಬ ಪ್ರಚಾರ ಸತತವಾಗಿ ನಡೆದಿದೆ. ಖಾಸಗಿ ಬಂಡವಾಳ ಹೂಡಿಕೆಗೆ ಅಗತ್ಯವಾದ ರಂಗಸಜ್ಜಿಕೆಯ ಕೆಲಸ ತ್ವರಿತಗತಿಯಲ್ಲಿ ಸಾಗಿದೆ. ೧೯೯೧-೨೦೦೪ರಿಂದ ಸುಮಾರು ೧೬ ವರ್ಷಗಳ ಅವಧಿಯ ಆಡಳಿತದಲ್ಲಿ ಯು.ಪಿ.ಎ. ಸರ್ಕಾರ ಸುಮಾರು ೧,೧೮,೦೦೦ ಕೋಟಿ ರೂಪಾಯಿಗಳಷ್ಟು ಬಂಡವಾಳವನ್ನು



ಸಾರ್ವಜನಿಕ ಕ್ಷೇತ್ರಗಳಿಂದ ಖಾಸಗೀಕರಿಸಿದ್ದರೆ, ಎನ್.ಡಿ.ಎ. ಸರ್ಕಾರ ತನ್ನ ೬ ವರ್ಷದ ಅಧಿಕಾರಾವಧಿಯಲ್ಲೇ ಸುಮಾರು ೭೨,೦೦೦ ಕೋಟಿ ರೂಪಾಯಿಗಳಷ್ಟು ಬಂಡವಾಳವನ್ನು ಸಾರ್ವಜನಿಕ ಉದ್ದಿಮೆಗಳಿಂದ ಹಿಂಪಡೆದು ಖಾಸಗೀಕರಿಸಿದೆ. ಮೋದಿ ಸರ್ಕಾರ ೨೦೧೪-೧೫ರ ಅವಧಿಯಲ್ಲೇ ಸಾರ್ವಜನಿಕ ಉದ್ದಿಮೆಗಳಿಂದ ಹಿಂತೆಗೆದ ಪ್ರಮಾಣ ೪೩,೪೨೫ ಕೋಟಿ ರೂಪಾಯಿಗಳೆಂದರೆ ಈ ದೇಶವನ್ನು ಮಾರಾಟ ಮಾಡುತ್ತಿದ್ದಾರೆಯೇ ಎಂಬ ಆತಂಕ ಹುಟ್ಟುತ್ತದೆ.

**ಸುಲಿಗೆಗೆ ರಂಗಸಜ್ಜಿಕೆ**

"ಮೇಕ್ ಇನ್ ಇಂಡಿಯ" ಎಂಬ ಘೋಷಣೆಯ ಅಂತರಾರ್ಥವೆಂದರೆ ರಫ್ತು ಆಧಾರಿತ ಕೈಗಾರಿಕಾ ಬೆಳವಣಿಗೆ. ಅಂದರೆ ವಿಶ್ವದ ಮಾರುಕಟ್ಟೆಗಾಗಿ ಪೈಪೋಟಿ. ವಿದೇಶೀ ಬಂಡವಾಳಗಾರರು ಭಾರತದಲ್ಲಿ ಬಂಡವಾಳ ಹೂಡಬೇಕೆಂದರೆ ಅವರು ಈ ದೇಶದಲ್ಲಿ ಉತ್ಪಾದಿಸುವ ಉತ್ಪನ್ನಗಳು ಕಡಿಮೆ ಖರ್ಚಿನಲ್ಲಾಗ ಬೇಕು. ಅದು ಸಾಧ್ಯವಾಗಬೇಕೆಂದರೆ ಕಾರ್ಮಿಕರ ಕೂಲಿ ಕನಿಷ್ಠವಾಗ ಬೇಕು, ಕೆಲಸದ ಅವಧಿ ಗರಿಷ್ಠವಾಗ ಬೇಕು. ಕಾರ್ಮಿಕರಲ್ಲಿನ ಶಿಸ್ತು ಹೆಚ್ಚಾಗಬೇಕು, ಕಾರ್ಮಿಕ ಕಾನೂನುಗಳು, ಭೂ ಕಾನೂನುಗಳು, ಅರಣ್ಯ ಕಾನೂನುಗಳು ಮತ್ತು ಪರಿಸರ ಕಾನೂನುಗಳು ಪೂರಾ ಸಡಿಲಗೊಳ್ಳಬೇಕು. ನರೇಂದ್ರ ಮೋದಿ ಈಗ ಮಾಡಲು ಹೊರಟಿರುವುದು ಇದೇ. ಮೋದಿಯದು ದ್ವಿಮುಖ ವ್ಯಕ್ತಿತ್ವ. ಈತ ಹೇಳುವುದೇ ಒಂದು, ಮಾಡುವುದೇ ಇನ್ನೊಂದು. ೧೬, ಅಕ್ಟೋಬರ್ ೨೦೧೪ರಂದು ಮಾಡಿದ ಭಾಷಣದಲ್ಲಿ ಕಾರ್ಮಿಕನನ್ನು "ಶ್ರಮಯೋಗಿ", "ರಾಷ್ಟ್ರಯೋಗಿ", "ರಾಷ್ಟ್ರನಿರ್ಮಾತ" ಎಂದೆಲ್ಲ ಕರೆದು ಅದೇ ಸಮಯದಲ್ಲೇ ಶ್ರಮಜೀವಿಗಳ ಹಕ್ಕನ್ನು ಮೊಟಕುಗೊಳಿಸಿ, ಅವರನ್ನು ಬಂಡವಳಿಗರ ಸುಲಿಗೆಗೆ ಒಪ್ಪಿಸಲು ಪೂರಕವಾಗಿ ಕಾರ್ಮಿಕ ಕಾನೂನುಗಳನ್ನು ತಿದ್ದುಪಡಿ ಮಾಡಲು ತಯಾರಿ ನಡೆಸಿರುವುದು ಈತನ ಇಬ್ಬಗೆ ನೀತಿಗೆ ನಿದರ್ಶನಗಳಲ್ಲೊಂದು.

**ಕಾನೂನು ತಿದ್ದುಪಡಿ – ಪ್ರತಿರೋಧ**

ಭಾರತ ಸಂವಿಧಾನದ ಏಳನೇ ಅನುಸೂಚಿ ಸಮವರ್ತಿ ಪಟ್ಟಿಯಲ್ಲಿ (ಪಟ್ಟಿ-೩) ಕಾರ್ಮಿಕ ಸಂಘಗಳು, ಕೈಗಾರಿಕಾ ಮತ್ತು ಕಾರ್ಮಿಕ ವಿವಾದಗಳು, ಸಾಮಾಜಿಕ ಭದ್ರತೆ, ಸಾಮಾಜಿಕ ವಿಮೆ, ಉದ್ಯೋಗ, ನಿರುದ್ಯೋಗ ಇತ್ಯಾದಿಗಳು ಸೇರಿವೆ. ಅಂದರೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಕಾರ್ಮಿಕ ಕಾನೂನು ಗಳಿಗೆ ತಿದ್ದುಪಡಿ ಮಾಡುವ ಅಧಿಕಾರ ಪಡೆದಿವೆ. ಕೇಂದ್ರದಲ್ಲಿ ಮೋದಿ ಸರ್ಕಾರ ಅಧಿಕಾರ ವಹಿಸಿಕೊಳ್ಳು ತ್ತಿದ್ದಂತೆಯೆ ರಾಜಸ್ತಾನದ ಭಾರತೀಯ ಜನತಾ ಪಕ್ಷದ ಸರ್ಕಾರ ಕಾರ್ಮಿಕ ಕಾಯ್ದೆಗಳಿಗೆ ಹಲವಾರು ತಿದ್ದುಪಡಿಗಳನ್ನು ಮಾಡಿ ರಾಷ್ಟ್ರಾಧ್ಯಕ್ಷರ ಅನುಮೋದನೆಗೆ ಕಳುಹಿಸಿದೆ. ರಾಜಸ್ತಾನ ಸರ್ಕಾರ ತೆಗೆದುಕೊಂಡ ಕ್ರಮವನ್ನು ಕಾರ್ಮಿಕ ಸಂಘಟನೆಗಳು, ಭಾರತೀಯ ಮಜ್ದೂರ್ ಸಂಘವೂ ಸೇರಿದಂತೆ, ತೀವ್ರ ಪ್ರತಿರೋಧವನ್ನು ವ್ಯಕ್ತಪಡಿಸಿ ಎರಡು ದಿನ ಮುಷ್ಕರ ನಡೆಸಿದ್ದು ಮುಂದೆ ರಾಷ್ಟ್ರಾದ್ಯಂತ ಮೂಡಿಬರಲಿರುವ ಹೋರಾಟದ ಮುನ್ಸೂಚನೆಯಾಗಿದೆ.

**ಕಾರ್ಪೊರೇಟ್ ಮೋದಿ**

ಮೋದಿ ಮತ್ತು ಬಿ.ಜೆ.ಪಿ.ಯ ಲೋಕಸಭಾ ಚುನಾವಣಾ ಪ್ರಚಾರದ ವೆಚ್ಚವನ್ನು ಭರಿಸಿದ್ದು ಕಾರ್ಪೊರೇಟ್ ಒಡೆಯರು ಎಂಬುದು ಈಗ ಸಾಮಾನ್ಯ ಜನರಿಗೂ ಗೊತ್ತಾಗಿರುವ ವಿಷಯ. ಮೋದಿ ಸರ್ಕಾರಕ್ಕೆ ಈಗ ಅದರ ಋಣ ತೀರಿಸುವ ಸಮಯ. ೨೦೧೪-೧೫ರ ಬಜೆಟ್ ಮೂಲಕ ಲಕ್ಷಾಂತರ ಕೋಟಿ ರೂಪಾಯಿಗಳ ರಿಯಾಯಿತಿ ಗಳನ್ನು ಕೊಟ್ಟು ಅದರೊಂದಿಗೇ ಕಾರ್ಮಿಕ ಕಾನೂನುಗಳನ್ನು ತಿದ್ದುಪಡಿ ಮಾಡಿ ಬಂಡವಳಿಗರನ್ನು ಸಂಪ್ರೀತಗೊಳಿಸಹೊರಟಿದೆ. ಮೊದಲ ಕಂತಿನಲ್ಲಿ ಕಾರ್ಖಾನೆಗಳ ಕಾಯ್ದೆ ೧೯೪೮, ಅಪ್ರೆಂಟೀಸ್ ಕಾಯ್ದೆ ೧೯೬೧, ಮತ್ತು ಕಾರ್ಮಿಕ ಕಾನೂನುಗಳಲ್ಲಿ ಸೂಚಿಸಿರುವ ಮಾಹಿತಿ ಪತ್ರಗಳ ಸಲ್ಲಿಸುವಿಕೆಯಿಂದ ವಿನಾಯ್ತಿ ಕಾಯ್ದೆಗಳನ್ನು ತಿದ್ದುಪಡಿ ಮಾಡುವ ಮಸೂದೆಗಳನ್ನು ತಾರೀಖು ೦೭-೦೮-೨೦೧೪ ರಂದು ಲೋಕಸಭೆಯಲ್ಲಿ ಮಂಡಿಸಲಾಗಿದೆ. ಇದರ ಹಿಂದೆಯೇ ಕೈಗಾರಿಕಾ ವಿವಾದಗಳ ಕಾಯ್ದೆ ೧೯೪೭, ಮತ್ತು ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ರದ್ದತಿ) ಕಾಯ್ದೆ ೧೯೭೦ ತಿದ್ದುಪಡಿ ಮಸೂದೆಗೆ ಎಲ್ಲ ಸಿದ್ಧತೆಗಳೂ ನಡೆದಿವೆ.

**ಕಾರ್ಖಾನೆಗಳ ಕಾಯ್ದೆ, ೧೯೪೮**

ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕೊಡಬೇಕಾದ ಸೌಲಭ್ಯಗಳು ಮತ್ತು ಸುರಕ್ಷತೆಯ ಬಗ್ಗೆ ಮಾಲೀಕರ ಜವಾಬ್ದಾರಿಯನ್ನು ಕಾರ್ಖಾನೆಗಳ ಕಾಯ್ದೆ ಗೊತ್ತುಪಡಿಸಿದೆ. ಈ ಕಾಯ್ದೆಯ ಪ್ರಕಾರ ಕಾರ್ಖಾನೆ ಎಂದರೆ ಯಂತ್ರಶಕ್ತಿ ಬಳಸಿ ೧೦ ಕಾರ್ಮಿಕರನ್ನು ಉತ್ಪಾದನೆಯಲ್ಲಿ ತೊಡಗಿಸಿದ್ದರೆ ಅಥವಾ ಯಂತ್ರಶಕ್ತಿ ಇಲ್ಲದೆ ೨೦ ಕಾರ್ಮಿಕರೊಂದಿಗೆ ಉತ್ಪಾದನಾ ಕ್ರಿಯೆ ನಡೆದಲ್ಲಿ ಅಂತಹ ಉದ್ದಿಮೆ ಕಾರ್ಖಾನೆಯ ಅರ್ಥವ್ಯಾಪ್ತಿಯಲ್ಲಿ ಬರುತ್ತದೆ. ಈಗ ಕಾರ್ಮಿಕರ ಸಂಖ್ಯೆಯನ್ನು ೪೦ಕ್ಕೆ ಏರಿಸಲು

ತಿದ್ದುಪಡಿ ಮಸೂದೆಯಲ್ಲಿ ಪ್ರಸ್ತಾಪಿಸಲಾಗಿದೆ. ಅಂದರೆ ೪೦ಕ್ಕಿಂತ ಕಡಿಮೆ ಕಾರ್ಮಿಕರಿದ್ದಲ್ಲಿ, ಅಂತಹ ಉದ್ದಿಮೆಗೆ ಕಾರ್ಖಾನೆಗಳ ಕಾಯ್ದೆ ಅನ್ವಯವಾಗುವುದಿಲ್ಲ. ಈ ತಿದ್ದುಪಡಿ ಬಂದಲ್ಲಿ ಸುಮಾರು ೧,೭೫,೦೦೦ ಕಾರ್ಖಾನೆಗಳು ಈಗಿರುವ ಕಾಯ್ದೆಯಿಂದ ಹೊರಬೀಳುತ್ತವೆ. ಮತ್ತೊಂದು ತಿದ್ದುಪಡಿಯ ಪ್ರಕಾರ ಇನ್ನು ಮುಂದೆ ಮಹಿಳಾ ಕಾರ್ಮಿಕರನ್ನು ರಾತ್ರಿ ಪಾಳಿಯಲ್ಲೂ ಕೆಲಸಕ್ಕೆ ಹಚ್ಚಬಹುದು. ಇಂದಿನ ಭಯಾನಕ ವಾತಾವರಣದಲ್ಲಿ ಮಹಿಳಾ ಕಾರ್ಮಿಕರಿಗೆ ಸಿಗದ ರಕ್ಷಣೆಯ ಬಗ್ಗೆ ಯೋಚಿಸಿದಾಗ ಇದು ಸಮಂಜಸ ತಿದ್ದುಪಡಿಯಲ್ಲವೆಂದು ಗೊತ್ತಾಗುತ್ತದೆ. ಇನ್ನೊಂದು ತಿದ್ದುಪಡಿಯ ಪ್ರಕಾರ ಹೆಚ್ಚುವರಿ ಅವಧಿಗೆ ಕೆಲಸದ ಮಿತಿಯನ್ನು ಮೂರು ತಿಂಗಳ ಅವಧಿಯಲ್ಲಿ ೫೦ ಗಂಟೆಗಳಿಂದ ೧೦೦ ಗಂಟೆಗಳಿಗೆ ಮತ್ತು ವಿಶೇಷ ಸಂದರ್ಭಗಳಲ್ಲಿ ೧೨೫ ಗಂಟೆಗಳಿಗೆ ಏರಿಸಲಾಗಿದೆ. ಹೆಚ್ಚುವರಿ ಅವಧಿ ಕೆಲಸ ಕೊಟ್ಟಾಗ ಕಾರ್ಮಿಕ ಅದನ್ನು ಮಾಡಲು ನಿರಾಕರಿಸುವಂತಿಲ್ಲ. ಅಂದರೆ ಕಾರ್ಮಿಕನ ಕೆಲಸದ ಅವಧಿಯನ್ನು ಈ ಮೂಲಕ ಹೆಚ್ಚಿಸಲಾಗಿದೆ.

**ಅಪ್ರೆಂಟೀಸ್ ಕಾಯ್ದೆ, ೧೯೬೧**

ತಾಂತ್ರಿಕ ಶಿಕ್ಷಣ ಶಾಲೆಗಳಿಂದ ಮತ್ತಿತರ ಶಾಲೆ ಗಳಿಂದ ಹೊರಬರುವ ವಿದ್ಯಾರ್ಥಿಗಳಿಗೆ ವೃತ್ತಿ ತರಬೇತಿಯನ್ನು ಕೈಗಾರಿಕೆಗಳು ಅಪ್ರೆಂಟೀಸ್ ಕಾಯ್ದೆಯಲ್ಲಿ ಸೂಚಿಸಿರುವ ಅವಧಿಗೆ ಕೊಡಬೇಕು. ಪ್ರಸ್ತುತ ಕಾನೂನಿನನ್ವಯ ಪ್ರತಿವರ್ಷ ಸುಮಾರು ೩ ಲಕ್ಷ ಅಭ್ಯರ್ಥಿಗಳು ವೃತ್ತಿಶಿಕ್ಷಣ ಪಡೆಯುತ್ತಾರೆ. ಈಗ ಇದನ್ನು ೨೩ ಲಕ್ಷಕ್ಕೇರಿಸಲು ತಿದ್ದುಪಡಿಯಲ್ಲಿ ಪ್ರಸ್ತಾಪಿಸಲಾಗಿದೆ. ಹಾಗೆಯೇ ಮಾಲೀಕರು ಯಾವ ವೃತ್ತಿಯಲ್ಲಿ ತರಬೇತಿ ಕೊಡಬೇಕೆಂದು ಅವರ ನಿರ್ಧಾರಕ್ಕೆ ಬಿಡಲಾಗಿದೆ. ಸುಮಾರು ೫೦೦ ವೃತ್ತಿಗಳನ್ನು ಗುರುತಿಸಲಾಗಿದೆ. ಈ ರೀತಿ ವೃತ್ತಿ ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ಕಾರ್ಖಾನೆಗಳಲ್ಲಿ ಯಂತ್ರಗಳ ಮೇಲೆ ನೇರ ಕೆಲಸ ಮಾಡಬಹುದು ಎಂಬುದೇ ವಿವಾದಕ್ಕೆಡೆ ಮಾಡಿರುವುದು. ಮಾಲೀಕರು ಇವರನ್ನು ಕಡಿಮೆ ವೇತನಕ್ಕೆ ದುಡಿಸಿಕೊಂಡು ಹೊರಹಾಕುವ ಸಾಧ್ಯತೆಗಳೇ ಹೆಚ್ಚು. ಅಪ್ರೆಂಟೀಸ್ ಗಳನ್ನು ವಿವಿಧ ವೃತ್ತಿಗಳಲ್ಲಿ ನೇಮಕ ಮಾಡಿಕೊಳ್ಳುವ ಅಧಿಕಾರ ಪಡೆಯುವುದರಿಂದ ಖಾಯಂ ಕೆಲಸಗಾರರ ಸಂಖ್ಯೆ ಇಳಿಯುವ ಸಾಧ್ಯತೆಗಳಿವೆ. ಇದು ಆತಂಕಕಾರಿ.

**ಮಾಹಿತಿ ಪತ್ರ ಸಲ್ಲಿಕೆ ಕಾಯ್ದೆ**

ಮಾಲೀಕರ ಇನ್ನೊಂದು ಪ್ರಮುಖ ಬೇಡಿಕೆಯೆಂದರೆ ಈಗಿರುವ ಕಾರ್ಮಿಕ ಕಾನೂನು ಗಳಲ್ಲಿ ಅಧಿಕಾರಿಗಳು ಉದ್ದಿಮೆಗಳಿಗೆ ಪ್ರವೇಶಿಸಿ ತನಿಖೆ ಮಾಡುವ ಅಧಿಕಾರ ಅಂತ್ಯಗೊಳ್ಳ ಬೇಕೆಂಬುದು, ಮತ್ತು ಅವರು ಕಾರ್ಮಿಕ ಹಾಗೂ ಇತರೆ ಇಲಾಖೆಗಳಿಗೆ ಕಾಲಕಾಲಕ್ಕೆ ಸಲ್ಲಿಸಬೇಕಾದ ಮಾಹಿತಿ ಪತ್ರಗಳನ್ನು ರದ್ದುಗೊಳಿಸಬೇಕೆಂಬುದು. ಮೋದಿ ಸರ್ಕಾರ ಮಾಲೀಕರ ಈ ಬೇಡಿಕೆಯನ್ನು ಒಪ್ಪಿ ತತ್ಸಂಬಂಧ ಮಸೂದೆಯನ್ನು ಲೋಕಸಭೆಯ ಮುಂದೆ ಮಂಡಿಸಿದೆ. ಅಂದರೆ ಇನ್ನು ಮುಂದೆ ಮಾಲೀಕರ ಮೇಲಿನ ಸರ್ಕಾರದ ನಿಯಂತ್ರಣ ಕಡಿಮೆಯಾಗಲಿದೆ. ಉದ್ದಿಮೆಗಳ ಬಗ್ಗೆ ಅಂಕಿ-ಅಂಶಗಳು ದೊರೆಯುವುದಂತೂ ದೂರದ ಮಾತು.

**ಕನಿಷ್ಠ ಕೂಲಿ ಕಾಯ್ದೆ ೧೯೪೮**

ಕನಿಷ್ಠ ಕೂಲಿ ಕಾಯ್ದೆಗೆ ಇನ್ನೊಂದು ಗಮನಾರ್ಹ ತಿದ್ದುಪಡಿ ತರಲು ಕೇಂದ್ರ ಸರ್ಕಾರ ಮಸೂದೆಯನ್ನು ಲೋಕಸಭೆಯ ಮುಂದೆ ಮಂಡಿಸಿದೆ. ಪ್ರಸ್ತುತ ಕಾನೂನಿನನ್ವಯ ಕನಿಷ್ಠ ಕೂಲಿ ಕಾಯ್ದೆಯ ಅನುಸೂಚಿಯಲ್ಲಿರುವ ಉದ್ದಿಮೆಗಳಿಗೆ ಮಾತ್ರ ಸರ್ಕಾರ ನಿರ್ಧರಿಸಿದ ಕನಿಷ್ಠ ಕೂಲಿ ಜಾರಿಯಾಗುತ್ತದೆ. ಇದನ್ನು ಎಲ್ಲ ಉದ್ದಿಮೆಗಳಿಗೂ ಅನ್ವಯಿಸುವಂತೆ ತಿದ್ದುಪಡಿ ಮಾಡಿರುವುದು ಸ್ವಾಗತಾರ್ಹವಾದರೂ "ಮೇಕ್ ಇನ್ ಇಂಡಿಯ" ನೀತಿ ಎಲ್ಲ ಕಾರ್ಮಿಕರನ್ನೂ ಕನಿಷ್ಠ ಕೂಲಿಯ ಆವರಣಕ್ಕೆ ತಳ್ಳಬಹುದಾದ ಸಾಧ್ಯತೆಗಳು ಈ ತಿದ್ದುಪಡಿಯನ್ನು ಅನುಮಾನಿಸುವಂತೆ ಮಾಡಿದೆ. ಮೇಲಾಗಿ ಕನಿಷ್ಠ ಕೂಲಿಯನ್ನು ಹೆಚ್ಚಿಸಬೇಕೆಂಬ ಕಾರ್ಮಿಕ ಸಂಘಗಳ ಬೇಡಿಕೆಗೆ ಸರ್ಕಾರಗಳು ಸ್ಪಂದಿಸಿಲ್ಲ.

**ಸಣ್ಣ ಕಾರ್ಖಾನೆಗಳ ಕಾಯ್ದೆ**

ದೇಶದ ಸಣ್ಣ ಉದ್ದಿಮೆದಾರರು ಈಗಿರುವ ಕಾರ್ಮಿಕ ಕಾನೂನುಗಳಿಂದ ತಮ್ಮನ್ನು ಮುಕ್ತರನ್ನಾಗಿಸ ಬೇಕೆಂಬ ಬೇಡಿಕೆಯನ್ನು ಎರಡನೇ ರಾಷ್ಟ್ರೀಯ ಕಾರ್ಮಿಕ ಆಯೋಗದ ಮುಂದೆ ಮಂಡಿಸಿದ್ದರು. ಸಣ್ಣ ಉದ್ದಿಮೆಗಳ ಕಾರ್ಮಿಕರಿಗೆ ಅನ್ವಯವಾಗುವಂತಹ ಬೇರೆ ಕಾಯ್ದೆಯನ್ನೇ ರಚಿಸಬೇಕೆಂದು ಆಯೋಗ ಶಿಫಾರಸ್ಸು ಮಾಡಿತ್ತು. ಕೇಂದ್ರ ಸರ್ಕಾರ ಈಗ ಅದಕ್ಕೆ ಚಾಲನೆ ನೀಡಿದೆ. ಕಾರ್ಖಾನೆಗಳ ಕಾಯ್ದೆ, ೧೯೪೮ಕ್ಕೆ ಮಾಡಿರುವ ತಿದ್ದುಪಡಿಯ ಪ್ರಕಾರ ಒಂದು ಕಾರ್ಖಾನೆಯಲ್ಲಿ ೪೦ಕ್ಕಿಂತ ಕಡಿಮೆಯಿದ್ದಲ್ಲಿ ಕಾರ್ಖಾನೆಗಳ ಕಾಯ್ದೆ ಅನ್ವಯವಾಗದ ಕಾರಣ ಹೊಸದೊಂದು ಕಾಯ್ದೆಯನ್ನು ರಚಿಸಿ ಲೋಕಸಭೆಯ ಮುಂದೆ ಮಂಡಿಸಲಾಗಿದೆ. ಸಣ್ಣ ಕಾರ್ಖಾನೆಗಳ ಕಾಯ್ದೆ ಅನೇಕ ಕಾರ್ಮಿಕ ಕಾನೂನುಗಳ ಮಿಶ್ರತಳಿ. ಆದರೆ ಇಲ್ಲಿ ಎಲ್ಲವೂ ಸಣ್ಣ ಪ್ರಮಾಣದ್ದೇ: ಕನಿಷ್ಠ ಕೂಲಿ, ಕನಿಷ್ಠ ಬೋನಸ್ ಇತ್ಯಾದಿ. "ಕಾರ್ಮಿಕ" ಎಂಬ ಅರ್ಥವ್ಯಾಪ್ತಿಯಲ್ಲಿ ಗುತ್ತಿಗೆ ಕಾರ್ಮಿಕನೂ ಸೇರಿರುವುದರಿಂದ ಸಣ್ಣ ಕಾರ್ಖಾನೆಯ ಎಲ್ಲ ಕಾರ್ಮಿಕರೂ ಗುತ್ತಿಗೆ ಪದ್ಧತಿಯಲ್ಲಿರಬಹುದು. ಈ ಕಾರ್ಖಾನೆಗಳಲ್ಲಿ ಖಾಯಂ ಕೆಲಸಗಾರರೇ ಇಲ್ಲದಿರಬಹುದು. ಹಾಗಾಗಿ ಇಲ್ಲಿ ಕಾರ್ಮಿಕ ಸಂಘಗಳು ಹುಟ್ಟಿ ಬೆಳೆದು ನಿಲ್ಲುವ ಸಂಭವ ಕಡಿಮೆ. ಸಣ್ಣ ಪ್ರಮಾಣದ ಕಾರ್ಖಾನೆಗಳಿಗೆ ೧೪ ಪ್ರಮುಖ ಕಾನೂನುಗಳು ಅನ್ವಯವಾಗುವುದಿಲ್ಲ. ಸಣ್ಣ ಕೈಗಾರಿಕೆಗಳ ಮಾಲೀಕರಿಗಂತೂ ಆರಾಮ, ನಿರಾಳ.

**ಶೋಷಣೆಯ ಸ್ವಾತಂತ್ರ್ಯ – ಮಾಲೀಕರ ಬೇಡಿಕೆ**

ಕೈಗಾರಿಕೋದ್ಯಮಿಗಳು ಮೇಲೆ ವಿವರಿಸಿದ ತಿದ್ದುಪಡಿಗಳಿಂದ ತೃಪ್ತರಾಗುವುದಿಲ್ಲ. ಅವರಿಗೆ ಕೈಗಾರಿಕಾ ವಿವಾದಗಳ ಕಾಯ್ದೆ ೧೯೪೭ರ ಕೆಲವು ಪರಿಚ್ಛೇದಗಳು ಮತ್ತು ಗುತ್ತಿಗೆ ಕಾರ್ಮಿಕ ಪದ್ಧತಿ ಕಾಯ್ದೆಯ ನಿಯಮಗಳು ತಿದ್ದುಪಡಿಯಾಗಬೇಕು. ಬಂಡವಾಳ ಹೂಡಿಕೆಗೆ ಇರುವಷ್ಟೇ ಸ್ವಾತಂತ್ರ್ಯ ಬಂಡವಾಳ ಹಿಂತೆಗೆದು ಉದ್ದಿಮೆಯನ್ನು ಮುಚ್ಚುವ ಮತ್ತು ನಿರ್ಗಮಿಸುವುದಕ್ಕೆ ಇರಬೇಕೆಂದು ಇವರ ವಾದ. ಕಾರ್ಮಿಕರನ್ನು ಲೇ-ಆಫ್‌ಗೊಳಿಸಲು, ಕೆಲಸದಿಂದ ತೆಗೆಯಲು ಅಥವಾ ಕಾರ್ಖಾನೆ ಮುಚ್ಚಲು ಅನಿರ್ಬಂಧಿತ ಸ್ವಾತಂತ್ರ್ಯ ಮಾಲೀಕರಿಗೆ ಇರಬೇಕು. ಸರ್ಕಾರ ಇದರಲ್ಲಿ ಮಧ್ಯ ಪ್ರವೇಶಿಸಬಾರದೆಂಬುದು ಇವರ ಬೇಡಿಕೆ. ರಾಜಸ್ತಾನ, ಮಧ್ಯಪ್ರದೇಶ ಮತ್ತು ಹರ್ಯಾಣ ಸರ್ಕಾರಗಳು ಇದಕ್ಕೆ ಸಮ್ಮತಿಸಿವೆ. ಈಗ ಕೇಂದ್ರ ಸರ್ಕಾರ ಮಾಲೀಕರ ಈ ಬೇಡಿಕೆಯನ್ನು ಒಪ್ಪಿ ಎರಡನೇ ಕಂತಿನ ತಿದ್ದುಪಡಿಗಳನ್ನು ಮಾಡಲು ತಯಾರಿ ನಡೆಸಿದೆ. ಅದೇ ರೀತಿ ಗುತ್ತಿಗೆ ಕಾರ್ಮಿಕ (ನಿಯಂತ್ರಣ ಮತ್ತು ರದ್ದತಿ) ಕಾಯ್ದೆ, ೧೯೭೦ಕ್ಕೂ ಹಲವಾರು ತಿದ್ದುಪಡಿಗಳ ಮೂಲಕ ಇಡೀ ಉದ್ಯೋಗ ವ್ಯವಸ್ಥೆಯನ್ನೇ ಗುತ್ತಿಗೆ ಕಾರ್ಮಿಕಮಯವಾಗಿಸಲಿದೆ. ಗುತ್ತಿಗೆ ಕಾರ್ಮಿಕ ಪದ್ಧತಿ ಅನಿಷ್ಟ ಪದ್ಧತಿಯೆಂದು ಸರ್ವೋಚ್ಚ ನ್ಯಾಯಾಲಯ ಖಂಡಿಸಿದ್ದರೂ, ಮೋದಿ ಸರ್ಕಾರ ಇದನ್ನೇ ಗರಿಷ್ಠ ಪದ್ಧತಿಯನ್ನಾಗಿಸಿ ಕಾರ್ಮಿಕರನ್ನು ಶೋಷಣೆಗೆ ಒಡ್ಡಲು ಸಜ್ಜಾಗಿದೆ.

**ತೀವ್ರ ದಾಳಿಗೆ ತೀವ್ರ ಪ್ರತಿದಾಳಿ**

ಈ ದೇಶದಲ್ಲಿ ಸಂಘಟಿತರಾಗಿರುವ ಕಾರ್ಮಿಕರು ಕೇವಲ ೭% ಎಂಬುದು ತಿಳಿದ ವಿಚಾರ. ಆದರೆ ಉತ್ಪಾದನಾ ಮತ್ತಿತರ ಕ್ಷೇತ್ರಗಳಲ್ಲಿ ಸಂಘಟಿತ ಕಾರ್ಮಿಕರ ಶಕ್ತಿಯ ಪರಿಚಯ ಸರ್ಕಾರ ಮತ್ತು ಮಾಲೀಕರಿಗಿದೆ. ಆದ ಕಾರಣವೇ ಕಾರ್ಮಿಕ ಕಾನೂನುಗಳನ್ನು ತಿದ್ದುಪಡಿ ಮಾಡಿ ಸಂಘಟಿತ ಕಾರ್ಮಿಕರನ್ನು ಅಸಂಘಟಿತರನ್ನಾಗಿಸುವ ಪ್ರಯತ್ನ ನಡೆದಿದೆ. ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ (ಐ.ಎಲ್.ಒ.)ಯ ಮುಖ್ಯ ಧ್ಯೇಯೋದ್ದೇಶಗಳಾದ ಸಂಘಟನಾ ಸ್ವಾತಂತ್ರ್ಯ ಮತ್ತು ಸಾಮೂಹಿಕ ಚೌಕಾಸಿಯ ಹಕ್ಕು ಚ್ಯುತಿಗೊಳ್ಳುವ ಸಂದರ್ಭ ಬಂದಿದೆ. ಉದ್ಯೋಗದ ಸ್ವರೂಪವೇ ಬದಲಾಗುತ್ತಿದೆ. ಖಾಯಂ ಉದ್ಯೋಗಗಳ ಬದಲು ಅನಿಶ್ಚಿತ ಹಾಗೂ ಅತಂತ್ರ ಉದ್ಯೋಗಗಳು ತಲೆ ಎತ್ತಿವೆ. ಸರ್ಕಾರ ಮತ್ತು ಮಾಲೀಕರು ಇದನ್ನೇ "ಅಭಿವೃದ್ಧಿ" ಎಂದು ಪ್ರಚಾರ ಮಾಡುತ್ತಿದ್ದಾರೆ. ನ್ಯಾಯಾಲಯಗಳೂ ಕೂಡ ಇದಕ್ಕೆ ತಲೆದೂಗುತ್ತಿವೆ. ಹಿಂದೆ ಕಾರ್ಮಿಕ ವರ್ಗ ಹಕ್ಕುಗಳನ್ನು ಪಡೆಯಲು ಹೋರಾಟದ ಅಸ್ತ್ರವನ್ನು ಬಳಸಿತ್ತು. ಈಗ ಹಕ್ಕುಗಳನ್ನು ಉಳಿಸಿಕೊಳ್ಳಲೂ ಕಾರ್ಮಿಕ ವರ್ಗಕ್ಕೆ ಹೋರಾಟವೇ ದಾರಿ. ದಾಳಿ ತೀವ್ರವಾಗಿರುವುದರಿಂದ ಅದಕ್ಕೆ ಪ್ರತಿದಾಳಿಯೂ ತೀವ್ರವಾಗಿರಲೇಬೇಕು. ಇದೇ ಡಿಸೆಂಬರ್ ೫ರಂದು ರಾಷ್ಟ್ರವ್ಯಾಪಿ ನಡೆಯಲಿರುವ ಕಾರ್ಮಿಕರ ಪ್ರತಿಭಟನೆ ಮುಂಬರುವ ವರ್ಗ ಸಂಘರ್ಷದ ಕಹಳೆಯ ಕೂಗಾಗಲಿ ಎಂದು "ಹೊಸತು" ಹಾರೈಸುತ್ತದೆ.

**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ೨ನೇ ಮಹಡಿ, ಡೈಯಾಗೊನಲ್ ರಸ್ತೆ
ವಿ. ವಿ. ಪುರಂ, ಬೆಂಗಳೂರು – ೫೬೦ ೦೦೪







**ದಿನಚರಿಯ ಕಡೇ ಪುಟದಿಂದ...** (ಕಥೆಗಳು)

ಜಯಶ್ರೀ ಕಾಸರವಳ್ಳಿ

**ಪುಟ : xvi + ೧೨೨ = ೧೩೮**

**ಬೆಲೆ : ರೂ. ೧೧೦**

**ಮನೋಹರ ಗ್ರಂಥ ಮಾಲಾ** ಲಕ್ಷ್ಮೀ ಭವನ ಸುಭಾಷ್ ರಸ್ತೆ, ಧಾರವಾಡ – ೫೮೦ ೦೦೧

ಜಯಶ್ರೀ ಕಾಸರವಳ್ಳಿಯವರ 'ದಿನಚರಿಯ ಕಡೇ ಪುಟದಿಂದ...' ಕಥಾ ಸಂಕಲನ ಸ್ತ್ರೀ ಸಂವೇದನೆಯನ್ನು ವಿಭಿನ್ನವಾಗಿ ಪ್ರಸ್ತುತಪಡಿಸುವ ಕೃತಿ. ಒಟ್ಟು ಹತ್ತು ಕಥೆಗಳನ್ನು ಒಳಗೊಂಡಿರುವ ಈ ಕೃತಿಯಲ್ಲಿ ಜಯಶ್ರೀಯವರು ಆಪ್ತವಾಗಿ, ಪ್ರಸ್ತುತ ಸಿದ್ಧ ಮಾದರಿಗೆ ಭಿನ್ನವಾಗಿ ಕಥೆಗಳನ್ನು ಕಟ್ಟಿಕೊಟ್ಟಿದ್ದಾರೆ. ಸ್ತ್ರೀವಾದಿ ಚಿಂತನೆಗಳೆಂದರೂ ಬದುಕಿನ ಸಹಜಮಾರ್ಗದಲ್ಲಿ ಯಾವ ವ್ಯಾಖ್ಯಾನಗಳಿಲ್ಲದೆ ಪಾತ್ರವಾಗಿ, ನಿರೂಪಕಿಯಾಗಿ ಹೇಳಿದ ವಿಶಿಷ್ಟ ಶೈಲಿಯಲ್ಲಿ ಇಲ್ಲಿನ ಕಥೆಗಳಿವೆ. ಕಥಾವಸ್ತು ಬದುಕು ಕೇಂದ್ರಿತವಾಗಿದ್ದರೂ ನಿರೂಪಣಾ ವಿಧಾನದಲ್ಲಿ ಮಹಿಳೆಯ ನೋಟ ಇರುವುದರಿಂದ ಅತ್ಯಂತ ಸೂಕ್ಷ್ಮಸ್ತರದಲ್ಲಿ ಸ್ತ್ರೀವಾದಿ ಸಂವೇದನೆಗಳನ್ನು ಇಲ್ಲಿನ ಕತೆಗಳು ಸಾದರಪಡಿಸುತ್ತವೆ. ಪ್ರತಿಯೊಂದು ಕಥೆ ಭಿನ್ನಕಥಾವಸ್ತುವನ್ನು ಹೊಂದಿದ್ದರೂ ಆಶಯದ ದೃಷ್ಟಿಯಿಂದ ಕೇಂದ್ರಿಕೃತವಾಗಿದೆ. 'ಅಂಬುಜಾ ಕಂಡದ್ದೇನು ?' ಎಂಬ ಕಥೆ ಬದುಕಿನ ವಿಧಾನದಿಂದಲೇ ಪುರುಷಪ್ರಧಾನ ವ್ಯವಸ್ಥೆಯನ್ನು ಪ್ರಶ್ನಿಸುವ, ಧಿಕ್ಕರಿಸುವ ವಿಶಿಷ್ಟ ಕಥೆ. ಕಥಾನಾಯಕಿ ತನ್ನ ಅಮಾಯಕತನ ದಿಂದಲೇ ಸಂಕಲನದ ಎಲ್ಲ ಕಥೆಗಳ, ಸಂಕಲನದ ನಾಯಕಿಯಾಗಿ ನಿಲ್ಲುತ್ತಾಳೆ. ಭಾಷೆ, ತಂತ್ರಗಳಿಂದಲೂ ಇದು ವಿಭಿನ್ನ ಕೃತಿ.

– **ಶ್ರೀಸುಮಿತ್ರಾಸುತ,** ಅಗಸಬಾಳ




**ದೇವರಿದ್ದಾನೆ ! ಎಚ್ಚರಿಕೆ !!** (ಕಥಾ ಸಂಕಲನ) — ಪೂರ್ಣೇಶ್ ಮತ್ತಾವರ

**ಪುಟ : ೮೪** — **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಸಾಮಾಜಿಕ ಪರಿಸರದಿಂದ ಮೂಡಿಬಂದ ಇಲ್ಲಿನ ಕಥೆಗಳು ಸಂಘರ್ಷ ಅನಿವಾರ್ಯ ಎಂಬ ಸತ್ಯ ಹೇಳುತ್ತವೆ. ನಾವಿಂದು ಎಂತಹ ತಾರತಮ್ಯ ನೋಡುತ್ತಿದ್ದೇವೆ ? ಒಬ್ಬರು ಮೃಷ್ಟಾನ್ನ ಉಣ್ಣುತ್ತಿದ್ದರೆ ನೂರಾರು ಜನಕ್ಕೆ ಅಂಬಲಿಗೂ ಗತಿ ಇರುವುದಿಲ್ಲ. ವ್ಯವಸ್ಥೆಯನ್ನೇ ದರ್ಪಣದ ಮೂಲಕ ಪ್ರತಿಬಿಂಬಿಸಿ ಹೋರಾಟದ ದಾರಿಯತ್ತ ಶೋಷಿತರನ್ನು ಅಣಿನೆರೆಸುವುದು ಇಲ್ಲಿನ ಕಥೆಗಳ ಉದ್ದೇಶ. ಹೋರಾಟವೂ ಒಂದು ದಿಕ್ಕಿನಲ್ಲಿ ಸಾಗದೆ ಹಲವು ಕವಲುಗಳಾಗಿ ಒಡೆದಿರುವುದು ಇಂದಿನ ದುರಂತ. ಒಮ್ಮುಖ ಚಲನೆ ಇಲ್ಲದಿರುವುದೇ ಶೋಷಕರ ಕೈ ಮೇಲಾಗಲು ಕಾರಣ ! ಹೋರಾಟದ ದಾರಿಗೆ ಅಡ್ಡ ಬಂಡೆಕಲ್ಲುಗಳು ಎದುರಾಗುತ್ತವೆ. ಕಾರ್ಮಿಕ ನಾಯಕ – ಸತ್ಯಾಗ್ರಹಿಗಳಿಗೆ ಆಮಿಷ ಒಡ್ಡಿ ದಾರಿ ತಪ್ಪಿಸಲಾಗುತ್ತದೆ. ದೀನ ದಲಿತರು ಉದ್ಧಾರವಾದರೆ ಜೀತಕ್ಕೆ ಯಾರೆಂಬ ಆತಂಕ ಶೋಷಿತರಿಗೆ. ಹೋರಾಟವನ್ನು ಹತ್ತಿಕ್ಕುವಲ್ಲಿ ಕಾರ್ಪೊರೇಟ್ ವಲಯಗಳು ಸದಾ ಮುಂದು. ಒಟ್ಟಿನಲ್ಲಿ ದೊಡ್ಡಮಟ್ಟದ ವರ್ಗ ಸಂಘರ್ಷಕ್ಕೆ ರಾಜಮಾರ್ಗ ಸದಾ ತೆರೆದಿರುತ್ತದೆ. ಇನ್ನು ಅನಕ್ಷರತೆ, ನಿರುದ್ಯೋಗ, ಮೂಢನಂಬಿಕೆ ಸದಾ ಜೊತೆಗಿರುವಾಗ ತನ್ನ ದುಃಸ್ಥಿತಿಗೆ ಶೋಷಿತನೂ ಕಾರಣನಾಗುತ್ತಾನೆ. ತನ್ನ ಉದ್ಧಾರಕ್ಕಾಗಿ ಯುಗಪುರುಷನೊಬ್ಬ ಅವತರಿಸುತ್ತಾನೆಂಬ ಗುಂಗಿನಲ್ಲೇ ಅವನ ಬಾಳು ಮುಗಿಯುತ್ತದೆ. ಮುಂದಿನ ಪೀಳಿಗೆ ಸಹಿಸಿ ಸಹಿಸಿ ಬೇಸತ್ತು ಜಗತ್ತನ್ನೇ ಬದಲಿಸುತ್ತೇವೆಂದು ಶಸ್ತ್ರಸಜ್ಜಿತರಾಗಿ ಎದ್ದು ನಿಲ್ಲುತ್ತಾರೆ. ಸೂಕ್ಷ್ಮವಾಗಿ – ನವಿರಾಗಿ ಇಂಥ ಸಾಧ್ಯತೆಗಳನ್ನು ಇಲ್ಲಿನ ಕಥೆಗಳು ಅನಾವರಣ ಮಾಡಿವೆ.



**ಮಲಯಾಳಂನ ಶ್ರೇಷ್ಠ ಕಥೆಗಳು** ವಿವಿಧ ಲೇಖಕರು; ಕನ್ನಡಕ್ಕೆ : ಕೆ. ಕೆ. ಗಂಗಾಧರನ್

**ಪುಟ : ೧೨೪** — **ಬೆಲೆ : ರೂ. ೮೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಇವು ಮಲಯಾಳಂನಿಂದ ಅನುವಾದಗೊಂಡ ಬದುಕಿನ ಬಣ್ಣಗಳನ್ನು ತೆರೆದಿಡುವ ಕಥೆಗಳು. ಎಲ್ಲ ಬಣ್ಣಗಳೂ ಸೇರಿ ಬಿಳಿಯ ಬಣ್ಣವಾಗುವಂತೆ, ದೇಶಪ್ರದೇಶಗಳು ವಿವಿಧ ಭಾಷೆಯವಾಗಿದ್ದರೂ ಅವು ಮಿಡಿಯುವ ಭಾವನೆಗಳು ಒಂದೇ ಎಂಬ ನೀತಿ ಈ ಕಥೆಗಳಲ್ಲಿದೆ. ಎಲ್ಲೋ ನಡೆದ ಕೋಮು ವಿದ್ವೇಷದ ಕ್ರೌರ್ಯ ಇನ್ನೆಲ್ಲೋ ಇರುವ ಸಹೃದಯನನ್ನು ಕಲಕುವುದು ಹೀಗೆ. ಬದುಕಿನ ಏರಿಳಿತ ಕ್ಷಣಕ್ಷಣಕ್ಕೆ ಬದಲಾದಾಗ ತನ್ನ ಗುರುತು ತನಗೇ ಸಿಗದಷ್ಟು ಬದಲಾಗಿ ಅಪರಿಚಿತನಾಗುವುದೂ ಹೀಗೆಯೇ. ಮನುಷ್ಯ ಕೆಲವೊಮ್ಮೆ ಅತಿ ಸ್ವಾರ್ಥಿ – ಕೆಲವೊಮ್ಮೆ ಅಗತ್ಯಕ್ಕಿಂತಲೂ ಉದಾರಿ. ಅತಿರೇಕಗಳು ನಮ್ಮ ಬದುಕಿನ ಅವಿಭಾಜ್ಯ ಅಂಗಗಳಾದಾಗ ನಾವು ವ್ಯಕ್ತಿತ್ವ ಕಳೆದುಕೊಂಡುಬಿಡುತ್ತೇವೆ. ಇಂಥ ಕಥಾಪಾತ್ರಗಳು ಇಲ್ಲಿ ಕಾಣಿಸಿಕೊಂಡು ನಗಣ್ಯವೆನಿಸಿವೆ. ಉದಾತ್ತ ದೃಷ್ಟಿಕೋನದ ಪಾತ್ರಗಳೂ ಇವೆ. ಅವು ಮಿಂಚಿ ನಾವೇನೂ ನಶಿಸಿಲ್ಲ ಎಂದು ಬೀಗಿ ಎದ್ದುನಿಲ್ಲುತ್ತವೆ. ಮಲೆಯಾಳಂನ ಉತ್ತಮ ಬರಹಗಾರರು ಹಲವು ಬಗೆಗಳಲ್ಲಿ ಚಿಂತಿಸಿ ಸಮಾಜದ ಕೆಳವರ್ಗಗಳನ್ನು ಪ್ರತಿನಿಧಿಸಿದ್ದಾರೆ. ಮನಕರಗುವ ಹಲವು ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಇವು ಸ್ವಲ್ಪ ಕಾಲದ ಹಿಂದೆ ಬರೆದ ಕಥೆಗಳಾದರೂ ಸಾರ್ವಕಾಲಿಕ ನೀತಿಯೊಂದನ್ನು ಪ್ರತಿಪಾದಿಸುತ್ತವೆ. ಜನಮನದಲ್ಲಿ ಚಿರಕಾಲ ನಿಲ್ಲುವ ಈ ಕಥೆಗಳನ್ನು ಶ್ರೀ ಕೆ. ಕೆ. ಗಂಗಾಧರನ್ ಸುಲಲಿತವಾಗಿ ಅನುವಾದಿಸಿದ್ದಾರೆ.

– **ಇಂದಿರಾಕುಮಾರಿ,** ಯಶವಂತಪುರ, ಬೆಂಗಳೂರು – ೨೨




**ಅವಳ ಹೆಜ್ಜೆಯ ಹಾದಿ ಹಿಡಿದು** — ಇಂದಿರಾ ಕೃಷ್ಣಪ್ಪ

**ಪುಟ : xvi + ೧೪೮** — **ಬೆಲೆ : ರೂ. ೧೧೫**

**ಪ್ರೊ॥ ಬಿ. ಕೃಷ್ಣಪ್ಪ ಟ್ರಸ್ಟ್,** ನಂ ೨೫, ೩ನೇ ತಿರುವು, ಸಂತೋಷ್‌ನಗರ, ೨ನೇ ಹಂತ, ಅಟ್ಟೂರು, ಯಲಹಂಕ, ಬೆಂಗಳೂರು – ೫೬೦ ೦೬೪

ನಮ್ಮ ರಾಜ್ಯದ ಪ್ರಮುಖ ಹೋರಾಟಗಾರ್ತಿಯರಲ್ಲಿ ಒಬ್ಬರಾದ ಇಂದಿರಾ ಕೃಷ್ಣಪ್ಪ ಅವರು ವಿವಿಧ ಸಂದರ್ಭಗಳಲ್ಲಿ ಬರೆದ ಲೇಖನಗಳ ಸಂಕಲನ 'ಅವಳ ಹೆಜ್ಜೆಯ ಹಾದಿ ಹಿಡಿದು' ಕೃತಿ. ಮಹಿಳಾ ಸಮಸ್ಯೆ, ಮಹಿಳೆಯರ ಹೋರಾಟಗಳನ್ನು ದಾಖಲಿಸಿದ ಇಲ್ಲಿನ ಲೇಖನಗಳು ಸ್ತ್ರೀವಾದಿಯೊಬ್ಬರ ಹುಟುಕಾಟವಾಗಿದ್ದರೂ ಒಟ್ಟು ಸಾಮಾಜಿಕ ವ್ಯವಸ್ಥೆಯ ಬದಲಾವಣೆಗೆ ತಹತಹಿಸುವ ಆಶಯವನ್ನು ಹೊಂದಿದೆ. ಮಹಿಳೆಯರು ನಮ್ಮ ದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ, ಪರಿಸರ ಹಾಗೂ ಸ್ವಾತಂತ್ರ್ಯ ಹೋರಾಟಗಳಲ್ಲಿ ಪಾಲ್ಗೊಂಡರೂ ನಿರ್ಲಕ್ಷ್ಯಕ್ಕೆ ಒಳಗಾದ ಪರಿಯನ್ನು ಖಂಡಿಸುತ್ತಲೇ ದಾಖಲೆ ಸಮೇತ ಅಂಥವರ ವಿವರಗಳನ್ನು ಕೊಡುತ್ತಾರೆ. ಝಾನ್ಸಿ ರಾಣಿಯ ದಾಸಿ, ಕೋರಿ ಜನಾಂಗದ ಮಹಿಳೆ 'ಝುಲ್ಕಾರಿ ದೇವಿ' ಎಂಬವಳು ತನ್ನ ಜನಾಂಗದ 'ದುರ್ಗಾದಳ' ಎಂಬ ಪಡೆಯನ್ನೇ ಕಟ್ಟಿದ್ದಳು. ತೆಲಂಗಾಣ ಹೋರಾಟದಲ್ಲಿ ಮಹಿಳೆಯರು, ಡೂನ್ ಕಣಿವೆ ಹೋರಾಟದ ಮಹಿಳೆಯರ ಸಾಹಸ, ದಾಶೋಲಿ ಗ್ರಾಮ ಸ್ವರಾಜ್ಯ ಸಂಘಟನೆ ಹೀಗೆ ಮಹಿಳೆಯರು ಮಹತ್ವದ ಪಾತ್ರ ವಹಿಸಿದ ಹಲವಾರು ಸಂಗತಿಗಳನ್ನು ಇಂದಿರಾ ಅವರು ದಾಖಲಿಸಿದ್ದಾರೆ. ಮಹಿಳೆಯರ ಆರೋಗ್ಯ, ಭ್ರೂಣಹತ್ಯೆ, ಲಿಂಗಾನುಪಾತ, ಮಹಿಳಾ ಶಿಕ್ಷಣ, ಮಹಿಳೆಯರ ಮೇಲಿನ ದೌರ್ಜನ್ಯ, ದಲಿತ ಹಾಗೂ ದುಡಿವ ಮಹಿಳೆಯರ ಸ್ಥಿತಿಗತಿ... ಹೀಗೆ ಹಲವಾರು ಉಪಯುಕ್ತ ಮಾಹಿತಿಗಳನ್ನು ಇಂದಿರಾ ಕೃಷ್ಣಪ್ಪ ಕಟ್ಟಿಕೊಟ್ಟಿದ್ದಾರೆ. ಸಾಮಾಜಿಕ ಹಾಗೂ ಸ್ತ್ರೀವಾದಿ ಹೋರಾಟಗಾರರಿಗೆ ಅಮೂಲ್ಯ ಮಾಹಿತಿಗಳನ್ನು ಒದಗಿಸುವ ಕೃತಿ ಇದು.

– **ಶ್ರೀಸುಮಿತ್ರಾಸುತ,** ಅಗಸಬಾಳ

# ಇಲ್ಲವೆನ್ನಲಾಗದವರು...

**ನಾ**ನು ಕಾಲೇಜು ಪ್ರಾಂಶುಪಾಲನಾಗಿದ್ದಾಗ ಪರೀಕ್ಷೆಗಳ ಮೇಲುಸ್ತುವಾರಿ ವಹಿಸಿಕೊಳ್ಳಲೇಬೇಕಿತ್ತು ತಾನೆ? ಸರಿ, ಪರೀಕ್ಷಾರಂಭಕ್ಕೆ ಮುನ್ನ ಪ್ರಶ್ನೆಪತ್ರಿಕೆಗಳುಳ್ಳ ಮೊಹರಾದ ಲಕೋಟೆ ಒಡೆಯುವ ಸಲುವಾಗಿ, "ಏ, ಒಂದು ಕತ್ತರಿಯನ್ನೋ ಬ್ಲೇಡನ್ನೋ ಬೇಗನೆ ತಾ" ಅಂತ ಅಟೆಂಡರ್ ಅಳಗಿರಿಗೆ ಗಡಿಬಿಡಿ ಮಾಡಿ ಗದರುತ್ತಿದ್ದೆ. ಆ ಮಹಾನುಭಾವ, "ಸಾರ್, ಕತ್ತರಿ ಕೊಟ್ನಲ್ಲ, ಬ್ಲೇಡ್ ಎಲ್ಲೋ ಕಾಣಿಸ್ತಾಯಿಲ್ಲ" ಅನ್ನುತ್ತಿದ್ದ! ಜೊತೆಗೆ, ಅಕ್ಷರಶಃ ನನ್ನ ರಕ್ತದೊತ್ತಡವನ್ನೂ ಏರಿಸುತ್ತಿದ್ದ. ಕಡೆಗೆ ಇಲಾಖೆ ವತಿಯಿಂದ ಬರುತ್ತಿದ್ದ ವೀಕ್ಷಕರೇ ತಮ್ಮ ಕೀಗೊಂಚಲಿನ ಅವಿಭಾಜ್ಯ ಅಂಗವಾದ ಕಿರುಚಾಕು ಒದಗಿಸುತ್ತಿದ್ದುದು ಬೇರೆ ಮಾತು. ನಾನು ಏಕೆ ಈ ಪ್ರಸಂಗ ನೆನಪಿಸಿಕೊಂಡೆನೆಂದರೆ ಏನನ್ನಾದರೂ ನಿರೀಕ್ಷಿಸಿದರೆ ಇಲ್ಲ ಅಂತ ನೇರವಾಗಿ ಹೇಳದೆ ನಾಜೂಕಾಗಿ ಅದನ್ನೇ ಭಿನ್ನ ವಿಭಿನ್ನವಾಗಿ ಅಭಿವ್ಯಕ್ತಿಸುವವರುಂಟು. ನಿಮಗೂ ಇಂಥ ಅನುಭವವಾಗಿರಬಹುದು. ಬಸ್ಸಿನಲ್ಲಿ ಪ್ರಯಾಣಿಸುತ್ತಿದ್ದೀರಿ. ನಿಮ್ಮ ಮುಂದುಗಡೆ ಆಸನದವರು ದಿನಪತ್ರಿಕೆ ಓದುತ್ತಿದ್ದಾರೆ. ನೀವೋ ಮೀನಮೇಷ ಎಣಿಸಿ, "ರೀ, ಆ ಮಧ್ಯದ ಪುಟ"... ಅನ್ನುವಿರಿ. ಆ ಆಸಾಮಿ ಕೆಸರು ತುಳಿದ ಹಾಗೆ ತಕ್ಷಣ ಪರಪರನೆ ಪತ್ರಿಕೆ ಮಡಚುತ್ತ, "ಇಲ್ಲೇ... ಮುಂದಿನ ಸ್ಟಾಪ್‌ನಲ್ಲಿ ಇಳಿತೀನಿ" ಎನ್ನುವರು. ತನ್ನ ಮಾತಿನಂತೆ ಆತ ಹಾಗೆಯೆ ಮಾಡುತ್ತಾರೆ. ಹ್ಞಾಂ ...ಸ್ವಲ್ಪ ಇರಿ. ಅಲ್ಲಿ ಇಳಿಯುವುದು ನಿಮಗೆ ಪತ್ರಿಕೆ ನೀಡುವುದರಿಂದ ಬಚಾವ್ ಆಗಲಿಕ್ಕೆ! ಛೆ!! ಇದೆಂತಹ ಪಾಡು ನಿಮ್ಮ ಬೇಡಿಕೆಗೆ! ...ಅದೂ ಅಂತಹ ಅತಿ ಸಣ್ಣ ಬೇಡಿಕೆ ಈಡೇರಿಸಲು ಅವರಿಗೆ ಸಾಧ್ಯವಿಲ್ಲವೇ? ಸಾರಾಂಶವಿಷ್ಟೆ. ಆತ ಇಲ್ಲ ಎನ್ನಲಾಗದೆ ಹೀಗೆ ನಡೆದುಕೊಳ್ಳುವಂತಾಯಿತು. ಅಷ್ಟರಮಟ್ಟಿಗೆ ಬಸ್ಸಿಗೆ ಹಣ ತೆತ್ತೂ ನಡೆದುಕೊಂಡು ಹೋಗುವಂಥ ಗತಿ.

ನಲವತ್ತು ವರ್ಷಗಳ ಹಿಂದಿನ ಮಾತು. ಪೆಟ್ರೋಲ್, ಡೀಸೆಲ್ ವಿಪರೀತ ಅಭಾವವಾಗಿದ್ದ ಕಾಲ. ಮೆಜೆಸ್ಟಿಕ್ ಬಳಿ ನನ್ನ ಮೊಪೆಡ್‌ಅನ್ನು ಏದುಸಿರಿನಿಂದ ದೂಡುತ್ತ ಬಂಕ್‌ನಿಂದ ಬಂಕ್‌ಗೆ ಅಲೆಯುತ್ತಿದ್ದೆ ಒಂದು ನಡುಹಗಲು. ಅಬ್ಬ! ಒಂದೆಡೆ ಮಾಲೀಕನೊಬ್ಬ ಅದೆಷ್ಟು ಸೊಗಸಾಗಿ ಉತ್ತರಿಸಿದ್ದ ಗೊತ್ತೇ?; "ಸಾರ್, ನಿಮಗೆ ಇಲ್ಲ ಅನ್ನೋಕೆ ಆಗುತ್ಯೆ ಹೇಳಿ. ಅದೆಷ್ಟು ತಿಂಗಳಿಂದ ನಮ್ಮಲ್ಲಿಗೇ ಬರ್ತೀರ ಪಾಪ! ನೋಡಿ, ಬೇಜಾರು ಮಾಡ್ಕೋಬೇಡಿ. ಈವಾಗಿತ್ತು. ಈಗ ತಾನೇ ಅದ್ಯಾರಿಗೋ ಕೊಟ್ಬಿಟ್ಟೆ ಸಾರ್...". ಪುಣ್ಯಾತ್ಮ ಅದ್ಯಾರಿಗೋ ಅಂದ್ನಲ್ಲ. ಯಾರು ಯಾರಿಗೋ ಅನ್ನುವವರ ಯಾದಿಯಲ್ಲಿ ನಾನೇಕಿಲ್ಲ ಅನ್ನಿಸಿತ್ತು ಅನ್ನಿ.

ಖ್ಯಾತರಿರಲಿ, ಅರೆಖ್ಯಾತರಿರಲಿ ಒಮ್ಮಿಂದೊಮ್ಮೆಗೆ ಸಮಾರಂಭಕ್ಕೆ, ಭಾಷಣ ಮಾಡಲಿಕ್ಕೆ, ಮುಖ್ಯ ಅತಿಥಿಗಳಾಗಲಿಕ್ಕೆ ಅಥವಾ ಅಧ್ಯಕ್ಷತೆ ವಹಿಸಲಿಕ್ಕೆ ಬನ್ನಿ ಅಂತ ಆಹ್ವಾನಿಸಿ ಒಪ್ಪಿಸುವುದು ತ್ರಾಸದ ಕೆಲಸವೇ. ಅವರು ಮೊದಮೊದಲಿಗೆ "ಕ್ಷಮಿಸಿ, ಮುಂಚೆಯೇ ಯೋಜಿಸಿದ ಕಾರ್ಯಕ್ರಮವುಂಟು, ನನಗಿಂತಲೂ ಅರ್ಹರಿದ್ದಾರೆ" ಎಂದೋ "ನನ್ನ ಪಾತ್ರವೇನಿದ್ದರೂ ಪ್ರೇಕ್ಷಕನಾಗಿ" ಎಂದೋ ಜಾಣತನ ಮೆರೆದಿರುತ್ತಾರೆ. ಅಂತೂ ಕೊನೆಗೆ ಆಯ್ತು ಇಲ್ಲ ಅನ್ನೋಕೆ ಆಗದೆ ಸಮ್ಮತಿಸಿದ್ದೇನೆ ಎಂಬ ಉದ್ಗಾರದೊಂದಿಗೆ ನಿಮ್ಮನ್ನು ಬೀಳ್ಕೊಡುತ್ತಾರೆ. ಅಪರೂಪಕ್ಕೊಂದು ದೂರದರ್ಶನ ಕಾರ್ಯಕ್ರಮ ಬಂದಿತ್ತು. ಅದನ್ನು ಪರೋಕ್ಷವಾಗಿ ಎದುರುಮನೆಗೆ ಹೋಗಿ ಪ್ರಕಟಿಸೋಣ ಅನ್ನಿಸಿತು. ಸೀದಾ ಅವರಲ್ಲಿಗೆ ಹಾರಿ "ಅಂಕಲ್, ಸ್ವಲ್ಪ ಒಂದೊಳ್ಳೆ ಟೈ ಕೊಟ್ಟಿರಿ... ನನ್ನ ಬಿಳಿ ಕೋಟಿಗೆ ಟಿ.ವಿ. ಕ್ಯಾಮರಾ ಮುಂದೆ ನಿಮ್ಮ ಕರಿ ಟೈ ಪಸಂದಾಗಿ ಒಪ್ಪುತ್ತೆ" ಅಂದೆ. ಅಂಕಲ್ ಸ್ವಲ್ಪವೂ ವಿಚಲಿತರಾಗಲಿಲ್ಲ! "ಅಯ್ಯೊ ನೀನೆಲ್ಲಿದ್ದಿ? ಬಿಳಿ ಕೋಟಿಗೆ ಬಿಳಿ ಟೈ ನಿನ್ನ ಹತ್ತಿರ ಉಂಟಲ್ಲ, ಅದೇ ಚೆನ್ನಾಗಿರುತ್ತೆ ಹೋಗು" ಅಂದರು. ಅಂಕಲ್ ಕೊಡುವುದಿಲ್ಲ ಅಂತ ಹೇಳಿದ್ದರೆ ಏನು ಕಳೆದುಕೊಳ್ಳುತ್ತಿದ್ದರೋ ಕಾಣೆ.



ಬಹುತೇಕ ಇಲ್ಲವೆನ್ನಲಾಗದವರಿಗೆ ಮಹತ್ವದ ಅಸಹಾಯಕತೆಯೇನೂ ಕಾಡುವುದಿಲ್ಲ. ಮುಖ್ಯ ಅವರು ಇಲ್ಲವೆಂದರೆ ಯಾರೇನು ತಿಳಿಯುವರೋ, ಯಾವ ಸಂಚು ಹೂಡುತ್ತಾರೋ, ಸೇಡು ತೀರಿಸಿಕೊಳ್ಳುವರೋ, ಎನ್ನುವ ಆತಂಕ ಅವರಿಗೆ. ಕೆಲವೊಮ್ಮೆ ಸಂಕೋಚವೂ ಕೂಡ ಇರುತ್ತೆ ಅನ್ನೋಣ. "ಬರೋಣ. ಅದಕ್ಕೇನಂತೆ, ಮಾಡಿಸಿದ್ರಾಯಿತು ಬಿಡು. ಅದೇನು ಮಹಾ" ಎಂದು... ಮುಂತಾಗಿ ಅವರು ಆಗಸಕ್ಕೆ ರಂಗುರಂಗಿನ ಗಾಳಿಪಟಗಳನ್ನು ಹಾರಿಸಿರುತ್ತಾರೆ. ಮುನ್ನುಡಿ ಬರೆದುಕೊಡಿ... ಒಂದು ಸೊಗಸಾದ ಚಿತ್ರ ರಚಿಸಿಕೊಡಿ ಅಂದಾಗ ತಾವು ಅಂಥದ್ದೇ ಕೆಲಸದಲ್ಲಿ ಸದ್ಯ ಮಗ್ನರಾಗಿರುವುದಾಗಿ ಹೇಳುವಂತಹ ಬಿಳಿ ಸುಳ್ಳುಗಳನ್ನು ಅನಿರೀಕ್ಷಿತ ಎನ್ನಲಾದೀತೆ? ಮೊನ್ನೆ ರಾಜಾಜಿನಗರದಲ್ಲಿರುವ ಕನಕಲಕ್ಷ್ಮಜ್ಜಿ ಮನೆಗೆ ಹೋಗಿದ್ದೆ. ಸಂಜೆ ಅಜ್ಜಿ ತಯಾರಿಸಿದ ಹುಳಿ ಅವಲಕ್ಕಿ ಇನ್ನೂ ಬೇಕೆನ್ನಿಸಿತ್ತು. ಆಗತಾನೆ ಮಳೆ ಶುರುವಾಯಿತು. "ಇನ್ನೂ ಸ್ವಲ್ಪ ಅವಲಕ್ಕಿ ಕೊಡೋಣ ಅಂದ್ರೆ ನೀನೆಲ್ಲಿ ಇರ್ತೀಯ. ಓಡ್ತೀಯ ಮನೆ ಕಡೆಗೆ. ಸರಿ, ನೀನು ಹಾಗೇನೆ ಮಾಡಪ್ಪ. ನನ್ನ ಅಳಿಯ, ಮಗಳು ಒಂದೊಂದು ಛತ್ರಿ

ಬಿಂಡಿಗನವಿಲೆ ಭಗವಾನ್

ತಗೊಂಡು ಆಚೆ ಇನ್ನೇನು ಹೊರಟ್ರು. ಪಾಪ! ನೀನು ಛತ್ರಿ ತಂದಿಲ್ಲ ಬೇರೆ... ಖಂಡಿತ ಇವೊತ್ತು ಜೋರು ಮಳೇನೆ" ಅಂತ ಕನಕಲಕ್ಷ್ಮಜ್ಜಿ ಒಂದೇ ಏಟಿಗೆ ಎರಡು ಹಕ್ಕಿಗಳನ್ನು ಹೊಡೆದ ಮೇಲೂ ನಾನಲ್ಲಿರಲಾದೀತೆ? ಕಾಲಿಗೆ ವಿವೇಕ ಹೇಳಿದ್ದೆ. ಅನಂತರ ಮಳೆ ಬರುವ ಸಮಯದಲ್ಲಿ ಹುಳಿ ಅವಲಕ್ಕಿ ಸೇವಿಸಬಾರದೆಂದು ಪ್ರತಿಜ್ಞೆ ಮಾಡಿರುವೆನೆಂದರೆ ದಯವಿಟ್ಟು ನಂಬಿ. ಇಲ್ಲ ಅಂತ ಹೇಗೆ ಹೇಳುವುದು ಎಂದು ಪ್ರಶ್ನಿಸುವ ವರ್ಗವೂ ಇದೆ. ಅವರ ಪ್ರಕಾರ ಏನನ್ನಾದರೂ ಸಬೂಬು, ನೆಪದಿಂದ ತಮ್ಮ ಘನತೆಯನ್ನು ಘಾಸಿಮಾಡಿಕೊಳ್ಳಬಾರದು! "ನಿಮ್ಮನೆ ಕಾಂಪೌಂಡಿನಲ್ಲಿ ನನ್ನ ಕಾರನ್ನು ಒಂದೆರಡು ದಿನ ನಿಲ್ಲಿಸಬಹುದೆ?" ಎಂದು ಗೋಗರೆದರೆ, "ಎಲ್ಲಾದರೂ ಉಂಟೆ ಸ್ವಾಮಿ? ನಿಮ್ಮದು ದೊಡ್ಡ ಕಾರು, ನಮ್ಮ ಚಿಕ್ಕ ಮನೆಯಲ್ಲಿ..." ಎನ್ನುವ ಚಾಣಾಕ್ಷ ಪ್ರತಿಕ್ರಿಯೆ. ನಾಣಿ ನನ್ನ ಆಪ್ತಮಿತ್ರನೆಂದುಕೊಂಡಿದ್ದೆ. "ಅಯ್ಯ, ನಿಮ್ಮ ಮನೆಯ ನೀರ್‌ದೋಸೆಗೆ ನಾನು ನಾಳೆ ಹಾಜರು" ಎಂದಿದ್ದೇ ಎಡವಟ್ಟಾಯಿತು. ಭೂಪ, "ನಿಮ್ಮ ಮನೆಯವರಿಗೆ ಯಾವ ಅಡಿಗೆ ಬರೊಲ್ಲ ಹೇಳು... ಆರಾಮವಾಗಿ ಅಲ್ಲೇ ತಿನ್ನು. ರುಚಿರುಚಿಯಾಗಿ ಮಾಡಿ ಹಾಕ್ತಾರೆ" ಅಂದ! ಎಷ್ಟೇ ಕೊರತೆಯಿರಲಿ, ಚಿಲ್ಲರೆ ಇಲ್ಲವೆಂದು ಹೇಳುವ ವ್ಯಾಪಾರಿಗಳು ಅಪರೂಪ. ಸರಿಯಾಗಿ ಚಿಲ್ಲರೆ ಹಿಂದಿರುಗಿಸಿರುತ್ತಾರೆ ಅಥವಾ ಚಾಕ್ಲೇಟು, ಪೆಪ್ಪರ್‌ಮೆಂಟು ಇಲ್ಲವೆ ಸಣ್ಣ ಸೋಪು, ಬಿಸ್ಕತ್ ಪೊಟ್ಟಣ ಸರಿಸಮನಾಗಿ (?) ನೀಡಿರುತ್ತಾರೆ. ಇವೆರಡೂ ಬಗೆಯ ವ್ಯಾಪಾರಿಗಳ ಪೈಕಿ ಯಾರು ಹೆಚ್ಚು ಎಂಬ ನಿರ್ಧಾರ ನಿಮಗೇ ಬಿಟ್ಟಿದ್ದು. ನಾನು ಒಂದೆಡೆ ಹದಿನೈದು ರೂಪಾಯಿ ಕೊಡಬೇಕಿತ್ತು ಕಬ್ಬಿನ ರಸಕ್ಕಾಗಿ. ಇಪ್ಪತ್ತರ ನೋಟು ವ್ಯಾಪಾರಿಗೆ ಕೊಟ್ಟು ಚಿಲ್ಲರೆಗೆ ಕಾದಿದ್ದೆ. ಅವನೋ ಬಲು ಬುದ್ಧಿಶಾಲಿ. "ಯಜಮಾನ್ರೇ, ಏನು ಮಾಡ್ಲಿ ನಿಮ್ಮ ಹತ್ರ ಐದು ರೂಪಾಯಿಯಿದ್ರೆ ಹುಡುಕಿ, ಇಲ್ಲಾಂದ್ರೆ ಇಗೊಳ್ಳಿ ಅರ್ಧ ಗ್ಲಾಸ್ ಜ್ಯೂಸ್" ಅಂದ! ನನಗೆ ಧಾರಾಳತನವನ್ನೇ ತೋರಿದ ಬೀಗು ಆತನಲ್ಲಿ ಎದ್ದು ಕಾಣುತ್ತಿತ್ತು. "ಈ ಸಣ್ಣ ಕೊಠಡಿಗೆ ಆರ್. ಸಿ. ಸಿ. ಹಾಕಲು ಒಂದೂವರೆ ತಿಂಗಳು ತಗೊಂಡ್ರಲ್ಲಪ್ಪ?" ಅಂತ ಕಂಟ್ರಾಕ್ಟರ್‌ನಲ್ಲಿ ಪ್ರಲಾಪಿಸಿದಾಗ ಆತ ವಿನಯಪೂರ್ವಕವಾಗಿಯೆ ಉಲಿದಿದ್ದ. "ಬೇಗ ಆಗೋಲ್ಲ. ನಂಗೂ ಗೊತ್ತಿತ್ತು. ಆದ್ರೆ ಇಲ್ಲ ಅಂತ ಮೊದ್ಲೇ ಹೇಳಿದ್ದಿದ್ರೆ ಇಷ್ಟು ಕೆಲಸ ತಾನೆ ಆಗ್ತಿತ್ತಾ?"

**ಬಂಡಿಗನವಿಲೆ ಭಗವಾನ್**
ನಂ. ೩೬ಬಿ, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ೨ನೇ ಬ್ಲಾಕ್, ಬೆಂಗಳೂರು – ೫೦

## ಸಾದರ ಸ್ವೀಕಾರ

**ಗೊಂಡಿ ಭಾಷೆಯಿಂದ ಸೈಂಧವಿ ರಹಸ್ಯ ಲಿಪಿಯ ಶೋಧ ಮತ್ತು ಓದು** *ಡಾ॥ ಮೊ. ಛ. ಕಂಗಾಲಿ; ಕನ್ನಡಕ್ಕೆ: ಡಾ॥ ಕೆ. ಬಿ. ಬ್ಯಾಳಿ*
**ಪುಟ : xxviii + ೧೫೦ = ೧೭೮ ಬೆಲೆ ರೂ. ೧೫೦**
**ಲಾಳಗೊಂಡೇಶ್ವರ ಎಜ್ಯುಕೇಶನಲ್ ಟ್ರಸ್ಟ್** (ರಿ.), ಶಾನವಾಸಪುರ, ಬಳ್ಳಾರಿ ಜಿಲ್ಲೆ, ಸಿರುಗುಪ್ಪ ತಾಲೂಕು – ೫೮೩ ೧೨೧

**ಹೇಳೆ ಸಖಿ** (ಗಜಲ್‌ಗಳ ಸಂಕಲನ) *ಡಾ॥ ಬಸವರಾಜ ಸಬರದ*
**ಪುಟ : x + ೬೮ = ೭೮ ಬೆಲೆ ರೂ. ೮೦**
**ಕನ್ನಡನಾಡು ಪ್ರಕಾಶನ,** ಕನ್ನಡನಾಡು ಲೇಖಕರ ಮತ್ತು ಓದುಗರ ಸಹಕಾರ ಸಂಘ ನಿಯಮಿತ, ಜಿ–೨, ವಿ.ವಿ. ಹಾಸ್ಟೆಲ್ ಕಾಂಪ್ಲೆಕ್ಸ್, ಸೇಡಂ ರಸ್ತೆ, ಗುಲಬರ್ಗಾ – ೫೮೫ ೧೦೫

**ಮಧು ಮಂದಿರ** *ಡಾ॥ ಕೆ. ಬಿ. ಬ್ಯಾಳಿ*
**ಪುಟ : xl + ೪೪ ಬೆಲೆ ರೂ. ೭೫**
**ತಾಯಿ ಪ್ರಕಾಶನ,** ಕುಕನೂರ – ೫೮೩ ೨೩೨, ಕೊಪ್ಪಳ ಜಿಲ್ಲೆ

**ನೆಲದ ನುಡಿ** (ಲೇಖನಗಳ ಸಂಕಲನ) *ಎ. ಎಸ್. ಮಕಾನದಾರ*
**ಪುಟ : xvi + ೮೮ = ೧೦೪ ಬೆಲೆ ರೂ. ೭೫**

**ಪಣತಿ ಮತ್ತು ಮಹಾನವಮಿ** (ಕವನ ಸಂಕಲನ) *ಡಾ॥ ಸಿ. ಬಿ. ಚಿಲ್ಕರಾಗಿ*
**ಪುಟ : xxiv + ೮೦ = ೧೦೪ ಬೆಲೆ ರೂ. ೮೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನಿರಂತರ ಪ್ರಕಾಶನ,** ಗಾಂಧಿನಗರ ೫ನೇ ಅಡ್ಡರಸ್ತೆ, ಲೊಯೋಲಾ ಕಾನ್ವೆಂಟ್ ಹಿಂಭಾಗ, ಬೆಟಗೇರಿ – ಗದಗ – ೫೮೨ ೧೦೨

**ಕಥಾ ಸಮಯ** *ಸಂಪಾದಕರು : ಡಾ॥ ಜಿ. ಬಿ. ಹರೀಶ್*
**ಪುಟ : iv + ೧೧೬ = ೧೨೦ ಬೆಲೆ ರೂ. ೧೦೦**
**ಕನ್ನಡ ಸಾಹಿತ್ಯ ಪರಿಷತ್ತು,** ಕುವೆಂಪುನಗರ (ಬಿ.ಟಿ.ಎಂ.) ವಿಧಾನಸಭಾ ಕ್ಷೇತ್ರ, ಬೆಂಗಳೂರು – ೬೮

**ಸಫ್ದರ್ ಹಶ್ಮಿಯವರ ಯೇ ದಿಲ್ ಮಾಂಗೇ *More* ಮತ್ತಿತರ ಬೀದಿನಾಟಕಗಳು** *ರಚನೆ: ಸಫ್ದರ್ ಹಶ್ಮಿ, ಅನುವಾದ : ಡಾ॥ ಮಾಧವಿ ಎಸ್. ಭಂಡಾರಿ*
**ಪುಟ : ೧೬೦ + ೪ ಬೆಲೆ ರೂ. ೮೦**
**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ ಅಂಚೆ: ಅರೇ ಅಂಗಡಿ, ಹೊನ್ನಾವರ, ಉತ್ತರ ಕನ್ನಡ – ೫೮೧ ೩೩೪

**ಮಳೆನಾಡಿನ ಮಾತು** ಮಾಲತಿ ಭಟ್
**ಪುಟ : xvi + ೬೪ ಬೆಲೆ ರೂ. ೮೦**
**ಮಹಿಳಾ ಸಾಹಿತ್ಯಿಕಾ, 'ಕಾರ್ತಿಕಶ್ರೀ',** ಎಚ್.ಐ.ಜಿ. ೨೭, ರಾಷ್ಟ್ರಕವಿ ಕುವೆಂಪು ರಸ್ತೆ, ನವನಗರ, ಹುಬ್ಬಳ್ಳಿ – ೫೮೦ ೦೨೫

**ಬಸವಣ್ಣ ಮತ್ತು ನಾರಾಯಣಗುರು** ಪ್ರೊ॥ ಉದಯಕುಮಾರ ಹಬ್ಬು
**ಪುಟ : vi + ೭೨ ಬೆಲೆ ರೂ. ೫೦**
**ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ,** ಶ್ರೀ ಮುರುಘಾಮಠ, ಮೃತ್ಯುಂಜಯನಗರ, ಧಾರವಾಡ

**ಕುಲದೀಪ – ಚಿ. ವಿ. ಶ್ರೀನಾಥ ಶಾಸ್ತ್ರಿ ಹಾಗೂ ಡಾ॥ ಸಿ. ವಿ. ಗಿರಿಧರ ಶಾಸ್ತ್ರಿ** *ಸಂಪಾದಕರು : ವಿದ್ಯಾವಾರಿಧಿ ಡಾ॥ ವಾಗೀಶ್ವರೀ ಶಿವರಾಮ*
**ಪುಟ : xviii + ೩೫೦ ಬೆಲೆ ರೂ. ೧೫೦**
**ಶ್ರೀಮತಿ ಮಹಾಲಕ್ಷ್ಮಿ, ಸೋದರಿಯರು ಮತ್ತು ಮಕ್ಕಳು,** ಬೆಂಗಳೂರು, ೨೯೩, ೯ನೇ ಮುಖ್ಯರಸ್ತೆ, ಡಾ॥ ಜಿ. ಪಿ. ರಾಜರತ್ನಂ ರಸ್ತೆ, ಹನುಮಂತನಗರ, ಬೆಂಗಳೂರು – ೫೬೦ ೦೧೯

**ಹಿಂದೂ** (ಸವರ್ಣ–ದಲಿತ ಸಂಘರ್ಷ) *ಮರಾಠಿ ಮೂಲ : ಶರಣಕುಮಾರ ಲಿಂಬಾಳೆ, ಕನ್ನಡಕ್ಕೆ: ಡಾ॥ ಪ್ರಮೀಳಾ ಮಾಧವ್*
**ಪುಟ : ೧೬೮ ಬೆಲೆ ರೂ. ೧೨೦**

**ನವಿಲುಗರಿ** ಕಂನಾಡಿಗಾ ನಾರಾಯಣ
**ಪುಟ : ೭೬ ಬೆಲೆ ರೂ. ೪೦**

**ಶೃಂಗೇರಿ ಉಪಚಾರ** (ನಗೆಬರಹಗಳು) ಜಿ. ವಿ. ಗಣೇಶಯ್ಯ
**ಪುಟ : ೧೫೬ ಬೆಲೆ ರೂ. ೮೦**

**ಕತ್ತಲೆಯಿಂದ ಬೆಳಕಿನೆಡೆಗೆ : ಅಂಧಶ್ರದ್ಧೆ ನಿರ್ಮೂಲನೆ ಕುರಿತ ಲೇಖನಗಳು** *ಮರಾಠಿ ಮೂಲ : ಡಾ॥ ನರೇಂದ್ರ ದಾಭೋಲ್ಕರ್, ಕನ್ನಡಕ್ಕೆ : ಚಂದ್ರಕಾಂತ ಪೋಕಳೆ*
**ಪುಟ : ೧೭೮ ಬೆಲೆ ರೂ. ೮೫**
ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಒಳದನಿಯ ಪಲುಕುಗಳು** (ವಿಮರ್ಶಾ ಲೇಖನಗಳ ಸಂಕಲನ) ಕಾತ್ಯಾಯಿನಿ ಕುಂಜಿಬೆಟ್ಟು
**ಪುಟ : ೧೫೬ + iv ಬೆಲೆ ರೂ. ೭೫**
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ, ಮೊದಲನೇ ಮಹಡಿ, ಎಂ. ಆರ್. ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು – ೫೬೦ ೦೦೪

**ಗುಳ್ಳಡಕಿ ಗುಂಡವ್ವ ಮತ್ತು ಇತರ ಕಥೆಗಳು** ಪ್ರೊ॥ ಜಿ. ಎಚ್. ಹನ್ನೆರಡುಮಠ
**ಪುಟ : viii + ೧೪೪ ಬೆಲೆ ರೂ. ೧೦೦**
**ಸಂಕಲ್ಪ ಪ್ರಕಾಶನ,** ನಂ. ೧, ೧ನೇ ಮುಖ್ಯರಸ್ತೆ, ೧ನೇ ಕ್ರಾಸ್, ದೀಪಾಂಜಲಿ ನಗರ, ಬೆಂಗಳೂರು–೨೬

**ಕನ್ನಡಿ** ಸಂಪಾದಕರು : ಸುಮುಖಾನಂದ ಜಲವಳ್ಳಿ
**ಪುಟ : ೧೦೧ + vi ಬೆಲೆ ರೂ. ೭೫**

**ತ್ಯಕ್ತ** (ಕಾದಂಬರಿ) ಉದಯಕುಮಾರ್ ಹಬ್ಬು
**ಪುಟ : viii + ೧೭೦ ಬೆಲೆ ರೂ. ೧೨೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಅನಂತ ಪ್ರತಿಭಾ ಪ್ರಕಾಶನ,** ಕಿನ್ನಿಗೋಳಿ, ದಕ್ಷಿಣಕನ್ನಡ – ೫೭೪ ೧೫೦

# ಜಿಎಸ್‌ಟಿ

# ಭಾರತೀಯ ಅರ್ಥವ್ಯವಸ್ಥೆಗೆ ಅವಶ್ಯವೇ?




ಜಿಎಸ್‌ಟಿ ಎಂಬುದು ಒಂದು ಮೌಲ್ಯವರ್ಧಿತ ತೆರಿಗೆಯಾಗಿದ್ದು, ಎಲ್ಲಾ ಸರಕು ಸೇವೆಗಳ ಮೇಲೆ ವಿಧಿಸುವ ತೆರಿಗೆಯಾಗಿದೆ. ಸಾಮಾಜಿಕ, ಪರಿಸರ ಹಾಗೂ ಆಮದು ಅವಲಂಬನೆಗಳ ಕಾರಣದಿಂದಾಗಿ ಕಚ್ಚಾ ತೈಲ, ನೈಸರ್ಗಿಕ ಅನಿಲ, ಟರ್ಬೈನಿನ ಉರುವಲು, ಅತಿ ವೇಗದ ಡೀಸೆಲ್, ಮಾನವ ಅನುಭೋಗಕ್ಕೆ ಇರುವ ಆಲ್ಕೋಹಾಲ್ ಇತ್ಯಾದಿಗಳನ್ನು ಪಟ್ಟಿಯಿಂದ ಹೊರಗಿಡಲಾಗಿದೆ. ಕೇಂದ್ರದ ಕೆಲವು ತೆರಿಗೆಗಳಾದ ಎಕ್ಸೈಸ್ ತೆರಿಗೆ, ಸೇವಾ ತೆರಿಗೆ, ಕಸ್ಟಂ ತೆರಿಗೆ, ಸರ್‌ಚಾರ್ಜ್ ಇವು ಜಿಎಸ್‌ಟಿಯಲ್ಲಿ ಸೇರಿವೆ. ಇತರ ತೆರಿಗೆಗಳಾದ ವ್ಯಾಟ್, ಮಾರಾಟ ತೆರಿಗೆ, ಮನರಂಜನಾ ತೆರಿಗೆ, ಐಷಾರಾಮಿ ತೆರಿಗೆ, ಲಾಟರಿ ಮೇಲಿನ ತೆರಿಗೆ, ಬೆಟ್ಟಿಂಗ್ ಮತ್ತು ಜೂಜಾಟ, ರಾಜ್ಯ ತೆರಿಗೆಗಳು ಮತ್ತು ಸರ್‌ಚಾರ್ಜ್ ಇತ್ಯಾದಿಗಳು ಸೇರ್ಪಡೆಯಾಗಲಿವೆ. ಏಕೆಂದರೆ ಇವು ಪ್ರವೇಶ ತೆರಿಗೆ, ಸರಕು ಹಾಗೂ ಸೇವೆಗಳ ಪೂರೈಕೆಗೆ ಸಂಬಂಧಿಸಿವೆ.

**ಭಾ**ರತದಲ್ಲಿ ಸರಕು ಮತ್ತು ಸೇವಾ ತೆರಿಗೆಯನ್ನು ಜಾರಿಗೆ ತರುವ ಬಗ್ಗೆ ಚಿಂತನೆ ನಡೆದಿರುವುದು ಪ್ರಶಂಸನೀಯ. ಜಿಎಸ್‌ಟಿ ಎಂದು ಸಾಮಾನ್ಯವಾಗಿ ಕರೆಯುವಂತೆ ಇದೊಂದು ಮೌಲ್ಯವರ್ಧಿತ ತೆರಿಗೆ, ಇದು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಸರಕು ಸೇವೆಗಳ ಮೇಲೆ ವಿಧಿಸುವ ಎಲ್ಲ ಪರೋಕ್ಷ ತೆರಿಗೆಗಳನ್ನು ಬದಲಾಯಿಸುತ್ತದೆ. ಭಾರತ ಒಂದು ಸಂಯುಕ್ತ ಗಣರಾಜ್ಯವಾಗಿರುವುದರಿಂದ ಜಿಎಸ್‌ಟಿಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳೆರಡೂ ಕೇಂದ್ರ ಜಿಎಸ್‌ಟಿ ಮತ್ತು ರಾಜ್ಯ ಜಿಎಸ್‌ಟಿ ಎಂಬುದಾಗಿ ವಿಧಿಸ ಬಹುದಾಗಿದೆ. ರಫ್ತುಗಳನ್ನು ಶೂನ್ಯದರದಲ್ಲಿ ಹಾಗೂ ಆಮದುಗಳ ಮೇಲೆ ಸ್ವದೇಶಿ ಸರಕು ಸೇವೆಗಳ ಮೇಲೆ ಸ್ಥಳ ತತ್ವದ ಆಧಾರದ ಮೇಲೆ ವಿಧಿಸುವ ತೆರಿಗೆಯಂತೆಯೇ ವಿಧಿಸಲಾಗುತ್ತದೆ.

ಜೆ. ಕೆ. ಮಿತ್ತಲ್ ಹೇಳುವಂತೆ ವಿಶ್ವದಲ್ಲಿ ಸುಮಾರು ೧೫೦ಕ್ಕೂ ಹೆಚ್ಚು ರಾಷ್ಟ್ರಗಳು ಒಂದಲ್ಲ ಒಂದು ರೂಪದಲ್ಲಿ ಜಿಎಸ್‌ಟಿಯನ್ನು ಜಾರಿಗೆ ತಂದಿವೆ. ಯುರೋಪಿನಲ್ಲಿ ಕಳೆದ ೫೦ ವರ್ಷಗಳಲ್ಲಿ ಇದೊಂದು ಪ್ರಮುಖ ತೆರಿಗೆ ಎನಿಸಿದ್ದರೆ, ಏಷ್ಯಾ ಪೆಸಿಫಿಕ್ ವಲಯದಲ್ಲಿ ಇತ್ತೀಚೆಗೆ ತ್ವರಿತಗತಿಯಲ್ಲಿ ಪ್ರಾಮುಖ್ಯತೆ ಪಡೆಯುತ್ತಿರುವ ಒಂದು ಪ್ರಮುಖ ಪರೋಕ್ಷ ತೆರಿಗೆ ಎನಿಸಿದೆ. ಪ್ರಸ್ತುತ ವಿಶಿಷ್ಟ ಲಕ್ಷಣಗಳಿರುವ ಹೆಚ್ಚು ಜಿಎಸ್‌ಟಿ ಮಾದರಿಗಳನ್ನು ಕಾಣಬಹುದು.

ಸಿಂಗಪುರ, ನ್ಯೂಝಿಲೆಂಡ್‌ಗಳು ಒಂದು ದರದಲ್ಲಿ ತೆರಿಗೆ ವಿಧಿಸಿದರೆ, ಇಂಡೋನೇಷಿಯಾ ಐದು ಧನಾತ್ಮಕ ದರದಲ್ಲಿ, ಒಂದು ಶೂನ್ಯ ದರದಲ್ಲಿ, ಮತ್ತು ೩೦ ರೀತಿಯ ರಿಯಾಯ್ತಿಗಳನ್ನು ಹೊಂದಿದೆ. ಚೀನಾದಲ್ಲಿ ದುರಸ್ತಿ, ಬದಲಿಕೆ ಹಾಗೂ ಸಂಸ್ಕರಣ ಸೇವೆಗಳು ಹಾಗೂ ಸರಕುಗಳ ಮೇಲೆ ಈ ತೆರಿಗೆಯನ್ನು ವಿಧಿಸಲಾಗುತ್ತದೆ. ಉತ್ಪಾದನಾ ಪ್ರಕ್ರಿಯೆಯಲ್ಲಿ ಬಳಸಲಾದ ಸರಕುಗಳ ಮೇಲೆ ಮರಳಿಪಡೆಯಬಹುದಾಗಿದ್ದರೆ, ಸ್ಥಿರ ಆಸ್ತಿಗಳ ವಿಷಯದಲ್ಲಿ ಅದು ಸಾಧ್ಯವಿಲ್ಲ. ಕೆನಡಾ ಜಿಎಸ್‌ಟಿ ಫೆಡರಲ್ ಉತ್ಪಾದಕರ ಮೇಲೆ ೧೫% ದರದಲ್ಲಿ ವಿಧಿಸಲಾಗುತ್ತಿದ್ದ ಮಾರಾಟ ತೆರಿಗೆಯನ್ನು ಬದಲಾಯಿಸಿತು. ಇದು ಭಾರತದಲ್ಲಿ ವಿಧಿಸಲಾಗುತ್ತಿದ್ದ ಕೇಂದ್ರೀಯ ಮೌಲ್ಯ ವರ್ಧಿತ ತೆರಿಗೆಯಂತೆಯೇ ರಚನೆ ಹಾಗೂ ರೂಪುರೇಷೆ ಹೊಂದಿತ್ತು.

ಕೆನಡಾದ ಅನುಭವ ಭಾರತಕ್ಕೆ ಜಿಎಸ್‌ಟಿಯಿಂದ ಆಗಬಹುದಾದ ಅನುಕೂಲಗಳಿಗೆ ಒಂದು ಉದಾಹರಣೆ. ಏಕೆಂದರೆ ಕೆನಡಾದ ಜಿಡಿಪಿ ಅಲ್ಲಿಯ ಜಿಎಸ್‌ಟಿ ಬದಲಿಕೆಯಿಂದ ೧.೪% ಹೆಚ್ಚಳ ಕಂಡಿತು. ಹೆಚ್ಚಿನ ಉತ್ಪಾದನಾಂಗ ದಕ್ಷತೆಯಿಂದ ೦.೯% ಹೆಚ್ಚಳ ಸಾಧ್ಯವಾದರೆ ೦.೫% ಹೆಚ್ಚಳ ಹೆಚ್ಚಿನ ಬಂಡವಾಳ ಸಂಗ್ರಹದಿಂದ ಸಾಧ್ಯವಾಯಿತು. ವಾರ್ಷಿಕ ೧೫ ಬಿಲಿಯನ್ ಡಾಲರ್‌ಗಳಷ್ಟು ಲಾಭ ಪಡೆಯಲು ಸಾಧ್ಯವಾಯಿತು. ಈ ಕೆಳಗಿನ ಪಟ್ಟಿ ವಿವಿಧ ರಾಷ್ಟ್ರಗಳಲ್ಲಿ ಕಂಡುಬರುವ ಜಿಎಸ್‌ಟಿ ದರಗಳನ್ನು ವಿವರಿಸುತ್ತದೆ.

| ದೇಶ | ಜಿಎಸ್‌ಟಿ |
|---|---|
| ಆಸ್ಟ್ರೇಲಿಯಾ | ೧೦% |
| ಫ್ರಾನ್ಸ್ | ೧೯.೬% |
| ಕೆನಡಾ | ೫% |
| ಜರ್ಮನಿ | ೧೯% |
| ಜಪಾನ್ | ೫% |
| ಸಿಂಗಪುರ | ೭% |
| ಸ್ವೀಡನ್ | ೨೫% |
| ಭಾರತ | ೨೦% |
| ನ್ಯೂಝಿಲೆಂಡ್ | ೧೫% |
| ಪಾಕಿಸ್ತಾನ | ೧೭% |

ಭಾರತದಲ್ಲಿ ಜಿಎಸ್‌ಟಿಯನ್ನು ಜಾರಿಗೆ ತರುವ ಹಿನ್ನೆಲೆಯಲ್ಲಿ ೨೦೦೦ದ ಇಸವಿಯಲ್ಲಿ ಮಾನ್ಯ ವಾಜಪೇಯಿಯವರ ಸರ್ಕಾರ ಒಂದು ಸಶಕ್ತ ಸಮಿತಿಯನ್ನು ರಚಿಸಿ ಚರ್ಚೆ ಆರಂಭಿಸಿತು. ಸಮಿತಿಯ ಮುಖ್ಯಸ್ಥರಾಗಿ, ಶ್ರೀಯುತ ಆಸಿಮ್ ದಾಸ್‌ಗುಪ್ತ ಅವರನ್ನು ನೇಮಿಸಲಾಯಿತು. (ಹಣಕಾಸು ಸಚಿವರು, ಪಶ್ಚಿಮ ಬಂಗಾಳ) ಸಮಿತಿಯ ಶಿಫಾರಸ್ಸಿನಂತೆ ೨೦೦೭-೦೮ರ ಮುಂಗಡ ಪತ್ರದಲ್ಲಿ ಅಂದಿನ ಮಾನ್ಯ ಹಣಕಾಸು ಮಂತ್ರಿಗಳಾಗಿದ್ದ ಶ್ರೀ ಪಿ. ಚಿದಂಬರಂ ೨೦೧೦ರ ಏಪ್ರಿಲ್ ೧ರಿಂದ ಜಿಎಸ್‌ಟಿ ಜಾರಿಗೆ ತರಲಾಗುವುದೆಂದು ಘೋಷಿಸಿದರು. ನಂತರ ರಚಿಸಲ್ಪಟ್ಟ ಹಲವಾರು ಸಮಿತಿಗಳು ಹಾಗೂ

**ಡಾ॥ ಜಯಂತಿ ಜೆ.**

ಕೈಗಾರಿಕೋದ್ಯಮಿಗಳನ್ನೊಳಗೊಂಡ ಚರ್ಚೆಗಳಲ್ಲಿ ಜಿಎಸ್‌ಟಿ ಬಗ್ಗೆ ಚರ್ಚೆ ನಡೆಸಿ, ಅದನ್ನು ಜಾರಿಗೆ ತರುವ ಬಗ್ಗೆ ತೀರ್ಮಾನಿಸಲಾಯಿತು. ೨೦೦೯ರ ಅಕ್ಟೋಬರ್ ೧೯ರಂದು ಆಗಿನ ಹಣಕಾಸು ಸಚಿವರಾದ ಮಾನ್ಯ ಪ್ರಣವ್ ಮುಖರ್ಜಿ ಹಾಗೂ ಸಶಕ್ತ ಸಮಿತಿ ಪರಸ್ಪರ ಚರ್ಚಿಸಿ ಜಿಎಸ್‌ಟಿಯ ರೂಪುರೇಷೆಯನ್ನು ತಯಾರಿಸಲು ಕ್ರಮ ಕೈಗೊಳ್ಳಲಾಯಿತು. ಆದರೆ ಇಂದಿಗೂ ಜಿಎಸ್‌ಟಿಯನ್ನು ಕ್ರಮಬದ್ಧವಾಗಿ ಜಾರಿಗೆ ತರಲು ಸಾಧ್ಯವಾಗಿಲ್ಲ.

ಇತ್ತೀಚಿನ ಕೆಲವು ವರ್ಷಗಳಿಂದ ಭಾರತದಲ್ಲಿ ಜಿಎಸ್‌ಟಿಯನ್ನು ಜಾರಿಗೆ ತರಲು ಪ್ರಯತ್ನಗಳು ನಡೆದಿದ್ದರೂ ಕ್ರಮಬದ್ಧವಾಗಿ ಜಾರಿಗೆ ತರಲು ಇನ್ನೂ ಸಾಧ್ಯವಾಗದೆ ಇರುವುದು ವಿಷಾದನೀಯ ಸಂಗತಿ. ಭಾರತದಲ್ಲಿ ರಾಜ್ಯಗಳ ಒಟ್ಟು ಆದಾಯದಲ್ಲಿ ೪೫%ರಷ್ಟು ಆದಾಯವು ಸರಕು ಸೇವೆಗಳ ಮೇಲೆ ವಿಧಿಸಲಾಗುವ ಪರೋಕ್ಷ ತೆರಿಗೆಗಳಿಂದಲೇ ಸಂಗ್ರಹವಾಗುತ್ತದೆ. ಭಾರತ ಒಂದು ಸಂಯುಕ್ತ ಗಣರಾಜ್ಯ ವಾಗಿರುವುದರಿಂದ ತೆರಿಗೆ ನಿಯಮಗಳ ರಚನೆಯಲ್ಲಿ ರಾಜ್ಯಗಳ ಸಮ್ಮತಿ ಪಡೆಯುವುದು ಅವಶ್ಯಕ. ಜಿಎಸ್‌ಟಿಯನ್ನು ಜಾರಿಗೆ ತರುವುದರಿಂದ ನಮ್ಮ ರಾಷ್ಟ್ರದಲ್ಲಿ ಹಲವು ರೀತಿಯ ಧನಾತ್ಮಕ ಬದಲಾವಣೆಗಳು ಕಂಡುಬರಲಿವೆ ಎಂದರೆ ತಪ್ಪಾಗಲಾರದು.

ಜಿಎಸ್‌ಟಿ ಎಂಬುದು ಒಂದು ಮೌಲ್ಯವರ್ಧಿತ ತೆರಿಗೆಯಾಗಿದ್ದು, ಎಲ್ಲಾ ಸರಕು ಸೇವೆಗಳ ಮೇಲೆ ವಿಧಿಸುವ ತೆರಿಗೆಯಾಗಿದೆ. ಸಾಮಾಜಿಕ, ಪರಿಸರ ಹಾಗೂ ಆಮದು ಅವಲಂಬನೆಗಳ ಕಾರಣದಿಂದಾಗಿ ಕಚ್ಚಾ ತೈಲ, ನೈಸರ್ಗಿಕ ಅನಿಲ, ಟರ್ಬೈನಿನ ಉರುವಲು, ಅತಿ ವೇಗದ ಡೀಸೆಲ್, ಮಾನವ ಅನುಭೋಗಕ್ಕೆ ಇರುವ ಆಲ್ಕೋಹಾಲ್ ಇತ್ಯಾದಿಗಳನ್ನು ಪಟ್ಟಿಯಿಂದ ಹೊರಗಿಡಲಾಗಿದೆ. ಕೇಂದ್ರದ ಕೆಲವು ತೆರಿಗೆಗಳಾದ ಎಕ್ಸೈಸ್ ತೆರಿಗೆ, ಸೇವಾ ತೆರಿಗೆ, ಕಸ್ಟಂ ತೆರಿಗೆ, ಸರ್‌ಚಾರ್ಜ್ ಇವು ಜಿಎಸ್‌ಟಿಯಲ್ಲಿ ಸೇರಿವೆ. ಇತರ ತೆರಿಗೆಗಳಾದ ವ್ಯಾಟ್, ಮಾರಾಟ ತೆರಿಗೆ, ಮನರಂಜನಾ ತೆರಿಗೆ, ಐಷಾರಾಮಿ ತೆರಿಗೆ, ಲಾಟರಿ ಮೇಲಿನ ತೆರಿಗೆ, ಬೆಟ್ಟಿಂಗ್ ಮತ್ತು ಜೂಜಾಟ, ರಾಜ್ಯ ತೆರಿಗೆಗಳು ಮತ್ತು ಸರ್‌ಚಾರ್ಜ್ ಇತ್ಯಾದಿಗಳು ಸೇರ್ಪಡೆಯಾಗಲಿವೆ. ಏಕೆಂದರೆ ಇವು ಪ್ರವೇಶ ತೆರಿಗೆ, ಸರಕು ಹಾಗೂ ಸೇವೆಗಳ ಪೂರೈಕೆಗೆ ಸಂಬಂಧಿಸಿವೆ. ಜಿಎಸ್‌ಟಿ ಎಂಬುದು ಅಂತಿಮ ಅನುಭೋಗಿ ಪಾವತಿಸುವ ತೆರಿಗೆಯಾಗಿದೆ. ಚಿಲ್ಲರೆ ವ್ಯಾಪಾರಿ ತಾನು ಚಿಲ್ಲರೆ ವ್ಯಾಪಾರಕ್ಕಾಗಿ ಖರೀದಿಸುವ ವಸ್ತುಗಳ ಮೇಲೆ ಪಾವತಿಸಿದ ತೆರಿಗೆಯ ಕ್ರೆಡಿಟ್‌ಅನ್ನು ಪಡೆಯಬಹುದಾಗಿದೆ.

ಅನೇಕ ರಾಜ್ಯಗಳು ವಿತ್ತೀಯ ಸ್ವಾತಂತ್ರ್ಯದ ದೃಷ್ಟಿಯಿಂದ ಜಿಎಸ್‌ಟಿಯನ್ನು ವಿರೋಧಿಸುತ್ತಿವೆ. ಏಕೆಂದರೆ ಫೆಡರಲ್ ಮಟ್ಟದ ಜಿಎಸ್‌ಟಿ ವಿತ್ತೀಯವಾಗಿ ರಾಜ್ಯಗಳನ್ನು ಕೇಂದ್ರ ಸರ್ಕಾರದ ಮೇಲೆ ಅವಲಂಬಿತವಾಗುವಂತೆ ಮಾಡಬಹುದು. ಶ್ರೀಮಂತ ರಾಜ್ಯಗಳಲ್ಲಿ, ತಮ್ಮದೇ ಆದ ಆದಾಯವನ್ನು ಕೇಂದ್ರವು ಬಡ ರಾಜ್ಯಗಳಿಗೆ ವರ್ಗಾಯಿಸಬಹುದೆಂಬ ಭೀತಿ ಕಾಡುತ್ತಿದೆ. ಆದರೆ ಎರಡು ಹಂತದ ಜಿಎಸ್‌ಟಿಯಿಂದ, ಅಂದರೆ ಕೇಂದ್ರ ಜಿಎಸ್‌ಟಿ ಮತ್ತು ರಾಜ್ಯ ಜಿಎಸ್‌ಟಿಯನ್ನು ಪ್ರತ್ಯೇಕವಾಗಿ ವಿಧಿಸುವುದರಿಂದ ರಾಜ್ಯಗಳು ಪಡೆಯುವ ಆದಾಯ ಅವರದೇ ಖಜಾನೆಯಲ್ಲಿ ಸಂಗ್ರಹಿತವಾಗುತ್ತದೆ. ಇದು ವಿತ್ತೀಯ ಸ್ವಾತಂತ್ರ್ಯಕ್ಕೆ ಧಕ್ಕೆ ತರಲಾರದು. ರಾಜ್ಯಗಳಿಗೆ ಜಿಎಸ್‌ಟಿಯಿಂದ ವಿಸ್ತಾರವಾದ ತೆರಿಗೆ ಆಧಾರ ಸಿಗಲಿದೆ.

ಜಿಎಸ್‌ಟಿಯಿಂದ ಗ್ರಾಹಕರಿಗೂ ಲಾಭ ಸಿಗಲಿದೆ. ಒಂದು ಸರಕಿನ ಮೌಲ್ಯವರ್ಧನೆ ಸಮಯದಲ್ಲಿ ಪ್ರತಿ ಹಂತದಲ್ಲೂ ಸರಕಿನ ಮೂಲ ಬೆಲೆಯ ಮೇಲೆ ತೆರಿಗೆ ವಿಧಿಸಲಾಗುತ್ತದೆ. ಆದರೆ ಗ್ರಾಹಕ ಮಾತ್ರ ತೆರಿಗೆ ನೀಡುವುದು ಕಟ್ಟಕಡೆಯ ಮಾರಾಟದ ಅಥವಾ ಸೇವೆ ಪಡೆಯುವ ಹಂತದಲ್ಲಿ ಮಾತ್ರ.


**ಡಾ|| ಜಯಂತಿ ಜೆ.**

ಪ್ರಾಂಶುಪಾಲರು, ಸರ್ಕಾರಿ ಪದವಿ ಕಾಲೇಜು, ಹೊಳೆ ಹೊನ್ನೂರು

ಶಿವಮೊಗ್ಗ – ೫೭೭ ೨೨೭





# ಬಂಡೆಗಲ್ಲಿನ ಮುಳ್ಳು



**ಮಾ**ಮೂಲಿ ಬದುಕಿನ ವಸೂಲಿ
ಮನಸ್ಸಿನ ಬಾಜಿ ಕಟ್ಟುವ ಕಾನೂನು
ಈ ಪ್ರೇಮ...
ಇಲ್ಲಿ ನ್ಯಾಯ ಕಮ್ಮಿ, ವಾದವೇ ಜಾಸ್ತಿ
ನನ್ನೆದುರಿಗೆ ನೀನೊಮ್ಮೆ,
ನಿನ್ನೆದುರಿಗೆ ನಾನೊಮ್ಮೆ ಉಸುರುವ,
ಹೊಯ್ದಾಡುವ ಜರೂರಿ ಹೋರಾಟ...
ಹೊಯ್ದಾಡಿ, ನರಳಾಡಿ, ಗೋಣಗಿ, ಗುದ್ದಾಡಿ
ಕೊನೆಗೊಮ್ಮೆ,
ನಿನಗೊಮ್ಮೆ ನಾನು ಸೋತು
ನನಗೊಮ್ಮೆ ನೀನೂ ಸಹ ಸೋತು
ಬದುಕಿನ ಪುಟಗಳಲ್ಲಿ ಸುಂದರ ಗಿಣಿಗಳಾಗುವಾ...
ಯಾವ ವಿವರಣೆಗೂ ನಿಲುಕದಂತಹುದಾಗಿರಬೇಕು
ಪ್ರೀತಿ...ಅದು ಮಾತ್ರ ಶಾಶ್ವತ...
ಅಂತಹದ್ದೊಂದು ಪ್ರೀತಿ
ನಮ್ಮಿಬ್ಬರ ಮಧ್ಯೆ ಸಂಭವಿಸಿದೆಯಾ...?

ಇಲ್ಲವಾದರೆ,
ನಿನ್ನ ಪ್ರೀತಿಯ ಅಂಚಿನಿಂದ
ಆಚೆ ನೂಕದಿರು ಸಾಕು...
ನನ್ನ ಗೆಳೆತನ ಸಾಕೆನಿಸಿದಾಗ
ನಿನ್ನ ಅನುರಾಗದ ಕದ ಮುಚ್ಚು...
ಕಣ್ಣಮುಚ್ಚಾಲೆಯ ಸ್ನೇಹವಂತೂ ಬೇಡ...
ನೀಡಿದರೆ ಸಾಕೆನಗೆ ನಿನ್ನ ಪ್ರೇಮದ ಒಲವು...
ಹೊದಿಸಿದಷ್ಟು, ಮರೆಮಾಚಿದಷ್ಟು ...
ನಿಷ್ಕಲ್ಮಶ ಭಾವ...
ಬರಿದಾಗದು ಇದೆಂದು,
ಬರಿದಾಗದಂತೆಯೂ ನೀನಿರು
ಗೊತ್ತು, ಗುರಿಗಳಿಲ್ಲದೆ ಬೆಳೆದ ಈ ಪ್ರೇಮ...
ಗುರಿ–ದಾರಿ ಹಿಡಿದು ಬೇಗ ಒಗ್ಗೂಡಲಿ...
ಹಾಗಾಗದೇ ಹೋದರೆ
ಬಂಡೆಗಲ್ಲಲ್ಲಿ ಮುಳ್ಳಾಗಲಿ...


**ಆನಂದಕುಮಾರ ಜಕ್ಕಣ್ಣವರ**

ಉಪನ್ಯಾಸಕರು, ಸರಕಾರಿ ಪ್ರಥಮ ದರ್ಜೆ ಕಾಲೇಜು

ಹಳಿಯಾಳ, ಉತ್ತರ ಕನ್ನಡ ಜಿಲ್ಲೆ



# ಶಾಲೆಗಳಲ್ಲಿ ರಂಗಭೂಮಿಯ ಮಹತ್ವ ಮತ್ತು ಅವಶ್ಯಕತೆ

**ಎಸ್. ಮಾಲತಿ**

**ಶಾ**ಲೆಗಳಲ್ಲಿ ರಂಗಭೂಮಿಯ ಮಹತ್ವ ಮತ್ತು ಅವಶ್ಯಕತೆಗಳ ಬಗ್ಗೆ ಮಾತನಾಡುವುದಕ್ಕಿಂತ ಮೊದಲು ನಮ್ಮ ರಾಜ್ಯದ ಶಾಲೆಗಳ ಪರಿಸ್ಥಿತಿ ಹೇಗಿದೆ ಎಂಬುದನ್ನು ಪ್ರಸ್ತುತಪಡಿಸಿದರೆ, ಆ ಶಾಲೆಗಳಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಅವಶ್ಯಕತೆ ಎಷ್ಟರಮಟ್ಟಿಗೆ ಇದೆ ಎಂಬುದು ಸಾಬೀತಾಗುತ್ತದೆ.

ಭಾರತದಲ್ಲಿ ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿ ಮಾಡಿದ್ದು, ದೇಶಕ್ಕೆ ಸ್ವಾತಂತ್ರ್ಯ ಸಿಕ್ಕ ಆರು ದಶಕಗಳ ನಂತರ. ಒಂದು ದೇಶದ ಭವಿಷ್ಯ, ಆ ದೇಶದ ಶಿಕ್ಷಣ ವ್ಯವಸ್ಥೆಯನ್ನು ಬಹುಮಟ್ಟಿಗೆ ಅವಲಂಬಿಸಿರುತ್ತದೆ. ೨೦೦೧ರಲ್ಲಿ ಆರಂಭವಾದ ಸರ್ವಶಿಕ್ಷಣ ಅಭಿಯಾನದ ಪ್ರಕ್ರಿಯೆ ೧೪ ವರ್ಷದೊಳಗಿನ ಎಲ್ಲಾ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಬೇಕು ಎಂಬಲ್ಲಿಗೆ ಬಂದು ನಿಂತಿತು. ಆದರೆ, ಕರ್ನಾಟಕದಲ್ಲಿ ಶಾಲೆಯ ಮುಖವನ್ನೇ ಕಾಣದ ೧,೦೮,೫೪೨ ಮಕ್ಕಳಿದ್ದಾರೆ ಎಂದು ೨೦೧೧ನೇ ಜನಗಣತಿ ಹೇಳುತ್ತದೆ. ರಾಜ್ಯದಲ್ಲಿ ಅಪೌಷ್ಟಿಕತೆಯಿಂದ ಬಳಲುವ ೬೧,೦೦೦ ಮಕ್ಕಳಿದ್ದಾರೆ. ಈ ಅಂಕಿಅಂಶಗಳು ವಾಸ್ತವ ಪರಿಸ್ಥಿತಿಯನ್ನು ಎಷ್ಟರಮಟ್ಟಿಗೆ ಬಿಂಬಿಸುತ್ತವೆ ಎಂಬುದೇ ಸಂಶಯಾತ್ಮಕ.

ಭಾರತದಲ್ಲಿ ಇಂದಿಗೂ ಕೂಡ ಪ್ರಾಥಮಿಕ ಹಂತದಲ್ಲಿ ಸುಮಾರು ೩ ಲಕ್ಷ ಕೊಠಡಿಗಳ ಹಾಗೂ ಪ್ರೌಢಶಿಕ್ಷಣ ಹಂತದಲ್ಲಿ ೧.೭೦ ಲಕ್ಷ ಕೊಠಡಿಗಳ ಕೊರತೆಯಿದೆ. ಅರ್ಧದಷ್ಟು ಶಾಲೆಗಳಲ್ಲಿ ಮೂಲಭೂತ ಅವಶ್ಯಕತೆಗಳಾದ ಶೌಚಾಲಯ ಹಾಗೂ ಕುಡಿಯುವ ನೀರಿನ ವ್ಯವಸ್ಥೆಯಿಲ್ಲ. ಶಿಕ್ಷಕರ ಕೊರತೆಯಂತೂ ಹೇಳಲಸಾಧ್ಯ. ಶಿಕ್ಷಕರ ಗುಣಮಟ್ಟವೂ ಕಳಪೆಯೇ.

ಪಠ್ಯಪುಸ್ತಕಗಳನ್ನು ರಚಿಸುವಾಗ ಸರಿಯಾದ ನೀತಿ ನಿಯಮಗಳನ್ನು ಅನುಸರಿಸುತ್ತಿಲ್ಲ. ನಮ್ಮದು ಬಹುಸಂಸ್ಕೃತಿಯ, ಬಹುಭಾಷೆಯ, ಬಹುಧರ್ಮೀಯ ದೇಶ. ಇಲ್ಲಿ ಪಠ್ಯಪುಸ್ತಕಗಳನ್ನು ರಚಿಸುವಾಗ ಭಾವೈಕ್ಯತೆಯ ದೃಷ್ಟಿ ಮುಖ್ಯವಾಗಿರಬೇಕು. ಇತಿಹಾಸದ ಸರಿಯಾದ ಜ್ಞಾನವಿರಬೇಕು. ಧರ್ಮ ಹಾಗೂ ಸಂಸ್ಕೃತಿಯ ಚಲನಶೀಲತೆಯ ದಾಖಲೆಯಿರಬೇಕು. ವೈಜ್ಞಾನಿಕ ಮನೋಭಾವವಿರಬೇಕು. ಪ್ರಜಾಪ್ರಭುತ್ವಕ್ಕೆ ಪೂರಕವಾದ ಧರ್ಮನಿರಪೇಕ್ಷತೆಯ ಭಾವವಿರಬೇಕು. ಸಮಾನತೆ, ವಿಶ್ವಬಂಧುತ್ವ, ಮಾನವೀಯತೆಗಳನ್ನು ವಿದ್ಯಾರ್ಥಿಗಳಲ್ಲಿ ಉದ್ದೀಪನಗೊಳಿಸುವಂತಹ ಅಂಶಗಳಿರಬೇಕು. ಆದರೆ, ಪಠ್ಯಪುಸ್ತಕಗಳಲ್ಲಿ ಇವುಗಳೆಲ್ಲದರ ಗೈರುಹಾಜರಿಯಾಗಿರುವುದು ಇತ್ತೀಚೆಗೆ ನಡೆಯುತ್ತಿರುವ ಹಲವು ವಿದ್ಯಮಾನಗಳಲ್ಲಿ ಪ್ರಕಟಗೊಂಡಿದೆ.

ಕರ್ನಾಟಕ ರಾಜ್ಯದಲ್ಲಿ ೧೮ ವರ್ಷದೊಳಗಿನ ಮಕ್ಕಳ ಸಂಖ್ಯೆ ಸುಮಾರು ಒಂದು ಕೋಟಿ ೯೧ ಲಕ್ಷಕ್ಕೂ ಅಧಿಕವಾಗಿದೆ. ಇದರಲ್ಲಿ ಬಹುಪಾಲು, ಅಂದರೆ ಸುಮಾರು ಒಂದು ಕೋಟಿ ೧೪ ಲಕ್ಷ ಮಕ್ಕಳು ಗ್ರಾಮೀಣ ಪ್ರದೇಶಗಳಲ್ಲಿದ್ದಾರೆ. ಈ ಪ್ರದೇಶಗಳಲ್ಲಿ ಸರ್ಕಾರ ನಡೆಸುತ್ತಿದ್ದ ೪೬,೨೮೮ ಶಾಲೆಗಳಲ್ಲಿ ೩,೧೭೪ ಶಾಲೆಗಳನ್ನು ಮುಚ್ಚುವ ನಿರ್ಧಾರವನ್ನು ಸರ್ಕಾರ ಕೈಗೊಂಡಿತ್ತು. ಮುಚ್ಚಬೇಕೆಂದಿರುವ ಶಾಲೆಗಳಲ್ಲಿ ಓದುತ್ತಿರುವ ಸುಮಾರು ೧೦,೦೦೦ ವಿದ್ಯಾರ್ಥಿಗಳ ಪಾಡೇನು ? ಎಂಬುದರ ಬಗ್ಗೆ ಸರ್ಕಾರ ಗಮನ ಹರಿಸಿಲ್ಲ. ಮೊದಲೇ ಹಳ್ಳಿಗಳಲ್ಲಿ ಶಿಕ್ಷಣಕ್ಕೆ ಪ್ರೋತ್ಸಾಹ ಕಡಿಮೆ. ಬಡತನದ ಬವಣೆಯಲ್ಲಿ ಬೇಯುತ್ತಿರುವ ಪೋಷಕರು ತಮ್ಮ ಮಕ್ಕಳನ್ನು ದನ ಮೇಯಿಸಲೋ, ಕುರಿ ಕಾಯಲೋ ಇಲ್ಲವೇ ಹೊಲದ ಕೂಲಿ ಕೆಲಸಕ್ಕೆ ಕಳುಹಿಸುವುದೇ ಹೆಚ್ಚು. ಹೆಣ್ಣುಮಕ್ಕಳ ಸ್ಥಿತಿಯಂತೂ ಇನ್ನೂ ಶೋಚನೀಯ. ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಅಗತ್ಯ ಎಂಬ ಭಾವನೆ ಇನ್ನೂ ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ಗಟ್ಟಿಯಾಗಿ ಬೇರೂರಿಲ್ಲ.

ನಗರಪ್ರದೇಶದ ಶಾಲಾಮಕ್ಕಳಂತೂ ಮನೆಯಿಂದ ಬಹುದೂರವಿರುವ ಶಾಲೆಗೆ ಬೆಳಿಗ್ಗೆ ಹೋಗಿ ಸಂಜೆ ಬರುವುದರೊಳಗೆ ಸುಸ್ತಾಗಿರುತ್ತಾರೆ. ಪಠ್ಯಪುಸ್ತಕಗಳ ಹೊರೆ, ಹೋಂ ವರ್ಕ್‌ನ ಒತ್ತಡ ಎಷ್ಟಿರುತ್ತದೆಂದರೆ ಮಕ್ಕಳ ಮುಖದ ನಗೆ ಮಾಸಿರುತ್ತದೆ. ಹೃದಯ ಸಂತೋಷದಿಂದ ಅರಳುವುದಿಲ್ಲ. ಡೊನೇಷನ್ ಹಾವಳಿ ಪೋಷಕರ ಒತ್ತಡವನ್ನು ಗರಿಷ್ಠ ಮಿತಿಗೇರಿಸುತ್ತದೆ.

ನಮ್ಮ ಶಿಕ್ಷಣದ ಮತ್ತು ಶಾಲೆಗಳ ಪರಿಸ್ಥಿತಿ ಇಷ್ಟು ಹೀನಾಯವಾಗಿರುವಾಗ ಶಾಲೆಗಳಲ್ಲಿ ಮಕ್ಕಳ ಮನಸ್ಸನ್ನು ಅರಳಿಸುವ, ಹೃದಯವನ್ನು ಹಿಗ್ಗಿಸುವ, ಮೆದುಳನ್ನು ಚುರುಕುಗೊಳಿಸುವ, ಕತ್ತಲ ಬದುಕಿನಲ್ಲಿ ಬೆಳಕು ಕಾಣಿಸುವ ಸಾಂಸ್ಕೃತಿಕ ಚಟುವಟಿಕೆಗಳ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚಾಗಿದೆ. ನೃತ್ಯ, ಚಿತ್ರಕಲೆ, ಸಾಮಾಜಿಕ ಕಳಕಳಿ, ಸಂಗೀತ, ಯೋಗ ಇವುಗಳೆಲ್ಲವೂ ಇಂದಿನ ಶಾಲಾ ವಿದ್ಯಾರ್ಥಿಗಳಿಗೆ ಅಗತ್ಯ.

---

ನಮ್ಮ ಶಿಕ್ಷಣದ ಮತ್ತು ಶಾಲೆಗಳ ಪರಿಸ್ಥಿತಿ ಇಷ್ಟು ಹೀನಾಯವಾಗಿರುವಾಗ ಶಾಲೆಗಳಲ್ಲಿ ಮಕ್ಕಳ ಮನಸ್ಸನ್ನು ಅರಳಿಸುವ, ಹೃದಯವನ್ನು ಹಿಗ್ಗಿಸುವ, ಮೆದುಳನ್ನು ಚುರುಕುಗೊಳಿಸುವ, ಕತ್ತಲ ಬದುಕಿನಲ್ಲಿ ಬೆಳಕು ಕಾಣಿಸುವ ಸಾಂಸ್ಕೃತಿಕ ಚಟುವಟಿಕೆಗಳ ಅಗತ್ಯ ಎಂದಿಗಿಂತಲೂ ಇಂದು ಹೆಚ್ಚಾಗಿದೆ. ನೃತ್ಯ, ಚಿತ್ರಕಲೆ, ಸಾಮಾಜಿಕ ಕಳಕಳಿ, ಸಂಗೀತ, ಯೋಗ ಇವುಗಳೆಲ್ಲವೂ ಇಂದಿನ ಶಾಲಾ ವಿದ್ಯಾರ್ಥಿಗಳಿಗೆ ಅಗತ್ಯ. ಇವೆಲ್ಲವನ್ನೂ ಒಳಗೊಂಡಿರುವ ರಂಗಭೂಮಿಯ ಪಾಠಗಳೂ ಮತ್ತು ಚಟುವಟಿಕೆಗಳೂ ವಿದ್ಯಾರ್ಥಿಗಳಲ್ಲಿ ಸ್ಫೂರ್ತಿಯ ಸೆಲೆಯನ್ನೇ ಹೊಮ್ಮಿಸಬಲ್ಲವು.

---



ಇವೆಲ್ಲವನ್ನೂ ಒಳಗೊಂಡಿರುವ ರಂಗಭೂಮಿಯ ಪಾಠಗಳೂ ಮತ್ತು ಚಟುವಟಿಕೆಗಳೂ ವಿದ್ಯಾರ್ಥಿಗಳಲ್ಲಿ ಸ್ಫೂರ್ತಿಯ ಸೆಲೆಯನ್ನೇ ಹೊಮ್ಮಿಸಬಲ್ಲವು.

ಒಂದು ನಾಟಕ ಮಾಡಲು ನಟ–ನಟಿಯರಿಗೆ ಭಾಷೆಯ ಮೇಲೆ ಪ್ರಭುತ್ವವಿರಬೇಕು. ಸಂಭಾಷಣೆಯ ಏರಿಳಿತಗಳನ್ನು ತಿಳಿದಿರಬೇಕು. ತನ್ನ ಪಾತ್ರದ ಮತ್ತು ಸಹಪಾತ್ರಗಳ ವ್ಯಕ್ತಿತ್ವ, ನಡೆ–ನುಡಿ, ಸಂಭಾಷಣೆ, ಆಂಗಿಕ–ವಾಚಿಕಗಳು ಎಲ್ಲವನ್ನೂ ಅರಗಿಸಿಕೊಂಡು ಒಂದು ನಾಟಕವನ್ನು ಮಗು ಅರ್ಥಮಾಡಿಕೊಳ್ಳುತ್ತದೆ. ಇದೊಂದು ಪ್ರಜ್ಞಾವಂತಿಕೆಯ, ಪೂರ್ಣ ಎಚ್ಚರದ, ಸ್ವವಿಮರ್ಶೆ, ಜೀವನ ವಿಮರ್ಶೆಯ ಪಯಣ. ಇದರೊಂದಿಗೆ ಮಕ್ಕಳು ನಾಯಕತ್ವದ ಗುಣ, ಸಹಜೀವನದ ಪಾಠ, ಬಣ್ಣಗಳ ಬಗ್ಗೆ ಜ್ಞಾನ, ಭಾಷೆಯ ಮೇಲೆ ಪ್ರಭುತ್ವ ಎಲ್ಲವನ್ನೂ ಕಲಿಯುತ್ತಾರೆ. ಶಾಲೆಯ ಪಠ್ಯಕ್ರಮದಲ್ಲಿಲ್ಲದ ಉತ್ಸಾಹ, ಅಂತರ್ದೃಷ್ಟಿ, ಚುರುಕುತನ, ಬದುಕಿನ ಬಗ್ಗೆ ಪರಿಜ್ಞಾನ – ಇವು ರಂಗಭೂಮಿಯಿಂದ ಲಭ್ಯವಾಗುತ್ತವೆ. ಪಠ್ಯಪುಸ್ತಕದ ಕ್ರಿಮಿಗಳಾಗುತ್ತಿರುವ ವಿದ್ಯಾರ್ಥಿಗಳು ಸಮಾಜದ ಬಗ್ಗೆ ಯೋಚಿಸಲು ಕಲಿಯದ ಕೂಪಮಂಡೂಕಗಳಾಗಿರುತ್ತಾರೆ. ಅಂತಹ ವಿದ್ಯಾರ್ಥಿಗಳನ್ನು ಸಮಾಜಮುಖಿಯಾಗಿಸುವ ಶಕ್ತಿ ರಂಗಭೂಮಿಗಿದೆ. ಎಲ್ಲಕ್ಕಿಂತ ಹೆಚ್ಚಾಗಿ, ಇಂದಿನ ಹಿಂಸಾಯುಗದಲ್ಲಿ, ಎಲ್ಲ ಅಹಂಕಾರಗಳನ್ನೂ ಕಳಚಿ, ಅಹಿಂಸೆಯ ಪಥ ಹಿಡಿದು, ಆರ್ದ್ರ ಮಾನವೀಯತಾವಾದಿಗಳನ್ನಾಗಿ, ಸಮಾಜವನ್ನು ಪೀಡಿಸುತ್ತಿರುವ ಬಡತನ, ನಿರುದ್ಯೋಗ ಮುಂತಾದ ಸಾಮಾಜಿಕ ಆರ್ಥಿಕ ಸಮಸ್ಯೆಗಳ ಮೂಲದತ್ತ ಗಮನಹರಿಸುವ ದಿಸೆಯಲ್ಲಿ ವಿದ್ಯಾರ್ಥಿಗಳನ್ನು ರೂಪಿಸುವ ಶಕ್ತಿ ರಂಗಭೂಮಿಗಿದೆ.

"ಸಿನಿಮಾದಲ್ಲಿ ಮನುಷ್ಯನ ಚಿತ್ರ ಅವನಿರುವುದಕ್ಕಿಂತ ದೊಡ್ಡದು. ಟಿ.ವಿ.ಯಲ್ಲಿ ಮನುಷ್ಯನ ಚಿತ್ರ ಅವನಿರುವುದಕ್ಕಿಂತ ಚಿಕ್ಕದು. ಆದರೆ, ನಾಟಕದಲ್ಲಿ ಮಾತ್ರ ಅದು 'ಲೈಫ್ ಸೈಜ್'" ಎಂಬ ಬಿ. ವಿ. ಕಾರಂತರ ಮಾತನ್ನು ಮರೆಯಲಾಗದು. ಪ್ರಪಂಚದ ಹಿಂಸೆಗೆ ಉತ್ತರ ಕೊಡುವ ಶಕ್ತಿ ರಂಗಭೂಮಿಗಿದೆ. ಪಾಲ್ ಫ್ರೈಯರೆ ಹೇಳುವ 'ಕಲ್ಚರ್ ಆಫ್ ಸೈಲೆನ್ಸ್'ನಿಂದ ಮನುಷ್ಯನನ್ನು ಸಂವಾದದೆಡೆ ಸಾಗಿಸುವ ಶಕ್ತಿ ರಂಗಭೂಮಿಗಿದೆ.

ಆದ್ದರಿಂದಲೇ ಶಾಲೆಗಳ ಪಠ್ಯಕ್ರಮದಲ್ಲಿ ರಂಗಭೂಮಿಯೂ ಒಂದಾಗಬೇಕು. ನಾಟಕದ ಪದವೀಧರರನ್ನು ಶಿಕ್ಷಕರನ್ನಾಗಿ ಎಲ್ಲಾ ಶಾಲೆಗಳಲ್ಲೂ ನೇಮಿಸಬೇಕು. ೨೦೦೪ರಲ್ಲಿ ೪೪ ರಂಗಶಿಕ್ಷಕರನ್ನು ಶಾಲೆಗಳಿಗೆ ನೇಮಿಸಿದ್ದು ಬಿಟ್ಟರೆ, ಸರ್ಕಾರ ಈ ದಿಸೆಯಲ್ಲಿ ಒಂದು ಹೆಜ್ಜೆಯನ್ನೂ ಮುಂದೆ ಇಟ್ಟಿಲ್ಲ. ಮಕ್ಕಳ ಭವಿಷ್ಯತ್ತಿನ ಬಗ್ಗೆ ಯೋಚಿಸದ ಇಂತಹ ಸರ್ಕಾರಗಳು ಆಡಳಿತದ ಗದ್ದುಗೆಗೆ ಏರಿದರೇನು ಪ್ರಯೋಜನ ? ಅಂತಹ ಸರ್ಕಾರಗಳಿಗೆ ನಮ್ಮ ಸಂಸ್ಕೃತಿ, ಸಾಂಸ್ಕೃತಿಕ ವಿಷಯಗಳ ಬಗ್ಗೆ ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸುವ ಅಗತ್ಯತೆಗಳ ಬಗ್ಗೆ ಕನಿಷ್ಠ ಪರಿಜ್ಞಾನವಾದರೂ ಇದೆಯೇ ? ಈ ಹಿನ್ನೆಲೆಯಲ್ಲಿ ಎಲ್ಲಾ ಶಾಲೆಗಳಲ್ಲೂ ರಂಗಶಿಕ್ಷಕರ ನೇಮಕ ಕಡ್ಡಾಯವಾಗಿ ಆಗಲಿ, ರಂಗಭೂಮಿ ನಮ್ಮೆಲ್ಲರ ಉಸಿರಾಗಲಿ ಎಂಬುದು ಸಾಮಾಜಿಕ ಕಳಕಳಿ ಇರುವ ಎಲ್ಲ ರಂಗಾಸಕ್ತರ ಆಶಯವಾಗಿದೆ.


**ಎಸ್. ಮಾಲತಿ**
'ಮಹಾಲಸ ನಿಲಯ', ಸಾಗರ


# ಕೊಲೆಗಡುಕರು ನೀವೇ !






ಹೊಟ್ಟೆಯಲಿರುವಾಗಲೇ
ಗುರುಗುರುತಿಸಿ ಕೊಂದಿರಿ
ಮೈನೆರೆದಾಗ
ಆರತಿ ನೆಪದಿ ಹಸೆಯೇರಿಸಿ
ಊರಿಗೆಲ್ಲ ಡಂಗೂರ ಸಾರಿ
ಲಜ್ಜೆಯ ಕೊಂದಿರಿ
ಹೆಣ್ಣು ನೋಡಲು ಬಂದ
ಮುನ್ನೂರು ಗಂಡುಗಳ ಮುಂದೆ
ಪ್ರದರ್ಶನಕ್ಕಿರಿಸಿ
ಸ್ವಾಭಿಮಾನವ ಕೊಂದಿರಿ
ವರದಕ್ಷಿಣೆ ತರದ ಕಾರಣಕ್ಕೆ
ಸೀಮೆಎಣ್ಣೆ ಸುರಿದು ಕೊಂದಿರಿ
ಹೆಣ್ಣು ಹಡೆದ ಕಾರಣಕ್ಕೆ ಮೂದಲಿಸಿ
ಆತ್ಮಸಾಕ್ಷಿಯ ಕೊಂದಿರಿ
ಇದೀಗ ಅಪರಿಚಿತರು ಅತ್ಯಾಚಾರವೆಸಗಿ
ಕೊಂದರೆಂದು
ಚೀರುತಿರುವಿರಿ
ಹುಟ್ಟಿನಿಂದ ಸಾವಿನವರೆಗೂ
ಅವಳ ಅಣುಅಣುವಾಗಿ ಕೊಲ್ಲುತಿರುವವರು
ನೀವೆಂಬುದ ಮರೆಯದಿರಿ !


**ಕು. ಸ. ಮಧುಸೂದನ್**
ರಂಗೇನಹಳ್ಳಿ, ಚಿಕ್ಕಮಗಳೂರು – ೫೭೭ ೧೪೪




# ವಿಶೇಷ ಆರ್ಥಿಕ ವಲಯಗಳು ಒಂದು ಮರುಚಿಂತನೆ



ಜನಸಾಮಾನ್ಯರು ತಮ್ಮದಲ್ಲದ ಬದುಕನ್ನು ತಮ್ಮದು ಎಂದು ಒಪ್ಪಿಕೊಳ್ಳಬೇಕಾದ ವಾತಾವರಣವನ್ನು ಬಂಡವಾಳಶಾಹಿಗಳು ಸೃಷ್ಟಿಸುತ್ತಿದ್ದಾರೆ. ಅಭಿವೃದ್ಧಿಯ ಹೆಸರಿನಲ್ಲಿ ಲಕ್ಷಾಂತರ ಜನ ರೈತರ, ಸಣ್ಣ ರೈತರ, ದಲಿತರ, ಕೂಲಿಕಾರ್ಮಿಕರ ಬದುಕನ್ನು ಬೀದಿಗೆ ತಳ್ಳುತ್ತಿದ್ದಾರೆ. ೧೯೫೦ರಿಂದ ವಿವಿಧ ಯೋಜನೆಗಳು, ಕೈಗಾರಿಕೆಯ ಉದ್ದೇಶದಿಂದ ಭೂಮಿಗಾಗಿ ಹಳ್ಳಿಗಳನ್ನು ವಶಪಡಿಸಿಕೊಂಡ ಸರ್ಕಾರ, ಖಾಸಗಿ ಕಂಪನಿಗಳಿಂದ ಭೂಮಿ ಕಳೆದುಕೊಂಡ ಸಂತ್ರಸ್ತರಿಗೆ ಇಲ್ಲಿಯವರೆಗೆ ಶೇ. ೬೫ರಿಂದ ಶೇ. ೭೫ರಷ್ಟು ಪುನರ್ವಸತಿ ಕಲ್ಪಿಸಲು ಸಾಧ್ಯವಾಗಿಲ್ಲ. ಇವರೆಲ್ಲ ಮನೆ ಮಠ ಕಳೆದುಕೊಂಡು ಬೀದಿಪಾಲಾಗಿದ್ದಾರೆ. ಇದರಲ್ಲಿ ಆದಿವಾಸಿಗಳು ಮತ್ತು ದಲಿತರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

**ಜಿ. ಎಂ. ನರಸಿಂಹ ಗುಂಜಹಳ್ಳಿ**

ಜಾಗತೀಕರಣವೆಂದರೆ ಶ್ರೀಮಂತರಿಂದ ಶ್ರೀಮಂತರಿಗಾಗಿ ಮತ್ತು ಶ್ರೀಮಂತರಿಗೋಸ್ಕರ ಸೃಷ್ಟಿಯಾದ ಆರ್ಥಿಕ ನೀತಿಗಳು. ಜಾಗತೀಕರಣದ ಮೂಲಕ ಬಡರಾಷ್ಟ್ರಗಳ ಶ್ರಮಶಕ್ತಿ ಹಾಗೂ ನೈಸರ್ಗಿಕ ಸಂಪತ್ತನ್ನು ಕೊಳ್ಳೆ ಹೊಡೆಯುವುದರೊಂದಿಗೆ ತೃತೀಯ ಜಗತ್ತಿನ ರಾಷ್ಟ್ರಗಳ ಮಾರುಕಟ್ಟೆಯ ಮೇಲೆ ತಮ್ಮ ಏಕಸ್ವಾಮ್ಯ ಚಕ್ರಾಧಿಪತ್ಯ ಸ್ಥಾಪಿಸುವ ಏಕೈಕ ಗುರಿ ಸಾಮ್ರಾಜ್ಯಶಾಹಿ ಶಕ್ತಿಗಳ ಮುಂದಿದೆ ಎಂದು ಹೇಳುತ್ತಾ ಜನರ ಆಹಾರ, ಶಿಕ್ಷಣ, ಆರೋಗ್ಯ, ಭಾಷೆ, ಸಂಸ್ಕೃತಿ ಬೆಳವಣಿಗೆಯೊಂದಿಗೆ ಜನರ ಮೂಲಭೂತ ಹಕ್ಕುಗಳನ್ನು ಯಾವ ರೀತಿ ಕಾಪಾಡಲಾಗುತ್ತಿದೆ ಎಂಬುದರ ಆಧಾರದ ಮೇಲೆಯೂ ಅಭಿವೃದ್ಧಿಯನ್ನು ಗುರುತಿಸಬಹುದಾಗಿದೆ. ಆ ಮುಖಾಂತರ ಯಾವುದೇ ಒಂದು ಸಮಾಜ ಯಾವ ದಿಕ್ಕಿನಲ್ಲಿ ಚಲಿಸುತ್ತಿದೆ ಎಂಬುದನ್ನು ಸರಿಯಾಗಿ ತುಲನೆ ಮಾಡಲೂ ಸಾಧ್ಯವಾಗುತ್ತದೆ. ಬ್ರಿಟಿಷ್ ಸಾಮ್ರಾಜ್ಯಶಾಹಿಗಳಿಂದ ಸ್ವತಂತ್ರಗೊಂಡ ಭಾರತ ನಂತರದ ದಿನಗಳಲ್ಲಿ ತನ್ನ ಸಂವಿಧಾನದ ಆಶಯಗಳಿಗೆ ಪೂರಕವಾಗಿ ಸಾರ್ವಭೌಮತೆಯನ್ನು ಎತ್ತಿ ಹಿಡಿಯುತ್ತ ಸಾಗಬೇಕಿತ್ತು. ಆದರೆ ಸ್ವಾತಂತ್ರ್ಯ ಗಳಿಸಿದ ೬೫ ವರ್ಷಗಳ ನಂತರ ಪ್ರಸ್ತುತ ಭಾರತದ ಪರಿಸ್ಥಿತಿಯನ್ನು ನೋಡಿದರೆ ಇಂದಿನ ಆಗುಹೋಗುಗಳು ಸಂವಿಧಾನದ ವಿರುದ್ಧದ ದಿಕ್ಕಿನತ್ತ ಚಲಿಸುತ್ತಿರುವುದು ಸ್ಪಷ್ಟವಾಗಿ ಗೋಚರಿಸುತಿದೆ.

ಶ್ರೀಮಂತ ಸಾಮ್ರಾಜ್ಯಶಾಹಿ ದೇಶಗಳು ಎರಡನೆಯ ಜಾಗತಿಕ ಯುದ್ಧದ ನಂತರ ಬಡ ಮತ್ತು ಅಭಿವೃದ್ಧಿಶೀಲ ದೇಶಗಳ ಲೂಟಿಗಾಗಿ ಯುದ್ಧಕ್ಕೆ ಕೈಹಾಕಲಿಲ್ಲ. ಬದಲಿಗೆ ವಿವಿಧ ಬಗೆಯ ಗಾಳಗಳನ್ನು ಹಾಕುತ್ತ, ತಂತ್ರ ಕುತಂತ್ರಗಳನ್ನು ಹೆಣೆಯುತ್ತ ಬಂದಿವೆ. ವಿಶ್ವದ ಮಾರುಕಟ್ಟೆಯ ಮರು ವಿಭಜನೆಗಾಗಿ ಅಮೆರಿಕಾ ನೇತೃತ್ವದ ಸಾಮ್ರಾಜ್ಯಶಾಹಿಗಳು ಮಾಡಿಕೊಂಡ ಒಪ್ಪಂದಗಳ ಫಲವಾಗಿ ಐಎಂಎಫ್, ವಿಶ್ವ ಬ್ಯಾಂಕ್, ಏಷಿಯನ್ ಅಭಿವೃದ್ಧಿ ಬ್ಯಾಂಕ್, ಗ್ಯಾಟ್, ಡಂಕೆಲ್ ಪ್ರಸ್ತಾವನೆಗಳು, ವಿಶ್ವ

ವ್ಯಾಪಾರ ಸಂಸ್ಥೆ, ಮುಕ್ತ ಮಾರುಕಟ್ಟೆ, ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣ, ವಿದೇಶೀ ಬಂಡವಾಳ, ವಿಶೇಷ ಆರ್ಥಿಕ ವಲಯಗಳು ಅಸ್ತಿತ್ವಕ್ಕೆ ಬಂದವು. ಇವುಗಳ ಮೂಲಕ ಸಾಮ್ರಾಜ್ಯಶಾಹಿಗಳು ಭಾರತವನ್ನು ಲೂಟಿ ಮಾಡುತ್ತಿರುವ ಬಗೆಯನ್ನು ಕಾಣುತ್ತಿದ್ದೇವೆ. ಈ ಲೂಟಿಯನ್ನು ಮಾಧ್ಯಮಗಳು ಪ್ರಗತಿಶೀಲ ಬೆಳವಣಿಗೆಯೆಂದು ಬಣ್ಣಿಸುತ್ತಿವೆ. ಭಾರತದಲ್ಲಿ ಪ್ರಸ್ತುತ ೪೦೦ಕ್ಕೂ ಹೆಚ್ಚು ವಿಶೇಷ ಆರ್ಥಿಕ ವಲಯಗಳು ಸ್ಥಾಪನೆಗೊಳ್ಳುತ್ತಿವೆ. ೨೦೦೭ರ ನವೆಂಬರ್‌ನಲ್ಲಿ ೪೦೪ ವಲಯಗಳಿಗೆ ಅನುಮತಿ ನೀಡಲಾಗಿದೆ. ಇವುಗಳಲ್ಲಿ ೧೪೨ ವಲಯಗಳು ಆಗಸ್ಟ್ ೨೪, ೨೦೦೭ರಂದು ನೋಟಿಫೈ ಆಗಿವೆ. ಇವುಗಳಿಗೆ ದೇಶದ ಜನತೆ ತಮ್ಮ ಆತಂಕ ಮತ್ತು ವಿರೋಧವನ್ನು ವ್ಯಕ್ತಪಡಿಸುತ್ತಿದ್ದಾರೆ. ಇದು ಪಶ್ಚಿಮ ಬಂಗಾಳ, ಆಂಧ್ರಪ್ರದೇಶ, ಛತ್ತೀಸ್‌ಘಡ ಮತ್ತು ಒರಿಸ್ಸಾದ ನಿಯಮಗಿರಿ ಬೆಟ್ಟದಲ್ಲಿ ಬಾಕ್ಸೈಟ್ ಗಣಿಗಾರಿಕೆಯ ವಿರುದ್ಧ ಆದಿವಾಸಿಗಳ ಹೋರಾಟ, ತಮಿಳುನಾಡು, ಸಿಂಗೂರು, ನಂದಿಗ್ರಾಮದಲ್ಲಿ ಜನರ ಆಕ್ರೋಶ ಸ್ಫೋಟಗೊಂಡಿದೆ. ರೈತರ ಭೂ ಹಕ್ಕಿಗಾಗಿ, ಕೃಷಿ ಕಾರ್ಮಿಕರ ಕೂಲಿಗಾಗಿ ಅನೇಕ ಧೀರೋದಾತ್ತ ಹೋರಾಟಗಳನ್ನು ಮಾಡಿದಂತಹ ಎಡಪಕ್ಷಗಳು ಪಶ್ಚಿಮಬಂಗಾಳದಲ್ಲಿ ರೈತರ ಆಕ್ರೋಶಕ್ಕೆ ತುತ್ತಾದದ್ದು ಒಂದು ಗಂಭೀರ ಬೆಳವಣಿಗೆಯಾಗಿದೆ. ಜಾಗತೀಕರಣ ಮತ್ತು ಉದಾರೀಕರಣಕ್ಕೆ ಬಾಗಿಲು ತೆರೆದ ಮೇಲಂತೂ ರೈತರಿಂದ ಜಮೀನು ಕಿತ್ತುಕೊಳ್ಳುವುದು ಹೆಚ್ಚಿದೆ. ಅಭಿವೃದ್ಧಿಯ ಹೆಸರಿನಲ್ಲಿ ಕಾರ್ಪೊರೇಟ್ ಮತ್ತು ರಿಯಲ್ ಎಸ್ಟೇಟ್ ಲಾಬಿಗಳು ಮೆರೆಯುತ್ತಿವೆ. ನಿಡ್ಡೋಡಿ ಉಷ್ಣ ವಿದ್ಯುತ್ ಸ್ಥಾವರವನ್ನು ದಕ್ಷಿಣ ಕನ್ನಡದ ರೈತರು, ಪೋಸ್ಕೋ ಉಕ್ಕು ಉದ್ಯಮವನ್ನು ಗದಗದ ರೈತರು ವಿರೋಧಿಸುತ್ತಿದ್ದಾರೆ. ಇವೆಲ್ಲವೂ ಶ್ರೀಮಂತ ವರ್ಗದ ಭೂಮಿಯ ದಾಹ ಮತ್ತು ಭೂಮಿ ಕಳೆದುಕೊಳ್ಳುತ್ತಿರುವ ಬಡ ರೈತರ ಕೋಪ ಹೊಸ ವರ್ಗ ಸಂಘರ್ಷಕ್ಕೆ ನಾಂದಿಯಾಗಿದೆ.




ಬೇಕಾದಷ್ಟು ಭೂಮಿ, ಸುಂಕ ಮತ್ತು ತೆರಿಗೆಗಳ ವಿನಾಯ್ತಿ, ಕಾರ್ಮಿಕ ಕಾನೂನುಗಳ ಅನ್ವಯದಿಂದ ವಿನಾಯ್ತಿ – ಹೀಗೆ ಎಲ್ಲೆಡೆಯಿಂದ ಶ್ರೀಮಂತರಿಗೆ ಸವಲತ್ತುಗಳನ್ನೊದಗಿಸಿಕೊಡುವುದು ದೇಶದ ಸಂವಿಧಾನಕ್ಕೆಸಗಿದ ಅಪಚಾರ. ಎಲ್ಲ ರೀತಿಯ ಅಸಮಾನತೆಯನ್ನು ಹೆಚ್ಚಿಸುವ ವಿಶೇಷ ಆರ್ಥಿಕ ವಲಯದ ಕಾಯ್ದೆಯನ್ನು ಕೂಲಂಕಷವಾಗಿ ಪುನರ್ವಿಮರ್ಶಿಸಬೇಕಾಗಿದೆ. ವಿಶೇಷ ಆರ್ಥಿಕ ವಲಯಗಳನ್ನು ಪ್ರಾದೇಶಿಕ ಅಸಮಾನತೆಯನ್ನು ಹೋಗಲಾಡಿಸುವ ಸಲುವಾಗಿ ಸ್ಥಾಪಿಸಬೇಕೇ ಹೊರತು ಅಸಮಾನತೆಯನ್ನು ಸೃಷ್ಟಿಸುವುದಕ್ಕಲ್ಲ.

ವಿಶೇಷ ಆರ್ಥಿಕ ವಲಯಗಳಿಗೆ ಉಚಿತವಾಗಿ ನೀರು, ವಿದ್ಯುತ್, ಸಾರಿಗೆ, ಮೂಲಸೌಕರ್ಯಗಳನ್ನು ನೀಡುವುದರ ಜೊತೆಗೆ ೧೧ ವರ್ಷಗಳ ತನಕ ಕಾನೂನಿನ ಪ್ರಕಾರ ವಿಧಿಸಬೇಕಾಗಿರುವ ಎಲ್ಲ ತೆರಿಗೆಗಳನ್ನು ಮನ್ನಾ ಮಾಡಲಾಗಿದೆ.



ಇದರಿಂದ ಸರಕಾರದ ಬೊಕ್ಕಸಕ್ಕೆ ೧ ಲಕ್ಷ ೪೩ ಸಾವಿರ ಕೋಟಿ ನಷ್ಟ ಆಗುತ್ತಿದೆ. ಈ ಆರ್ಥಿಕ ಭಾರವನ್ನು ಭಾರತದ ರೈತ, ಕಾರ್ಮಿಕ, ನೌಕರ ಹಾಗೂ ಸಾಮಾನ್ಯ ಗ್ರಾಹಕರ ಮೇಲೆ ನಿರ್ದಾಕ್ಷಿಣ್ಯವಾಗಿ ಹೇರಲು ಭಾರತದ ಆಳುವ ವರ್ಗಗಳು ಮುಂದಾಗಿವೆ.

ವಿಶೇಷ ಆರ್ಥಿಕ ವಲಯವನ್ನು ರಚಿಸುವ ಹೆಸರಿನಲ್ಲಿ ಲಕ್ಷಾಂತರ ಎಕರೆ ಕೃಷಿ ಭೂಮಿಯನ್ನು ವಶಪಡಿಸಿಕೊಂಡಿರುವುದು, ಅದು ರಿಯಲ್ ಎಸ್ಟೇಟ್ ದಂಧೆಯಾಗುತ್ತಿರುವುದು, ಜೀವನಾಧಾರಕ್ಕೆ ಕೃಷಿ ಬಿಟ್ಟರೆ ಬೇರೆ ಕಸಬು ಗೊತ್ತಿಲ್ಲದ ಕೃಷಿಕರನ್ನು ಹಾಗೂ ಕೂಲಿ ಕಾರ್ಮಿಕರ ಬದುಕನ್ನು ಬೀದಿಗೆ ತಂದಿರುವುದು, ಕೃಷಿಯನ್ನೇ ಅವಲಂಬಿಸಿಕೊಂಡಿರುವ ಅನೇಕ ಉಪಕಸಬುಗಳನ್ನು ಮಾಡುತ್ತಿರುವ ಲಕ್ಷಾಂತರ ಜನ ಬಡವರು ತಮ್ಮ ಬದುಕನ್ನು ಕಳೆದುಕೊಂಡಿರುವುದು, – ಮುಂತಾಗಿ ಗ್ರಾಮೀಣ ಜನರ ಬದುಕಿನ ನಾಡಿಗಳನ್ನು ಕತ್ತರಿಸುವ ಹುನ್ನಾರ ಎಲ್ಲವೂ ಇದರಲ್ಲಿವೆ. ಅವರಿಗೆ ಪರಿಹಾರ ನೀಡದೆ ಒಕ್ಕಲೆಬ್ಬಿಸಲಾಗುತ್ತಿದೆ. ಇವರು ಜೀವನ ನಡೆಸಲು ಸಾಧ್ಯವಾಗದೆ ದಿನನಿತ್ಯ ಯಾತನೆಯನ್ನು ಅನುಭವಿಸುತ್ತಾ ಜೀವಂತ ಶವಗಳಾಗುತ್ತಿದ್ದಾರೆ.

ಜನಸಾಮಾನ್ಯರು ತಮ್ಮದಲ್ಲದ ಬದುಕನ್ನು ತಮ್ಮದು ಎಂದು ಒಪ್ಪಿಕೊಳ್ಳಬೇಕಾದ ವಾತಾವರಣವನ್ನು ಬಂಡವಾಳಶಾಹಿಗಳು ಸೃಷ್ಟಿಸುತ್ತಿದ್ದಾರೆ. ಅಭಿವೃದ್ಧಿಯ ಹೆಸರಿನಲ್ಲಿ ಲಕ್ಷಾಂತರ ಜನ ರೈತರ, ಸಣ್ಣ ರೈತರ, ದಲಿತರ, ಕೂಲಿಕಾರ್ಮಿಕರ ಬದುಕನ್ನು ಬೀದಿಗೆ ತಳ್ಳುತ್ತಿದ್ದಾರೆ. ೧೯೫೦ರಿಂದ ವಿವಿಧ ಯೋಜನೆಗಳು, ಕೈಗಾರಿಕೆಯ ಉದ್ದೇಶದಿಂದ ಭೂಮಿಗಾಗಿ ಹಳ್ಳಿಗಳನ್ನು ವಶಪಡಿಸಿಕೊಂಡ ಸರ್ಕಾರ, ಖಾಸಗಿ ಕಂಪನಿಗಳಿಂದ ಭೂಮಿ ಕಳೆದುಕೊಂಡ ಸಂತ್ರಸ್ತರಿಗೆ ಇಲ್ಲಿಯವರೆಗೆ ಶೇ. ೩೫ರಿಂದ ಶೇ. ೭೫ರಷ್ಟು ಪುನರ್ವಸತಿ ಕಲ್ಪಿಸಲು ಸಾಧ್ಯವಾಗಿಲ್ಲ. ಇವರೆಲ್ಲ ಮನೆ ಮಠ ಕಳೆದುಕೊಂಡು ಬೀದಿಪಾಲಾಗಿದ್ದಾರೆ. ಇದರಲ್ಲಿ ಆದಿವಾಸಿಗಳು ಮತ್ತು ದಲಿತರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಸರ್ದಾರ್ ಸರೋವರ ಅಣೆಕಟ್ಟಿನಿಂದಾಗಿ ಸ್ಥಳಾಂತರಗೊಂಡ ರೈತರ, ಆದಿವಾಸಿ ಜನರ ಮತ್ತು ಕೃಷಿ ಕಾರ್ಮಿಕರ ಸಮಸ್ಯೆ ಇನ್ನೂ ಬಗೆಹರಿದಿಲ್ಲ. ಹೀಗಾಗಿ ದೇಶದಲ್ಲಿ ವಿಶೇಷ ಆರ್ಥಿಕ ವಲಯಗಳಿಗಾಗಿಯೇ ಸುಮಾರು ೨.೫೦ ಲಕ್ಷ ಎಕರೆ ಜಮೀನು ಕಳೆದುಕೊಳ್ಳುವ ರೈತರ ಪಾಡೇನು ಎಂಬುದು ಮಹತ್ತರ ಪ್ರಶ್ನೆಯಾಗಿಯೇ ಉಳಿಯುತ್ತದೆ. ಕರ್ನಾಟಕ ರಾಜ್ಯದಲ್ಲಿ ಐಟಿ ಕ್ಷೇತ್ರದಿಂದಾಗಿ ಇಲ್ಲಿಯವರೆಗೆ ದೊರೆತಿರುವ ಕೆಲಸಗಳೆಂದರೆ ೧೫ ಲಕ್ಷ. ಇದೇ ಸಂದರ್ಭದಲ್ಲಿ ೩ ಕೋಟಿಯಷ್ಟು ಸಂಘಟಿತ ಕಾರ್ಮಿಕರು ಅತಂತ್ರರಾಗಿದ್ದಾರೆ. ಇವು ವಸಾಹತೀಕರಣದ ಒಂದು ರೂಪವಷ್ಟೆ. ಆದರೆ ಭಾರತದ ಮಾಧ್ಯಮಗಳು ಇವುಗಳ ಬಗ್ಗೆ ವಸ್ತುನಿಷ್ಠವಾಗಿ ವರದಿ ಮಾಡುವ ಬದಲು ಸುದ್ದಿಯ ಹೆಸರಿನಲ್ಲಿ ಸೆಕ್ಸ್, ಕ್ರೈಮ್ ಮತ್ತು ಜ್ಯೋತಿಷ್ಯದಂತಹ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವ ಮೂಲಕ ಜನರ ಆಲೋಚನೆಗಳನ್ನು ಬೇರೆ ಕಡೆ ಸೆಳೆಯುತ್ತಿವೆ.

ಪ್ರಾಕೃತಿಕ ಮತ್ತು ರಾಷ್ಟ್ರಸಂಪತ್ತನ್ನು ಆಳುವ ಸರ್ಕಾರಗಳು ಕಾರ್ಪೊರೇಟ್ ಕಂಪನಿಗಳಿಗೆ ಪರಭಾರೆ ಮಾಡಲು ಮುಂದಾಗಿವೆ. ಆ ಮುಖಾಂತರ ನಮ್ಮ ಪ್ರಜಾತಂತ್ರ ಕೂಡ ಕಾರ್ಪೊರೇಟ್ ಪ್ರಜಾತಂತ್ರವಾಗುತ್ತಿದೆ. ಇವೆಲ್ಲವುಗಳ ವಿರುದ್ಧ ಹೊಸ ವಿವಾದದ ಅಲೆಯನ್ನು, ಹೊಸ ಚಳುವಳಿಯನ್ನು ಹುಟ್ಟುಹಾಕಿರುವುದು ಜಾಗತೀಕರಣದ ವಿರುದ್ಧ ಬೆಳೆಯುತ್ತಿರುವ ಪ್ರತಿಭಟನೆಯ ಒಂದು ಸ್ವರೂಪವಷ್ಟೆ ಎಂಬುದು ನಿರ್ವಿವಾದ.

**ಜಿ. ಎಂ. ನರಸಿಂಹ ಗುಂಜಹಳ್ಳಿ**
ಸಂಶೋಧನಾ ವಿದ್ಯಾರ್ಥಿ
ಸಮೂಹ ಸಂವಹನ ಮತ್ತು ಪತ್ರಿಕೋದ್ಯಮ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ – ೫೭೪ ೧೯೯




# ಹಾಂಕಾಂಗ್‌ನಲ್ಲಿ ವಿಫಲಗೊಂಡ ವಿದ್ಯಾರ್ಥಿ ಚಳವಳಿ



**ಸೀಯಾರ್ಕೆ**

ಪ್ರತಿಯೊಂದು ದೇಶಕ್ಕೂ ತನ್ನ ಸ್ವಾತಂತ್ರ್ಯ, ಸಾರ್ವಭೌಮತ್ವವನ್ನು ಎತ್ತಿ ಹಿಡಿದು ಕಾಪಾಡಿಕೊಳ್ಳಲು ಹಕ್ಕು ಇದೆ. ಅದೇ ಸಮಯದಲ್ಲಿ ತನ್ನ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳಲು ಸ್ವಾತಂತ್ರ್ಯವಿದೆ. ಆದರೆ ಪ್ರಪಂಚದ ಕೆಲವು ರಾಷ್ಟ್ರಗಳು, ಮುಖ್ಯವಾಗಿ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಅಂಥ ಸ್ವಾತಂತ್ರ್ಯ ತಮಗೆ ಮಾತ್ರ ಇದೆ ಎನ್ನುವ ರೀತಿಯಲ್ಲಿ ವರ್ತಿಸುತ್ತವೆ. ತಮ್ಮ ಗಡಿಯಾಚೆ ದೂರದ ಪ್ರದೇಶಗಳಲ್ಲಿ ಸಂಭವಿಸುವ ಘಟನೆಗಳನ್ನು ತನ್ನ ಹಿತಾಸಕ್ತಿಗೆ ಬಾಧಕ ಎಂದು ಪರಿಗಣಿಸಿ ಈ ದೇಶಗಳು ಅವುಗಳ ಆಂತರಿಕ ವ್ಯವಹಾರಗಳಲ್ಲಿ ಹಸ್ತಕ್ಷೇಪ ಮಾಡಿರುವ ಉದಾಹರಣೆಗಳು ಬೇಕಾದಷ್ಟಿವೆ. ಇತ್ತೀಚಿನ ಅಂಥ ಉದಾಹರಣೆಗಳೆಂದರೆ ಆಫ್ಘಾನಿಸ್ತಾನ ಮತ್ತು ಇರಾಕ್. ಎರಡೂ ಕಡೆಯಲ್ಲಿ ಅಮೆರಿಕ ಮತ್ತು ಬ್ರಿಟನ್‌ಗಳು ನೇರವಾಗಿ ದುರಾಕ್ರಮಣ ನಡೆಸಿವೆ. ಅದರ ದುಷ್ಪರಿಣಾಮಗಳನ್ನು ದಶಕಕ್ಕೂ ಹೆಚ್ಚು ಕಾಲದಿಂದ ಈ ದೇಶಗಳು ಅನುಭವಿಸುತ್ತಿವೆ. ಎರಡನೇ ಮಹಾಯುದ್ಧದ ನಂತರ ಶೀತಯುದ್ಧದ ಕಾಲದಲ್ಲಿ ನಡೆದ ವಿದ್ಯಮಾನಗಳನ್ನು ಇಲ್ಲಿ ಪಟ್ಟಿ ಮಾಡುವುದು ಅನಗತ್ಯ. ಆದರೂ ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ಸಂಭವಿಸಿದ ಕೆಲವು ಘಟನೆಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಯುಗೋಸ್ಲಾವಿಯದ ಛಿದ್ರತೆ, ರಶಿಯನ್ ಫೆಡರೇಶನ್ನಿನ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದ ಸ್ವತಂತ್ರ ರಾಷ್ಟ್ರಗಳ ಕಾಮನ್‌ವೆಲ್ತ್‌ನ ಕೆಲ ರಾಷ್ಟಗಳಲ್ಲಿ 'ಆರೆಂಜ್ ರೆವೊಲ್ಯೂಷನ್' ಎಂದು ಹೆಸರಾದ ವಿದ್ಯಮಾನಗಳು ಅದಕ್ಕೆ ನಿದರ್ಶನ.

ಸದ್ಯದಲ್ಲಿ ಗಮನ ಸೆಳೆದಿರುವುದು ಉಕ್ರೇನಿನ ಘಟನೆಗಳು. ಇದರಲ್ಲಿ ರಷ್ಯಾ ಕೈಗೊಂಡಿರುವ ಕ್ರಮಗಳು, ಅವೂ ಕೂಡ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವ ಹೆಸರಿನಲ್ಲೇ ತೆಗೆದುಕೊಂಡಿರುವುವು, ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ಕಣ್ಣು ಕೆಂಪಗಾಗಿಸಿವೆ. ಅವು ರಷ್ಯಾದ ಮೇಲೆ ಕಿಡಿಕಾರುತ್ತಿವೆ. ಅದು ಬೇರೆಯೇ ವಿಷಯ.

ಇತ್ತೀಚಿನ ದಿನಗಳಲ್ಲಿ ಚೀಣಾದ ಭೂಭಾಗವಾದ ಹಾಂಕಾಂಗ್‌ನಲ್ಲಿ ವಿದ್ಯಮಾನಗಳು ಅಂಥ 'ಬಣ್ಣದ ಕ್ರಾಂತಿ'ಯನ್ನು ನೆನಪಿಗೆ ತರುತ್ತವೆ. ಪ್ರಜಾಪ್ರಭುತ್ವಕ್ಕಾಗಿ ವಿದ್ಯಾರ್ಥಿಗಳು ನಡೆಸಿದ ಚಳವಳಿ ಕೆಲ ದಿನಗಳು ವಿಶ್ವದ ಗಮನ ಸೆಳೆದು ತಣ್ಣಗಾಯಿತು. ಪಶ್ಚಿಮ ರಾಷ್ಟ್ರಗಳು ಈ ಚಳವಳಿಗೆ ನೀಡಿದ ಪರೋಕ್ಷ ಬೆಂಬಲ ಹಾಗೂ ನಡೆಸಿದ ಅಬ್ಬರದ ಪ್ರಚಾರ ಗಮನ ಸೆಳೆಯುವಂಥದ್ದು. ಹಾಂಕಾಂಗ್ ಚೀನಾದ ಕೈತಪ್ಪಿದಂತೆಯೇ ಎಂಬ ಭಾವನೆಯನ್ನು ಅವು ಉಂಟುಮಾಡಿದ್ದುವು. 'ಕೇಂದ್ರದ ಆಕ್ರಮಣ ಚಳವಳಿ' ಹೆಸರಿನಲ್ಲಿ ಹಾಂಕಾಂಗ್‌ನ ವಿದ್ಯಾರ್ಥಿ ಸಮೂಹ ನಡೆಸಿದ ಆಂದೋಳನವನ್ನು ಇಪ್ಪತ್ತೈದು ವರ್ಷಗಳ ಹಿಂದೆ ಚೀನಾದ ರಾಜಧಾನಿ ಬೀಜಿಂಗ್‌ನ ತಿಯಾನಾನ್ಮೆನ್ ಚೌಕದಲ್ಲಿ ನಡೆದಿದ್ದ ಪ್ರತಿಭಟನಾ ಚಳವಳಿಗೆ ಹೋಲಿಸಲಾಗಿತ್ತು. ಆಗ ಚೀಣಾ ಬಲಪ್ರಯೋಗದಿಂದ ಅದನ್ನು ಹತ್ತಿಕ್ಕಿತು. ಅದು ಜಗತ್ತಿನಲ್ಲಿ ಸಾಕಷ್ಟು ಗುಲ್ಲೆಬ್ಬಿಸಿತ್ತು. ಪಶ್ಚಿಮ ರಾಷ್ಟ್ರಗಳು ತಮಗೆ ಪ್ರಿಯವಾದ ಮಾನವ ಹಕ್ಕುಗಳ ಅತಿಕ್ರಮಣದ ಆರೋಪ ಹೊರಿಸಿ ಚೀಣಾವನ್ನು ಖಂಡಿಸಿದ್ದುವು. ಆದರೆ ಹಾಂಕಾಂಗ್ ವಿದ್ಯಮಾನಗಳು ಪಾಶ್ಚಾತ್ಯ ರಾಷ್ಟ್ರಗಳು ನಿರೀಕ್ಷಿಸಿದ್ದ ಹಾಗೆ ಬೆಳೆಯದೆ ತನ್ನಷ್ಟಕ್ಕೇ ದುರ್ಬಲಗೊಂಡಿತು. ಇಷ್ಟಕ್ಕೂ ಈ ಚಳವಳಿ ಪ್ರಾರಂಭವಾದ್ದು ಹಾಂಕಾಂಗ್ ಆಡಳಿತದಲ್ಲಿ ಪ್ರಜಾಪ್ರಭುತ್ವ ಚುನಾವಣೆಗಳಿಗಾಗಿ. ಹಾಂಕಾಂಗ್‌ನ ಆಡಳಿತ ಈಗ, ಅಂದರೆ ಚೀಣಾದ ವಶಕ್ಕೆ ಬಂದಮೇಲೆ ಬೀಜಿಂಗ್‌ನಿಂದ ನೇಮಕಗೊಂಡಿರುವ ಅಧಿಕಾರಿಯ ಕೈಯಲ್ಲಿದೆ. ೨೦೧೭ರಲ್ಲಿ ಚುನಾವಣೆಗಳ ಮೂಲಕವಾಗಿ ಹಾಂಕಾಂಗ್ ಆಡಳಿತಗಾರನನ್ನು ಆಯ್ಕೆ ಮಾಡಲಾಗುವುದೆಂದು ಈ ಮೊದಲೇ ಚೀಣಾ ಘೋಷಿಸಿದೆ. ಹಾಗಾಗಿ ಚಳವಳಿ ಹೊರಗಿನಿಂದ ಪ್ರೇರಿತವಾದದ್ದಲ್ಲದೆ ಸ್ವಯಂಪ್ರೇರಣೆಯಿಂದ ನಡೆದದ್ದಲ್ಲ ಎನ್ನುವುದು ಸ್ಪಷ್ಟ.

ಹಾಂಕಾಂಗ್ ಆಡಳಿತ ಪ್ರದೇಶವಾಗಿ ಚೀಣಾದ ವಶಕ್ಕೆ ಬಂದದ್ದು ೧೯೯೭ರಲ್ಲಿ.

ಹಾಂಕಾಂಗ್ ಆಯಕಟ್ಟಿನ ಪ್ರದೇಶದಲ್ಲಿರುವ ದ್ವೀಪ. ಚೀಣಾಗೆ ಸಮೀಪದಲ್ಲಿರುವುದರಿಂದ ಪಶ್ಚಿಮ ರಾಷ್ಟ್ರಗಳಿಗೆ ಅದರಲ್ಲಿ ಎಲ್ಲಿಲ್ಲದ ಆಸಕ್ತಿ. ಚೀಣಾವನ್ನು ಹದ್ದುಬಸ್ತಿನಲ್ಲಿರಿಸಿಕೊಳ್ಳಲು ಈ ದ್ವೀಪ ಪ್ರಶಸ್ತವಾದ ಸ್ಥಳ. ಅದಕ್ಕೇ ಈ ದೇಶಗಳ ಆಸಕ್ತಿ. ವಿದ್ಯಾರ್ಥಿಗಳ ಕೆಲ ನಾಯಕರು ಅಮೆರಿಕಾಗೆ ಆಂದೋಳನ ಪ್ರಾರಂಭಿಸುವುದಕ್ಕೆ ಮುನ್ನ ಹೋಗಿದ್ದರು. ಅವರು ಕೆಲವು ಅಮೆರಿಕದ ನಾಯಕರನ್ನು ಭೇಟ್ಟಿಯಾಗಿದ್ದರು. ಅಮೆರಿಕದ ಕೆಲ ಸಂಸ್ಥೆಗಳಿಂದ ಅವರು ಸಾಕಷ್ಟು ಹಣ ಪಡೆದುಕೊಂಡದ್ದೂ ಬಹಿರಂಗವಾಗಿದೆ. ವಿದ್ಯಾರ್ಥಿಗಳು ನಡೆಸಿದ ಆಂದೋಳನ ವಿಫಲಗೊಂಡಿದೆಯಾದರೂ ಬೀಜಿಂಗ್ ನಾಯಕರು ಸುಧಾರಣೆಗಳನ್ನು ತ್ವರಿತಗೊಳಿಸಬೇಕಾಗಿದೆ.



ಬ್ರಿಟನ್ನಿನ ವಶದಲ್ಲಿದ್ದ ಈ ದ್ವೀಪವನ್ನು ಚೀಣಾಗೆ ವಹಿಸಿಕೊಟ್ಟದ್ದು ದೀರ್ಘವಾದ ಸಂಧಾನಗಳ ನಂತರ. ಬ್ರಿಟನ್ ಈ ದ್ವೀಪವನ್ನು ತನ್ನ ನೂರೈವತ್ತಕ್ಕೂ ಹೆಚ್ಚು ವರ್ಷಗಳ ಆಡಳಿತದಲ್ಲಿ ಪ್ರಮುಖ ಹಣಕಾಸಿನ ಕೇಂದ್ರವಾಗಿ, ಕೈಗಾರಿಕಾ ಪ್ರದೇಶವಾಗಿ ಅಭಿವೃದ್ಧಿ ಪಡಿಸಿತ್ತು. ಅದು ಬ್ರಿಟನ್ನಿನ ವಸಾಹತು ಆದದ್ದು ಕೂಡ ಒಂದು ರೋಚಕ ಕತೆ. ಚೀಣಾದೊಂದಿಗೆ ಜರುಗಿದ ಅಫೀಮು ಯುದ್ಧ ಎಂದೇ ಹೆಸರಾಗಿರುವ ಯುದ್ಧ (೧೮೩೯–೧೮೪೨)ದ ನಂತರ. ಚೀಣಾ ಆಗ ಸಾಮ್ರಾಟರ ಆಳ್ವಿಕೆಯಲ್ಲಿತ್ತು. ಬ್ರಿಟನ್ ಚೀಣಾಗೆ ಸಾಕಷ್ಟು ಅಫೀಮು ರಫ್ತು ಮಾಡಿ ಜನರನ್ನು ವ್ಯಸನಿಗಳನ್ನಾಗಿಸಿತ್ತು. ಚೀಣೀ ಸಾಮ್ರಾಟರು ಅಫೀಮು ನಿಷೇಧಿಸಿ, ಬ್ರಿಟನ್ನಿನಿಂದ ಬಂದಿದ್ದ ಸರಕನ್ನು ಸಮುದ್ರದ ಪಾಲು ಮಾಡಿದರು. ಇದರಿಂದ ರೊಚ್ಚಿಗೆದ್ದ ಬ್ರಿಟಿಷರು ಚೀಣಾದ ಮೇಲೆ ಆಕ್ರಮಣ ನಡೆಸಿದರು. ಮೂರು ವರ್ಷಗಳು ಜರುಗಿದ ಯುದ್ಧದಲ್ಲಿ ಚೀಣಾ ಸೋಲನ್ನು ಅನುಭವಿಸಿತು. ಹಾಂಕಾಂಗ್ ದ್ವೀಪ ಬ್ರಿಟನ್ನಿನ ವಶಕ್ಕೆ ಬಂದದ್ದು ಆಗಲೆ, ೧೮೯೮ರಲ್ಲಿ ಚೀಣಾದ ಅರಸರೊಂದಿಗೆ ಒಪ್ಪಂದ ಮಾಡಿಕೊಂಡ ಬ್ರಿಟನ್ ಅಫೀಮು ರಫ್ತನ್ನು ಮುಂದುವರಿಸುವುದರ ಜೊತೆಗೆ ಯುದ್ಧ ಪರಿಹಾರಾರ್ಥವಾಗಿ ಹಾಂಕಾಂಗ್ ದ್ವೀಪವನ್ನು ನೂರು ವರ್ಷಗಳ ಕಾಲ ವಸಾಹತು ಆಗಿ ಪಡೆದುಕೊಂಡಿತು, ೧೦,೦೦೦ ಕಿಲೋಮೀಟರುಗಳಷ್ಟು ದೂರ ಇರುವ ಲಂಡನ್ನಿನಿಂದ ಈ ದ್ವೀಪದ ಆಡಳಿತ ನಡೆಸುತ್ತಿದ್ದರು ಬ್ರಿಟಿಷ್ ವಸಾಹತುಶಾಹಿಗಳು. ಆ ದಿನಗಳಲ್ಲಿ ಬ್ರಿಟನ್ ಅತ್ಯಂತ ಪ್ರಬಲ ಸಾಮ್ರಾಜ್ಯಶಾಹಿ ರಾಷ್ಟ್ರವಾಗಿತ್ತು. ೧೫೫ ವರ್ಷಗಳು ಬ್ರಿಟನ್ನಿನ ವಶದಲ್ಲಿದ್ದ ಹಾಂಕಾಂಗ್ ಯಾವತ್ತೂ ಪ್ರಜಾಪ್ರಭುತ್ವದ ಆಡಳಿತ ಕಂಡಿರಲಿಲ್ಲ. ಚೀಣಾದ ವಶಕ್ಕೆ ಬಂದಮೇಲೆ ಪರಿಸ್ಥಿತಿ ಭಿನ್ನವಾಗಿದೆ. ಹಲವು ಸುಧಾರಣೆಗಳು ಜಾರಿಗೆ ಬಂದಿವೆ. ೧೯೯೭ರಲ್ಲಿ ಚೀಣಾ ಆಡಳಿತ ವಹಿಸಿಕೊಂಡಾಗ ಕಮ್ಯುನಿಸ್ಟ್ ರಾಷ್ಟ್ರ. ಹಾಗಾಗಿ ಹಾಂಕಾಂಗ್‌ನ ವಿಶಿಷ್ಟತೆಯನ್ನು ಹಾಗೆಯೇ ಉಳಿಸಿಕೊಳ್ಳಲು ಅದು ನಿರ್ಧರಿಸಿತು. ಎರಡು ವ್ಯವಸ್ಥೆಗಳು ಒಂದು ರಾಷ್ಟ್ರ ಎಂಬ ಧೋರಣೆ ತಳೆಯಿತು. ಅದು ಹಾಗೇ ಮುಂದುವರಿದಿದೆ.

ಹಾಂಕಾಂಗ್ ಆಯಕಟ್ಟಿನ ಪ್ರದೇಶದಲ್ಲಿರುವ ದ್ವೀಪ. ಚೀಣಾಗೆ ಸಮೀಪದಲ್ಲಿರುವುದರಿಂದ ಪಶ್ಚಿಮ ರಾಷ್ಟ್ರಗಳಿಗೆ ಅದರಲ್ಲಿ ಎಲ್ಲಿಲ್ಲದ ಆಸಕ್ತಿ. ಚೀಣಾವನ್ನು ಹದ್ದುಬಸ್ತಿನಲ್ಲಿರಿಸಿಕೊಳ್ಳಲು ಈ ದ್ವೀಪ ಪ್ರಶಸ್ತವಾದ ಸ್ಥಳ. ಅದಕ್ಕೆ ಈ ದೇಶಗಳ ಆಸಕ್ತಿ. ವಿದ್ಯಾರ್ಥಿಗಳ ಕೆಲ ನಾಯಕರು ಅಮೇರಿಕಾಗೆ ಆಂದೋಳನ ಪ್ರಾರಂಭಿಸುವುದಕ್ಕೆ ಮುನ್ನ ಹೋಗಿದ್ದರು. ಅವರು ಕೆಲವು ಅಮೆರಿಕದ ನಾಯಕರನ್ನು ಭೆಟ್ಟಿಯಾಗಿದ್ದರು. ಅಮೆರಿಕದ ಕೆಲ ಸಂಸ್ಥೆಗಳಿಂದ ಅವರು ಸಾಕಷ್ಟು ಹಣ ಪಡೆದುಕೊಂಡದ್ದೂ ಬಹಿರಂಗವಾಗಿದೆ. ವಿದ್ಯಾರ್ಥಿಗಳು ನಡೆಸಿದ ಆಂದೋಳನ ವಿಫಲಗೊಂಡಿದೆಯಾದರೂ ಬೀಜಿಂಗ್ ನಾಯಕರು ಸುಧಾರಣೆಗಳನ್ನು ತ್ವರಿತಗೊಳಿಸಬೇಕಾಗಿದೆ.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೭ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫




# ಮೂರಂಕದ ಸ್ವತಂತ್ರ ಕವನ

ಅಂಕ – ೧

**ಹೂ**ಡ ಬನ್ನಿ, ಹಾಡ ಬನ್ನಿ
ಓ ಭಾರತ ಭಾಗ್ಯ ವಿಧಾತರೆ
ಕೆಂಪುಕೋಟೆಯ ವಾಣಿ ಇದು
ವಿಶ್ವ ವಣಿಜ ಬಾಂಧವರೆ
ಹೂಡ ಬನ್ನಿ, ಹಾಡ ಬನ್ನಿ
'ಮೇಡಿನ್ನಿಂಡಿಯಾ' ಹೇಳ ಬನ್ನಿ
'ಡಿಜಿಟಲ್ ಇಂಡಿಯಾ' ಮಾಡ ಬನ್ನಿ

ಕಾಮ್ ತುಮಾರಾ ನಾಮ್ ಹಮಾರಾ
ಬಚ್ಚಾ ತುಮಾರಾ ಲೇಬಲ್ ಹಮಾರಾ
ಹೂಡ ಬನ್ನಿ, ಹಾಡ ಬನ್ನಿ
ಭಾವ ನಿಮ್ಮದು, ರಾಗ ನಮ್ಮದು
'ಮೇಡಿನ್ನಿಂಡಿಯಾ' ಹೇಳ ಬನ್ನಿ
'ಡಿಜಿಟಲ್ ಇಂಡಿಯಾ' ಮಾಡ ಬನ್ನಿ

ಚನ್ನಮ್ಮನಿಲ್ಲ, ಟಿಪ್ಪೂ ಇಲ್ಲ
ಭಗತ್ ಇಲ್ಲ, ಗಾಂಧಿ ಇಲ್ಲ
ಅಸಹಕಾರ ಮೊದಲೇ ಇಲ್ಲ
ಮನೆಯಲ್ಲಿ ಮನೆಯೊಡೆಯನೇ ಇಲ್ಲ
ಕ್ವಿಟ್ ಇಂಡಿಯಾ ಮೂರ್ಖರ ಮಂತ್ರ
'ಕೋಟ್' ಇಂಡಿಯಾ ಜಾಣರ ತಂತ್ರ
ಹೂಡ ಬನ್ನಿ, ಹಾಡ ಬನ್ನಿ
'ಮೇಡಿನ್ನಿಂಡಿಯಾ' ಹೇಳ ಬನ್ನಿ
'ಡಿಜಿಟಲ್ ಇಂಡಿಯಾ' ಮಾಡ ಬನ್ನಿ



'ಖಂಡವಿದೆ, ಮಾಂಸವಿದೆ
ಗುಂಡಿಗೆಯ ಬಿಸಿರಕ್ತವಿದೆ'
ಭೂಮಿ ಇದೆ ಭೂಗರ್ಭವಿದೆ
ಚಿಲ್ಲರೆ ಕಾಸಿಗೆ ಬೆವರೂ ಇದೆ
ಲಾಠಿ ಇದೆ, ಚಾಟಿ ಇದೆ
ಸದನದಲ್ಲಿ ಬಲವಿದೆ

ಸಾರೆ ಜಹಾಂಸೆ ಅಚ್ಛಾ
ಹಿಂದೂ ಸತ್ತಾ ಹಮಾರಾ
ಹೂಡ ಬನ್ನಿ, ಹಾಡ ಬನ್ನಿ
'ಮೇಡಿನ್ನಿಂಡಿಯಾ' ಹೇಳ ಬನ್ನಿ
'ಡಿಜಿಟಲ್ ಇಂಡಿಯಾ' ಮಾಡ ಬನ್ನಿ

ಅಂಕ–೨

ಭಾರತದ ಮೊತ್ತಮೊದಲ
ಮಂಗಳ ಯಾನ ಯಶಸ್ವಿ,
ವಿಶ್ವ ವಣಿಜರ ಭಾರತ ಯಾನ
ಪ್ರಗತಿಯತ್ತ,
ದೇಶದ ಕೋಟ್ಯಧಿಪತಿಗಳ
ಸಂಖ್ಯೆಯಲ್ಲಿ ಹೆಚ್ಚಳ.
ವಿಶೇಷ ಸೂಚನೆ : ಬಡವರ ಸಂಖ್ಯೆ ಹೆಚ್ಚಿದೆ
ಎಂದರೆ ಅದು ದೇಶಪ್ರೇಮವಲ್ಲ.

ಅಂಕ–೩

ಕಣ್ಣ ಸುತ್ತಲಿನ ಕಪ್ಪಿನಲ್ಲಿ
ಕತೆ ಹುಡುಕಬೇಡ ಗೆಳೆಯ
ಅಲ್ಲಿರುವುದು ಅಪೌಷ್ಟಿಕತೆ

**ಡಾ॥ ಸಿದ್ದನಗೌಡ ಪಾಟೀಲ**
ಘಾಟೆ ಭವನ, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩





ಟಿಟ್ಲೆಸ್ ಪರ್ವತಕ್ಕೆ ಕೇಬಲ್ ಕಾರ್ ಮೂಲಕ ಹೋಗುವ ಸೌಕರ್ಯ

# ಬಿರುಬೇಸಿಗೆಯಲ್ಲಿ ಸ್ವಿಟ್ಜರ್ಲೆಂಡ್

ಬಿರುಬೇಸಿಗೆಯಲ್ಲಿ ನಾವು ಯೋಚಿಸುವುದು ಈ ಬಿಸಿಲಿನಿಂದ ಪಲಾಯನ ಮಾಡಿ ಯಾವುದಾದರೂ ತಂಪು ಹವೆಯ ಜಾಗಕ್ಕೆ ಓಡಿ ಹೋಗೋಣವೇ ಎಂದು. ನಮ್ಮ ಮನಸ್ಸಿಗೆ ಯಾವುಯಾವುದೋ ಸ್ಥಳಗಳು ಹೊಳೆಯುತ್ತವೆ. ಉದಾಹರಣೆ: ನಂದಿ, ಊಟಿ, ಕೊಡೈಕೆನಾಲ್, ಕಾಶ್ಮೀರ ಅಥವಾ ಸ್ವಿಟ್ಜರ್ಲೆಂಡ್. ಹೀಗೆ ನಾನು, ನನ್ನ ಪತ್ನಿ ಯೂರೋಪಿನ ಪ್ರವಾಸಕ್ಕೆ ಹೋದಾಗ ಒದಗಿ ಬಂದದ್ದು, ಯೂರೋಪ್ ಪ್ರವಾಸದ ಅನಿವಾರ್ಯ ಭಾಗವೇ ಆದ ಸ್ವಿಟ್ಜರ್ಲೆಂಡ್.

ಸ್ವಿಟ್ಜರ್ಲೆಂಡ್ ಬಗ್ಗೆ ಒಬ್ಬೊಬ್ಬರಿಗೆ ಒಂದೊಂದು ತರಹದ ಅನಿಸಿಕೆ. ಕೆಲವರಿಗೆ ಅದು ಕೇವಲ ಕಪ್ಪು ಹಣದ ಭದ್ರತಾ ಕೊಠಡಿಯಾದರೆ, ಬಹುಮಂದಿಗೆ ಅದು ತಂಪಾದ ಹವೆಯುಳ್ಳ ಗಿರಿಧಾಮ. ಈ ಎರಡೂ ಅನಿಸಿಕೆಗಳು ನಿಜವೇ. ಆದರೆ ಅಲ್ಲಿನ ಪ್ರಾಕೃತಿಕ ಸೌಂದರ್ಯ, ಹಿಮಾಚ್ಛಾದಿತ ಪರ್ವತಶ್ರೇಣಿ, ನೈಸರ್ಗಿಕ ಮಂಜುಗಡ್ಡೆಯ ತಾಣ, ಈ ಎಲ್ಲವೂ ತಂಪಾದ ಆಕರ್ಷಕ ಹವೆಗೆ ಎಡೆಮಾಡಿ ಕೊಟ್ಟಿರುವುದೇ ಇಲ್ಲಿನ ವಿಶಿಷ್ಟತೆ.

ಎಲ್ಲ ಪ್ರವಾಸಿಗಳಿಗೆ ಇಡೀ ಸ್ವಿಟ್ಜರ್ಲೆಂಡ್ ದೇಶವನ್ನು ನೋಡಲು ಸಾಧ್ಯವಾಗದಿದ್ದರೂ ಸಾಮಾನ್ಯವಾಗಿ ಆ ದೇಶದ ಸೌಂದರ್ಯವನ್ನು ಸವಿಯಲು ಮೌಂಟ್ ಟಿಟ್ಲೆಸ್ ಮತ್ತು ಉಸಿರುಕಟ್ಟಿಸುವಂತಹ ರೈಲು ಪ್ರಯಾಣ ಮಾಡಿ ಭೇಟಿ ನೀಡಬೇಕಾದ, ಯೂರೋಪಿನ ಶಿಖರ ಎಂದೇ ಕರೆಯಲ್ಪಡುವ, ಯೂಂಗ್ ಫ್ರುಜೋವನ್ನು ವೀಕ್ಷಿಸಬೇಕು.

ಮೌಂಟ್ ಟಿಟ್ಲೆಸ್ ಮಂಜುಗಡ್ಡೆಯಿಂದ ಕೂಡಿದ, ಇಳಿಜಾರುಳ್ಳ ಹಿಮಾಚ್ಛಾದಿತ ಪರ್ವತ. ಇದು ಸಮುದ್ರ ಮಟ್ಟದಿಂದ ೧೦೦೦೦ ಅಡಿ ಮೇಲಿದೆ.

**ಎಂ. ಎಸ್. ರಘುನಾಥ್**

ಅಲ್ಲಿಂದ ಕೆಳಗೆ ನೋಡಿದರೆ ೩೩೦೦ ಅಡಿಯ ಮೇಲಿಂದ ಕಾಣುವ ಸ್ವಿಸ್ ಪಟ್ಟಣ ಏಂಜಲ್ ಬರ್ಗ್ ಸುಂದರವಾದ ಸ್ಥಳ. ಇಲ್ಲಿ ವರ್ಷಪೂರ್ತಿ ಪ್ರವಾಸದ ಚಟುವಟಿಕೆಗಳು ನಡೆಯುತ್ತಿರುತ್ತವೆ. ಬೇಸಿಗೆಯಲ್ಲಿ ಪರ್ವತ ಚಾರಣ, ಗಾಲ್ಫ್, ಭಂಗಿ ನೆಗೆತವಿದ್ದರೆ, ಚಳಿಗಾಲದಲ್ಲಿ ಪರ್ವತವನ್ನು ಹತ್ತಲು ನೆಲದ ಮೇಲಿನ ಶಿಬಿರವಾಗಿರುತ್ತದೆ. ಏಂಜಲ್ ಬರ್ಗ್ ಅಲ್ಲಿನ ಮುಖ್ಯ ನಗರಗಳಾದ ಲುನರ್ಸ್ ಮತ್ತು ಜ್ಯೂರಿಂಕ್‌ಗಳೊಂದಿಗೆ ಸಂಪರ್ಕ ಹೊಂದಿದೆ.

ಟಿಟ್ಲೆಸ್ ಪರ್ವತಕ್ಕೆ ಕೇಬಲ್ ಕಾರ್ ಮೂಲಕ ಹೋಗುವ ಸೌಕರ್ಯವಿದೆ. ಹಸಿರು ಇಳಿಜಾರು ಮತ್ತು ಹಿಮನದಿಯ ದೃಶ್ಯವನ್ನು ಆಸ್ವಾದಿಸುತ್ತಾ ಕೈಗೊಳ್ಳುವ ಈ ಪ್ರಯಾಣ ರೋಮಾಂಚಕಾರಿಯಾದುದು. ರೋಟ್ ಕಾರ್ – ವೃತ್ತಾಕಾರದ ಪಥದಲ್ಲಿ ಚಲಿಸುವ ಜಗತ್ತಿನ ಮೊದಲ ಕೇಬಲ್ ಕಾರ್ ಆಗಿದೆ. ಅದರ ಮೂಲಕ ಹಿಮ ಮತ್ತು ಮಂಜು, ಹಿಮನದಿ ಹಾಗೂ ಆಳವಾದ ಕಂದರಗಳಿಂದ ಸುತ್ತುವರಿದ ಮೌಂಟ್ ಟಿಟ್ಲಿಸ್‌ಅನ್ನು ಪ್ರವೇಶಿಸಬಹುದಾಗಿದೆ. ರೋಟ್ ಏರ್‌ನಿಂದ ಎಲ್ಲಾ ಕಡೆಯಿಂದಲೂ ಪರ್ವತಗಳ ಸಮಗ್ರ ನೋಟ ಸಿಗುತ್ತದೆ. ಅದು ೩೬೦ ಡಿಗ್ರಿಯಲ್ಲಿ ತಿರುಗುತ್ತಾ, ಸುತ್ತುವರಿದ ಅರಣ್ಯ ಪ್ರದೇಶದಿಂದ, ಮೌನದ ಮಂಜು ಪ್ರದೇಶದ ಕಡೆಗೆ ಮೇಲಕ್ಕೆ ಕೊಂಡೊಯ್ಯುತ್ತದೆ.

ಅಲ್ಲಿ ಮೊದಲು ವೀಕ್ಷಿಸಬೇಕಾದ್ದು ಐಸ್ ಗ್ರೋಟೋ ಅಥವಾ ಮಂಜಿನಿಂದ ಸಿಂಗರಿಸಿದ ಕೃತಕ

**ಟಿಟ್ಲೆಸ್ ಪರ್ವತಕ್ಕೆ ಕೇಬಲ್ ಕಾರ್ ಮೂಲಕ ಹೋಗುವ ಸೌಕರ್ಯವಿದೆ. ಹಸಿರು ಇಳಿಜಾರು ಮತ್ತು ಹಿಮನದಿಯ ದೃಶ್ಯವನ್ನು ಆಸ್ವಾದಿಸುತ್ತಾ ಕೈಗೊಳ್ಳುವ ಈ ಪ್ರಯಾಣ ರೋಮಾಂಚಕಾರಿಯಾದುದು. ರೋಟ್ ಕಾರ್ – ವೃತ್ತಾಕಾರದ ಪಥದಲ್ಲಿ ಚಲಿಸುವ ಜಗತ್ತಿನ ಮೊದಲ ಕೇಬಲ್ ಕಾರ್ ಆಗಿದೆ. ಅದರ ಮೂಲಕ ಹಿಮ ಮತ್ತು ಮಂಜು, ಹಿಮನದಿ ಹಾಗೂ ಆಳವಾದ ಕಂದರಗಳಿಂದ ಸುತ್ತುವರಿದ ಮೌಂಟ್ ಟಿಟ್ಲಿಸ್‌ಅನ್ನು ಪ್ರವೇಶಿಸಬಹುದಾಗಿದೆ. ರೋಟ್ ಏರ್‌ನಿಂದ ಎಲ್ಲಾ ಕಡೆಯಿಂದಲೂ ಪರ್ವತಗಳ ಸಮಗ್ರ ನೋಟ ಸಿಗುತ್ತದೆ. ಅದು ೩೬೦ ಡಿಗ್ರಿಯಲ್ಲಿ ತಿರುಗುತ್ತಾ, ಸುತ್ತುವರಿದ ಅರಣ್ಯ ಪ್ರದೇಶದಿಂದ, ಮೌನದ ಮಂಜು ಪ್ರದೇಶದ ಕಡೆಗೆ ಮೇಲಕ್ಕೆ ಕೊಂಡೊಯ್ಯುತ್ತದೆ.**



***ಲೇಖಕರು ತಮ್ಮ ಪತ್ನಿಯೊಂದಿಗೆ ಸ್ವಿಟ್ಜರ್ಲೆಂಡಿನ ಹಿಮ ಪರ್ವತದಲ್ಲಿ***

ಗುಹೆ. ೪–೫ ಡಿಗ್ರಿ ತಾಪಮಾನವಿರುವ ಈ ಗುಹೆಯಲ್ಲಿ ಒಂದು ಸುತ್ತು ಹಾಕಿದರೆ ಉತ್ತರ ಧ್ರುವದಲ್ಲಿರುವಂತೆ ಭಾಸವಾಗುತ್ತದೆ. ಕೈಗೆ ಗ್ಲೌಸ್ ಧರಿಸಿ, ಅಡಿಯಿಂದ ಮುಡಿಯವರೆಗೆ, ಬೆಚ್ಚಗಿನ ಪೋಷಾಕಿನಲ್ಲಿ ಮಂಜುಗಡ್ಡೆಯನ್ನು ತುಳಿಯುತ್ತಾ ವಿಹರಿಸುವುದೇ ಒಂದು ಅಪೂರ್ವ ಅನುಭವ. ಮಂಜುಗಡ್ಡೆಗಳ ಬೆಳಕು ಕಣ್ಣಿಗೆ ರಾಚುವುದರಿಂದ, ತಂಪುಗಾಜಿನ ಕನ್ನಡಕವನ್ನು ಧರಿಸಲು ಮುನ್ನೆಚ್ಚರಿಕೆ ನೀಡಲಾಗುತ್ತದೆ.

ಎಲ್ಲಕ್ಕಿಂತ ಮೊದಲು ನಾನು ಮಾಡಿದ ಮೊದಲ ಕೆಲಸವೆಂದರೆ, ದಪ್ಪ ಮಂಜುಗಡ್ಡೆಯನ್ನು ಕೈಯಲ್ಲಿ ಮುಟ್ಟಿನೋಡಿದ್ದು. ಅದರ ಸ್ಪರ್ಶ ರೋಚಕವಾದ ಅನುಭವವನ್ನು ನೀಡುತ್ತದೆ. ಇನ್ನು ಮಂಜಿನ ಇಳಿಜಾರಿನಲ್ಲಿ ಜಾರುವುದಂತೂ ಒಂದು ತುಂಟಾಟದ ಅನುಭವ.

## ಆತ್ಮ

ಶಿಯಾ – ಸುನ್ನಿಗಳ
ಆತ್ಮ ಒಂದೇ !
ಆದರೆ
ಬೇರೊಂದು (ಒಬಮಾ) ಆತ್ಮ
ಆಗಮನ

ಕದಡಿತು
ಶಾಂತಿ
ಹಿಡಿದರು
ದುರ್ಗಮ
ಮಾರ್ಗ

**ದ್ವಾರನಕುಂಟೆ ಪಾತಣ್ಣ**
ನಾಗಸಂದ್ರ ಅಂಚೆ
ಬೆಂಗಳೂರು – ೭೩

ಟಿಟ್ಲೆಸ್ ಗ್ಲೇಸ್ಷಿಯರ್ ಸ್ಟೇಷನ್ (ಹಿಮನದಿಯ ನಿಲ್ದಾಣ) ಎನ್ನುವುದು ಪರ್ವತದ ಎತ್ತರದಲ್ಲಿ ನಿಂತು ಬೇಕಾದ ಎಲ್ಲ ಸೌಕರ್ಯಗಳನ್ನು ಒಳಗೊಂಡ ಸ್ಥಳ. ಸನ್ ಟೆರೇಸ್ ಅಥವಾ ಸೂರ್ಯ ಮೇಲ್ಛಾವಣಿಯು ಆಸುಪಾಸಿನ ಪರ್ವತಗಳ ಉಸಿರುಕಟ್ಟಿಸುವ ನೋಟವನ್ನು ನೀಡುವುದಲ್ಲದೆ, ೨೦ ಮೀಟರ್ ದೂರದಲ್ಲಿರುವ ಟಿಟ್ಲೆಸ್ ಹಿಮನದಿಯ ಸಂಪರ್ಕವನ್ನು ಹೊಂದಿದೆ. ಮುಟ್ಟಿ ನೋಡುವಷ್ಟು ಹತ್ತಿರದಲ್ಲೇ ಕಾಣುವ ಜಗತ್ತಿನ ಅತ್ಯಂತ ಸುಂದರ ಪರ್ವತ ಶ್ರೇಣಿಯ ನೋಟವನ್ನು ಶಬ್ದಗಳಲ್ಲಿ ಹಿಡಿದಿಡುವುದು ಕಷ್ಟವೇ ಸರಿ.

ಟಿಟ್ಲೆಸ್‌ನ ಒಂದು ಪ್ರದೇಶದ ಹಸಿರು ತಾಣದಲ್ಲಿ ಗಂಟೆಯ ನಿನಾದವನ್ನು ಹೊಮ್ಮಿಸುವ ಸ್ವಿಟ್ಜರ್ಲೆಂಡ್‌ನ ದನಕರುಗಳನ್ನು ಕಾಣಬಹುದು. ಈ ದನಗಳಿಗೆ ಕಟ್ಟುವ ಗಂಟೆ ಆ ದೇಶದ ಲಾಂಛನವೂ ಆಗಿರುವುದು ಗಮನಾರ್ಹ. ವಿವಿಧ ಆಕಾರಗಳುಳ್ಳ ಆ ಗಂಟೆಯನ್ನು ಸ್ಮರಣಿಕೆಗಳಾಗಿ ಪ್ರವಾಸಿಗರು ಕೊಂಡೊಯ್ಯುತ್ತಾರೆ.

ಸ್ವಿಟ್ಜರ್ಲೆಂಡ್ ಪ್ರವಾಸದ ಬಹುಮುಖ್ಯವಾದ ಮಜಲು, ಯೂರೋಪಿನ ಅತ್ಯಂತ ಎತ್ತರದ ಪ್ರದೇಶವೆಂದೇ ಖ್ಯಾತಿಯಾದ ಜುಂಗ್ ಫ್ರುಜೊಗೆ ಭೇಟಿ. ಹಿಮನದಿಯ ಜಲಪಾತವೊಂದನ್ನು ನೋಡಿಕೊಂಡು, ೩೪೫೪ ಮೀಟರ್‌ನಷ್ಟು ಎತ್ತರವಾದ ರೈಲ್ವೆ ನಿಲ್ದಾಣವೆಂಬ ಹೆಗ್ಗಳಿಕೆಯ ಜುಂಗ್ ಫ್ರುಜೊಗೆ ಲಾಟರ್ ಬ್ರನ್‌ನಿಂದ ಗಾಲಿ ಹಲ್ಲು ಉಳ್ಳ ರೈಲು ಪ್ರಯಾಣ ಮನೋಹರ ದೃಶ್ಯಗಳನ್ನು ಒಳಗೊಂಡಿದೆ. (ಜಗತ್ತಿನ ಎರಡನೇ ಎತ್ತರದ ರೈಲು ನಿಲ್ದಾಣ ನಮ್ಮ ದೇಶದ ಡಾರ್ಜಿಲಿಂಗ್ ಎನ್ನಲಾಗಿದೆ). ಇಲ್ಲಿರುವ ಹಿಮ ಅರಮನೆಯಲ್ಲಿ ಮಂಜಿನಿಂದ ಕಟ್ಟಲ್ಪಟ್ಟಿರುವ ಕೆತ್ತನೆ ವಿಗ್ರಹಗಳನ್ನು ಕಾಣಬಹುದು. ಒಟ್ಟಿನಲ್ಲಿ ಜುಂಗ್ ಫ್ರುಜೊ ಮಂಜು ಮತ್ತು ಹಿಮರಾಶಿಯ ಅನಂತ ವಿಸ್ಮಯ ಲೋಕ. ಇದು ಯುನೆಸ್ಕೋದ ವಿಶ್ವಪರಂಪರೆಯ ಪಟ್ಟಿಗೆ ಸೇರಿದೆ.

ಮಂಜಿನ ವಾತಾವರಣದಲ್ಲಿ ಒಮ್ಮೊಮ್ಮೆ ಉಸಿರು ಕಟ್ಟುವಂತಾಗಬಹುದೆಂಬ ಕಾರಣದಿಂದ ಮೂಸಿ ನೋಡಲು ಕರ್ಪೂರವನ್ನು ನೀಡಲಾಗುತ್ತದೆ. ಇಲ್ಲಿರುವ ಒಂದು ಭಾರತೀಯ ಹೋಟೆಲ್‌ನಲ್ಲಿ ಸಿಕ್ಕಿದ ಬಿಸಿ ಬಿಸಿ ಮಸಾಲೆ ಚಹಾ ಚಳಿಗೆ ಹಿತಕರವಾಗಿತ್ತು.

ಪರ್ವತಗಳ ಸಾಲನ್ನು ವೀಕ್ಷಿಸಿದ ನಂತರ, ಅದರ ರಾಜಧಾನಿ ಜಿನೀವಾ ಮತ್ತು ಲುಸರ್ನ್ ನಗರಗಳು ಭೇಟಿ ನೀಡಬೇಕಾದ ತಾಣಗಳು. ಜಿನೀವಾದ ಹೃದಯಭಾಗದಲ್ಲಿ ಸುಮಾರು ೩೨ ಚದರ ಕಿಲೊಮೀಟರ್‌ನಷ್ಟು ವ್ಯಾಪಿಸಿರುವ ಸರೋವರವಿದೆ. ಅದರ ನಿರ್ವಹಣೆಯು ಚೆನ್ನಾಗಿದೆ. ಜಿನೀವಾ ಮತ್ತು ಲುಸರ್ನ್ ನಗರಗಳಲ್ಲಿ ಎಲ್ಲಿ ನೋಡಿದರೂ ನೀರು. ಇಷ್ಟು ಅಗಾಧ ಪ್ರಮಾಣದ ನೀರು ಸಂಗ್ರಹವಿದ್ದರೆ, ಯಾವ ನಗರ ತಾನೆ ತಂಪಾಗಿ ಸಮೃದ್ಧವಾಗಿ ಇರುವುದಿಲ್ಲ ? ಇಲ್ಲಿ ಐಷಾರಾಮಿ ಹೋಟೆಲ್‌ಗಳು, ಜಗತ್ತಿನ ಕಪ್ಪು ಹಣದ ಸಂಗ್ರಹದ ತಾಣಗಳೆಂಬ ಕುಖ್ಯಾತಿ ಉಳ್ಳ ಬ್ಯಾಂಕ್ ಕಟ್ಟಡಗಳು ಇವೆ. ಇಲ್ಲಿ ವಿಶ್ವಸಂಸ್ಥೆಯ ಕಛೇರಿಯು ಇದ್ದು, ಅದರ ಕಟ್ಟಡ ಕಾಣದೇ ಇರುವಷ್ಟು ಮಟ್ಟಿಗೆ ದಟ್ಟವಾದ ಮರಗಳಿಂದ ಆವೃತವಾಗಿದೆ. ಅದರ ಒಂದು ಮೂಲೆಯಲ್ಲಿ ಮಹಾತ್ಮಾ ಗಾಂಧಿಯವರ ಒಂದು ವಿಗ್ರಹವಿದ್ದು, ಅದು ಭಾರತಕ್ಕೆ ನೀಡಿದ ಗೌರವ ಎಂದು ಪರಿಗಣಿಸಬಹುದು. ಇಲ್ಲಿ ಜಗತ್ತಿನ ಅತ್ಯಂತ ಎತ್ತರವಾದ ಕಾರಂಜಿಯೂ ಇದೆ. ಹೂವುಗಳ ವಿನ್ಯಾಸದ ಗಡಿಯಾರ ಮತ್ತೊಂದು ಆಕರ್ಷಣೆ.

ಲುಸರ್ನ್ ಸಹ ಮತ್ತೊಂದು ಸುಂದರ ನಗರ. ಕಪ್ಪಲ್ ಬ್ರೂಕ್ ಎಂಬ ಮರದ ಸೇತುವೆ ವಾಯುವಿಹಾರಕ್ಕೆ ಯೋಗ್ಯವಾಗಿದೆ. ಇಲ್ಲಿರುವ ಸರೋವರದಲ್ಲಿ ದೋಣಿ ವಿಹಾರವಿದ್ದು, ದೋಣಿಯಲ್ಲಿ ಸ್ವಿಸ್ ಜನಪದ ಗಾಯಕರ ಗಾಯನ ಮತ್ತು ನರ್ತನವೂ ಇರುತ್ತವೆ. ಲುಸರ್ನ್ ಚಾಕೊಲೇಟ್‌ಗಳ ತವರೂರು ಸಹ ಆಗಿದೆ. ಚಾಕೊಲೇಟ್ ಫ್ಯಾಕ್ಟರಿಗೆ ಭೇಟಿ ನೀಡಿ ಅದರ ತಯಾರಿಕೆಯ ಪ್ರಾತ್ಯಕ್ಷಿಕೆಯನ್ನು ನೋಡಬಹುದು. ಅದರ ತಯಾರಿಯ ಡಾಕ್ಯುಮೆಂಟರಿಯನ್ನು ಸಹ ಪ್ರದರ್ಶಿಸಲಾಗುತ್ತದೆ. ಬಗೆ ಬಗೆಯ ಚಾಕೊಲೇಟ್ ನಮೂನೆಗಳನ್ನು ರುಚಿ ನೋಡಲು ನೀಡುತ್ತಾರೆ. ಅಲ್ಲಿಯ ತಂಪು ಹವಾಮಾನ ಚಾಕೊಲೇಟ್ ಉದ್ಯಮಕ್ಕೆ ಸಹಕಾರಿಯಾಗಿದೆ. (ಅದನ್ನು ಕಂಡು ನಮ್ಮ ದೇಶದ ಕೊಡೈಕೆನಾಲ್‌ನಲ್ಲಿಯೂ ಚಾಕೊಲೇಟ್ ಗೃಹಕೈಗಾರಿಕೆಯಾಗಿರುವುದು ನೆನಪಿಗೆ ಬಂತು). ಇಂತಹ ಅನಂತ ತಂಪು ಹವೆಯ ಸ್ವಿಟ್ಜರ್ಲೆಂಡ್‌ಗೆ ವಿದಾಯ ಹೇಳುವಾಗ ಮೈಮನಗಳಿಗೆ ಭಾರವಾದ ಅನುಭವ ಉಂಟಾಗುತ್ತದೆ.

**ಎಂ. ಎಸ್. ರಘುನಾಥ್**
ಎಚ್. ಐ. ಜಿ. ೪೦, ೬ನೇ ಮುಖ್ಯರಸ್ತೆ
ಕೆ. ಎಚ್. ಬಿ. ಕಾಲನಿ, ೨ನೇ ಹಂತ, ಬಸವೇಶ್ವರನಗರ
ಬೆಂಗಳೂರು – ೫೬೦ ೦೭೯

# ವೈಚಾರಿಕ ರಂಗಪ್ರಯೋಗ 'ಬುದ್ಧನೆಡೆಗೆ'

## ನಾಟಕ ವಿಮರ್ಶೆ

ನಾಟಕದಾದ್ಯಂತ ಬುದ್ಧನ ತತ್ವಗಳು ಉಲ್ಲೇಖಗೊಂಡಿವೆ. ಬುದ್ಧನ ಪಂಚಶೀಲ, ಅಷ್ಟಾಂಗ ಮಾರ್ಗಗಳು, ಸೌಂದರ್ಯ ಮೀಮಾಂಸೆಗಳನ್ನು ಬುದ್ಧನಿಂದ ಬೋಧಿಸಲಾಗುತ್ತದೆ. ವೈಚಾರಿಕ ಮನೋಭಾವದವರಿಗೆ ಇದೆಲ್ಲಾ ಅರ್ಥವಾದರೂ ಜನಸಾಮಾನ್ಯರಿಗೆ, ಗ್ರಾಮೀಣ ಜನತೆಗೆ ತಲುಪುವುದು ಕಷ್ಟ . ಬೋಧನೆಗಾಗಿಯೇ ನಾಟಕವನ್ನು ಕಟ್ಟಿಕೊಟ್ಟರೆ ಅಂತಹ ಪ್ರಯತ್ನ ಯಶಸ್ವಿಯಾಗುವುದು ಅನುಮಾನ. ಬೋಧನೆಗಳನ್ನು ದೃಶ್ಯದ ಒಳಗೆ ಕಟ್ಟುವುದಕ್ಕೂ ಬಾಹ್ಯವಾಗಿ ಹೇರುವುದಕ್ಕೂ ವ್ಯತ್ಯಾಸವಿದೆ. ಉಪದೇಶ ಅಥವಾ ಬೋಧನೆ ಎಂದು ಪ್ರೇಕ್ಷಕರಿಗೆ ಅನುಮಾನ ಬಾರದ ಹಾಗೆ ನಾಟಕವನ್ನು ಪೂರಕ ದೃಶ್ಯ ಸೃಷ್ಟಿಗಳಿಂದ ದರ್ಶನಗೊಳಿಸಿದ್ದರೆ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ತಲುಪಬಹುದಾಗಿತ್ತು. ಅಂಬೇಡ್ಕರ್ ಕೃತಿಯನ್ನು ರಂಗರೂಪಗೊಳಿಸುವಾಗಲೇ ರಂಗಪ್ರಯೋಗ ಸಾಧ್ಯತೆಗಳನ್ನು ನಿರ್ದೇಶಕರು ಅರಿತು ಬಳಸಿದ್ದರೆ 'ಬುದ್ಧನೆಡೆಗೆ' ನಾಟಕ ಕನ್ನಡ ರಂಗಭೂಮಿಗೆ ಒಂದು ಅಪರೂಪದ ಕೊಡುಗೆಯಾಗುತ್ತಿತ್ತು. ಅದೇನೇ ಇರಲಿ, ಬುದ್ಧನೆಡೆಗೆ ಜನ ಹೋಗಲು ಸಾಧ್ಯವಾಗುತ್ತೋ ಇಲ್ಲವೋ ಗೊತ್ತಿಲ್ಲ, ಆದರೆ ಜನರೆಡೆಗೆ ಬುದ್ಧನನ್ನು ಹಾಗೂ ಆತನ ಜೀವಪರ ತತ್ವಗಳನ್ನು ತೆಗೆದುಕೊಂಡು ಹೋಗುವ ಸಾರ್ಥಕ ಪ್ರಯತ್ನವನ್ನು ಮಾಡುವಲ್ಲಿ ಈ ನಾಟಕ ಯಶಸ್ವಿಯಾಗಿದೆ.

**ಶಶಿಕಾಂತ ಯಡಹಳ್ಳಿ**

'ಪ್ರಜ್ಞೆ ಮತ್ತು ಕರುಣೆ' ಎಂಬ ಮಹಾ ಮಾನವತಾವಾದವನ್ನು ಮನುಕುಲಕ್ಕೆ ಬೋಧಿಸಿದವರು ಬೋಧಿಸತ್ವ ಗೌತಮ ಬುದ್ಧ. ಮನುಷ್ಯನ ದುರಾಸೆಗಳಿಂದುಂಟಾಗುವ ನೋವು ಸಂಕಟಗಳಿಂದ ಹೊರಬರಬೇಕಾದ ದಾರಿಯನ್ನು ತನ್ನ ಪಂಚಶೀಲಗಳು ಹಾಗೂ ಅಷ್ಟಾಂಗ ಮಾರ್ಗಗಳಿಂದ ತೋರಿಸಿದ ಮಹಾಗುರು ಬುದ್ಧ. ಮನುಕುಲದ ಬೆಳಕಾದ ಬುದ್ಧನ ಕುರಿತು ಕೆಲವಾರು ನಾಟಕಗಳು ಈಗಾಗಲೇ ಬಂದಿವೆ. ಬಹುತೇಕ ನಾಟಕಗಳಲ್ಲಿ ಸಾಂಪ್ರದಾಯಿಕ ಬುದ್ಧ ಚರಿತೆಯನ್ನೇ ಹೇಳುವ ಪ್ರಯತ್ನ ಮಾಡಲಾಗಿದೆ. ಆದರೆ 'ಬುದ್ಧನೆಡೆಗೆ' ನಾಟಕ ಮಾತ್ರ ಬುದ್ಧನ ಬದುಕು ಹಾಗೂ ಸಾಧನೆಯನ್ನು ವೈಚಾರಿಕ ನೆಲೆಗಟ್ಟಿನಲ್ಲಿ ವಿಶ್ಲೇಷಿಸುತ್ತದೆ. ಬುದ್ಧನ ಕುರಿತಾಗಿ ಇರುವ ಮಿಥ್‌ಗಳನ್ನು ಒಡೆದು ಹಾಕಿ ತಾತ್ವಿಕ ತಳಹದಿಯ ಮೇಲೆ ನಾಟಕ ರೂಪದಲ್ಲಿ ಕಟ್ಟಿಕೊಡುವ ಒಂದು ಗಟ್ಟಿ ಪ್ರಯತ್ನ 'ಬುದ್ಧನೆಡೆಗೆ' ನಾಟಕದಲ್ಲಿದೆ.

ಡಾ॥ ಅಂಬೇಡ್ಕರರು ಬರೆದ ಬುದ್ಧನ ಕುರಿತ 'ಬುದ್ಧ ಮತ್ತು ಆತನ ಧಮ್ಮ' ಕೃತಿಯನ್ನಾಧರಿಸಿ ಡಾ॥ ಮ. ನ. ಜವರಯ್ಯನವರು 'ಜಲ' ಎನ್ನುವ ಹೆಸರಿನಲ್ಲಿ ನಾಟಕವನ್ನು ಬರೆದಿದ್ದು, ಗುಲಬರ್ಗಾ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ ಶಂಕರಯ್ಯ ಘಂಟಿಯವರು ನಿರ್ದೇಶಿಸಿದ್ದರು. ಈಗ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಇದೇ ಕೃತಿಯನ್ನಾಧರಿಸಿದ 'ಬುದ್ಧನೆಡೆಗೆ' ಎಂಬ ವಿಶಿಷ್ಟ ನಾಟಕವನ್ನು ರಂಗರೂಪಗೊಳಿಸಿ ಗಿರೀಶ್ ಮಾಚಳ್ಳಿಯವರು ನಿರ್ದೇಶಿಸಿದ್ದಾರೆ. ಮಂಡ್ಯ ಮತ್ತು ಮೈಸೂರು ಭಾಗದ ಕೆಲವಾರು ಯುವಜನರನ್ನು ಸೇರಿಸಿ ತಮ್ಮ 'ಚಾರ್ವಾಕ ಟ್ರಸ್ಟ್'ಗೆ ಈ ನಾಟಕವನ್ನು ಮಾಚಳ್ಳಿ ಕಟ್ಟಿಕೊಟ್ಟಿದ್ದು, ೨೦೧೪, ಅಕ್ಟೋಬರ್ ೩೧ರಂದು ಬೆಂಗಳೂರಿನ ಎಡಿಎ ರಂಗಮಂದಿರದಲ್ಲಿ 'ಬುದ್ಧನೆಡೆಗೆ' ನಾಟಕವನ್ನು ಪ್ರದರ್ಶಿಸಿ ಬುದ್ಧ ಗುರುವಿನ ವಿಚಾರಗಳನ್ನು ವೈಚಾರಿಕ ದೃಷ್ಟಿಕೋನದಲ್ಲಿ ಪ್ರೇಕ್ಷಕರಿಗೆ ದರ್ಶನ ಮಾಡಿಸಲು ಪ್ರಯತ್ನಿಸಿದರು.



ಇಡೀ ನಾಟಕ ಬುದ್ಧನ ಹುಟ್ಟಿನಿಂದ ಆರಂಭಗೊಂಡು ನಿರ್ವಾಣದವರೆಗೂ ಮುಂದುವರಿಯುತ್ತದೆ. ಬುದ್ಧನ ಬದುಕಿನ ಪ್ರಮುಖ ಘಟನೆಗಳನ್ನು ಬಿಡಿ ಬಿಡಿಯಾಗಿ ತೋರಿಸಲಾಗಿದೆ. ಸಾಕ್ಯ ರಾಜ ಶುದ್ಧೋಧನನಿಗೆ ಹುಣ್ಣಿಮೆಯಂದು ಗಂಡುಮಗು ಹುಟ್ಟಿದ್ದು, ಇದನ್ನು ದಿವ್ಯದೃಷ್ಟಿಯಿಂದ ಅರಿತ ಮುನಿ ಹಿಮಾಲಯದಿಂದ ಬಂದು ಹರಸಿ 'ಸಿದ್ಧಾರ್ಥ' ಎಂದು ಹೆಸರಿಸಿದ್ದು, ತಾಯಿ ತೀರಿಕೊಂಡು ಚಿಕ್ಕಮ್ಮನ ಆಶ್ರಯದಲ್ಲಿ ಬೆಳೆದ ಸಿದ್ಧಾರ್ಥ ದೊಡ್ಡವನಾಗಿದ್ದು ಸಾಕ್ಯ ಸಂಘದ ದಂಡಾಧಿಕಾರಿಯಾಗಿ ಅವಿರೋಧವಾಗಿ ಆಯ್ಕೆಯಾಗಿದ್ದು, ನೀರಿನ ಹಂಚಿಕೆ ವಿವಾದದಲ್ಲಿ ಯುದ್ಧ ಸನ್ನದ್ಧತೆಯನ್ನು ವಿರೋಧಿಸಿದ ಸಿದ್ಧಾರ್ಥನು ಗಡೀಪಾರು ಶಿಕ್ಷೆಗೊಳಗಾಗಿ ದೇಶಭ್ರಷ್ಟನಾಗಿ ಕಾಡುಪಾಲಾಗಿದ್ದು, ದೇಹದಂಡನೆ ಮಾಡಿ ಅದರ ನಿರರ್ಥಕತೆಯನ್ನು ಕಂಡುಕೊಂಡಿದ್ದು, ಆ ನಂತರ ಜ್ಞಾನೋದಯವಾಗಿದ್ದು, ದೂಷಿಸಿ ದೂರವಾದ ಶಿಷ್ಯರನ್ನು ಒಲಿಸಿಕೊಂಡಿದ್ದು, ಗ್ರಾಮ ಒಂದರ ಸೇನಾಧಿಕಾರಿಯನ್ನು ಬದಲಾಯಿಸಿದ್ದು, ಅಂಗುಲಿಮಾಲನನ್ನು ಪರಿವರ್ತನೆಗೊಳಿಸಿದ್ದು, ಅಮ್ರಪಾಲಿ ಎಂಬ ವೇಶ್ಯೆಗೆ ಸತ್ಯ ದರ್ಶನ ಮಾಡಿಸಿದ್ದು, ಕೊನೆಗೆ ತಂದೆ ಶುದ್ಧೋಧನನನ್ನು ಮರಣಶಯ್ಯೆಯಲ್ಲಿದ್ದಾಗ ಭೇಟಿಯಾಗಿ ಉಪದೇಶಿಸಿದ್ದು ಹಾಗೂ ಕೊಟ್ಟಕೊನೆಗೆ ವಿರಮಿಸಿದ್ದು ಮತ್ತು ನಡುನಡುವೆ ಬುದ್ಧ ತನ್ನ ವಿಚಾರಧಾರೆಗಳನ್ನು ಬೋಧಿಸಿದ್ದು.... ಇಷ್ಟೆಲ್ಲಾ ಘಟನೆಗಳನ್ನು ಒಂದರ ನಂತರ ಒಂದರಂತೆ 'ಬುದ್ಧನೆಡೆಗೆ' ನಾಟಕ ಕಟ್ಟಿಕೊಡುತ್ತದೆ.

'ರಾಜಕುವರ ಸಿದ್ಧಾರ್ಥನ ಮನಃ

ಪರಿವರ್ತನೆಯ ಹುಸಿ ಕಲ್ಪನೆಯನ್ನು ಒಡೆದು ಹಾಕಿರುವುದು ಈ ನಾಟಕದ ವಿಶೇಷತೆ. 'ರಾಜಕುಮಾರ ಸಿದ್ಧಾರ್ಥನು ರೋಗಿ, ಮುದುಕ ಹಾಗೂ ಶವಗಳನ್ನು ಕಂಡು ಬದುಕಿನಲ್ಲಿ ಜಿಗುಪ್ಸೆ ಹೊಂದಿ ಹೆಂಡತಿ, ಹಸುಗೂಸು ಹಾಗೂ ಹೆತ್ತವರನ್ನು ತೊರೆದು ಬದುಕಿನ ಸತ್ಯವನ್ನರಿಯಲು ನಾಡು ಬಿಟ್ಟು ಕಾಡಿಗೆ ಮಧ್ಯರಾತ್ರಿ ತೆರಳಿದ' ಎಂದು ಶತಮಾನಗಳಿಂದ ಬಹುಜನರನ್ನು ನಂಬಿಸಲಾಗಿದೆ. ಈ ಮಿಥ್ಯಾಪವಾದದಿಂದಾಗಿ ಬುದ್ಧನ ಮೇಲೆ ಹೆಂಡತಿ ಮಗುವನ್ನು ಬಿಟ್ಟು ಕಾಡಿಗೆ ಹೋದ ಪಲಾಯನವಾದಿ ಎನ್ನುವ ಆರೋಪ ಶತಮಾನಗಳಿಂದ ಉಳಿದು ಬೆಳೆದುಕೊಂಡು ಬಂದಿದೆ. ಈ ಹುಸಿ ಕಲ್ಪನೆಗೆ ಪರ್ಯಾಯವಾಗಿ ಇನ್ನೊಂದು ಹೊಸ ಪರಿಕಲ್ಪನೆಯನ್ನು ಈ ನಾಟಕ ಕಟ್ಟಿಕೊಡುತ್ತದೆ. ಇದು ಈ ನಾಟಕದ ಮತ್ತೊಂದು ವೈಶಿಷ್ಟ್ಯ. ರಾಜಪ್ರಭುತ್ವದ ಬಹುಪರಾಕ್ ಸಂಸ್ಕೃತಿಯ ಜೊತೆಗೆ ಪ್ರಜಾಪ್ರಭುತ್ವವು ಸಾಕ್ಯ ರಾಜ್ಯದಲ್ಲಿತ್ತು. ರಾಜನ ಬದಲಾಗಿ ಸಾಕ್ಯ ಪ್ರಜಾಪ್ರತಿನಿಧಿ ಸಂಘವು ರಾಜ್ಯದ ಪ್ರಮುಖ ನಿರ್ಧಾರಗಳನ್ನು ನಿರ್ಣಯಿಸುತ್ತಿತ್ತು. ನೆರೆ ರಾಜ್ಯದೊಂದಿಗೆ ನದಿ ನೀರಿನ ಹಂಚಿಕೆ ವಿಷಯ ಇತ್ಯರ್ಥಕ್ಕೆ ಯುದ್ಧವೊಂದೇ ಅಂತಿಮ ಪರಿಹಾರ ಎಂದು ಸಾಕ್ಯ ಸಂಘ ಬಹುಮತದಿಂದ ನಿರ್ಣಯ ಕೈಗೊಳ್ಳುತ್ತದೆ. ಸಾಕ್ಯ ಸಂಘದ ದಂಡಾಧಿಕಾರಿಯಾದ ಯುವಕ ಸಿದ್ಧಾರ್ಥ ಯುದ್ಧವನ್ನು, ಅದರ ಭೀಕರ ದುಷ್ಪರಿಣಾಮಗಳ ಕಾರಣಕ್ಕಾಗಿ ವಿರೋಧಿಸುತ್ತಾನೆ. ಮಾತುಕತೆಯ ಮೂಲಕ ಸಮಸ್ಯೆ ಪರಿಹರಿಸಲು ಕೇಳಿಕೊಳ್ಳುತ್ತಾನೆ. ಸಂಘದ ಬಹುಮತದ ನಿರ್ಣಯವನ್ನು ವಿರೋಧಿಸಿದ್ದಕ್ಕೆ ಹಾಗೂ ಪೂರ್ವ ಅನುಮತಿಯಿಲ್ಲದೆ ಸಭೆ ಕರೆದಿದ್ದಕ್ಕಾಗಿ ಸಾಕ್ಯ ಸಂಘವು ಸಂಘದ ದಂಡನಾಯಕನಿಗೆ ಮರಣದಂಡನೆ ಇಲ್ಲವೇ ಗಡೀಪಾರು ಶಿಕ್ಷೆಗೆ ಗುರಿಪಡಿಸುತ್ತದೆ. ಹೆತ್ತವರಿಗೆ ತಿಳಿಸಿ, ಹೆಂಡತಿಯ ಅನುಮತಿ ಪಡೆದು ಸಿದ್ಧಾರ್ಥ ಎಲ್ಲವನ್ನೂ ತೊರೆದು ದೇಶ ಬಿಟ್ಟು ಹೋಗುತ್ತಾನೆ.

ಒಂದು ಮಿಥ್ಯೆಯನ್ನು ಬೆತ್ತಲುಗೊಳಿಸಲು ನಂಬಲರ್ಹ ಸತ್ಯದರ್ಶನದ ಅಗತ್ಯವಿದೆ. ಆದರೆ ಈ ಪ್ರಕರಣದಲ್ಲಿ ಅದ್ಯಾಕೋ ಒಂದಿಷ್ಟು ಗುಮಾನಿಗಳು ನೋಡುಗರನ್ನು ಕಾಡುತ್ತವೆ. ರಾಜಪ್ರಭುತ್ವ ಹಾಗೂ ಪ್ರಜಾಪ್ರಭುತ್ವ ಎರಡೂ ಪರಸ್ಪರ ವಿರೋಧಿ ವ್ಯವಸ್ಥೆಗಳು. ಇವೆರಡೂ ಒಟ್ಟಿಗೆ ಒಂದೇ ವ್ಯವಸ್ಥೆಯಲ್ಲಿ ಇರಲು ಸಾಧ್ಯವೇ ? ಇತ್ತು ಎಂದುಕೊಳ್ಳೋಣ. ಆಗ ರಾಜ ಎನಿಸಿಕೊಂಡವನು ಕೇವಲ ಹೆಸರಿಗೆ ಮಾತ್ರವೇ ರಾಜನಾಗಿರುತ್ತಾನಾ ? ಸಾಕ್ಯ ಸಂಘದಲ್ಲಿ ಅವನಿಗೆ ಯಾವುದೇ ರೀತಿಯ ಪಾಲ್ಗೊಳ್ಳುವಿಕೆಗೆ ಅವಕಾಶವೇ ಇಲ್ಲವೆ ? ರಾಜನ ಅಭಿಪ್ರಾಯವನ್ನೂ ಕೇಳದೆ, ರಾಜಕುಮಾರ ಸಂಘದ ನಿಯಮ ಮುರಿದನೆಂದು ಆರೋಪಿಸಿ ರಾಜನೊಂದಿಗೆ ಆತನ ಕುಟುಂಬವನ್ನೂ ಗಡೀಪಾರು ಮಾಡುವ ನಿರ್ಣಯ ತೆಗೆದುಕೊಳ್ಳುವುದು ಅದೆಷ್ಟು ಸಮರ್ಥನೀಯ ? ಹೋಗಲಿ, ಸಾಕ್ಯ ಸಂಘದ ಮುಖ್ಯಸ್ಥನಾದ ಸಿದ್ಧಾರ್ಥನಿಗೆ ಸಭೆ ಕರೆಯಲೂ ಹಕ್ಕಿಲ್ಲವೇ ? ದಂಡನಾಯಕನಾಗಿ ಸಭೆ ಕರೆದಿದ್ದವನಿಗೆ ಮರಣದಂಡನೆ ವಿಧಿಸುವ ಪ್ರಜಾಪ್ರತಿನಿಧಿ ಸಂಘವು ಸರ್ವಾಧಿಕಾರಿ ಪ್ರಭುತ್ವಕ್ಕಿಂತಲೂ ಕ್ರೂರಿಯಾಗಿತ್ತಾ ? ಭಿನ್ನಾಭಿಪ್ರಾಯವನ್ನು ದಮನ ಮಾಡುವ ವ್ಯವಸ್ಥೆಗೆ ಜನಪರ ಪ್ರಜಾಪ್ರಭುತ್ವ ಎನ್ನಲು ಸಾಧ್ಯವೇ ? ಹೀಗೆ ಹಲವಾರು ಸಂದೇಹಗಳನ್ನು ಮೂಡಿಸುವಲ್ಲಿ ಈ ನಾಟಕ ಸಫಲವಾಗಿದೆ. ಹೋಗಲಿ ಪ್ರಜಾಪ್ರತಿನಿಧಿ ಸಭೆ ರಾಜನನ್ನು ನಿಯಂತ್ರಿಸುತ್ತಿತ್ತು ಎಂದೇ ನಂಬೋಣ, ಆದರೆ ಇದಕ್ಕೆ ವಿರುದ್ಧವಾದದ್ದು ಇದೇ ನಾಟಕದಲ್ಲಿದೆ. ರಾಜ ಶುದ್ಧೋಧನ ಕೊನೆಯುಸಿರೆಳೆಯುವ ಸಂದರ್ಭದಲ್ಲಿ ಯಾರನ್ನೂ ಕೇಳದೆ ತನ್ನ ರಾಜ್ಯಾಧಿಕಾರವನ್ನು ತನ್ನ ತಂಗಿಯ ಮಗ ಮಹಾನಾಮನಿಗೆ ವಹಿಸಿಕೊಡುತ್ತಾನೆ. ರಾಜ್ಯದ ರಾಜನ ಆಯ್ಕೆಯ ಪ್ರಮುಖ ವಿಷಯದಲ್ಲಿ ಸಾಕ್ಯ ಪ್ರಜಾಪ್ರತಿನಿಧಿ ಸಂಘದ ಅನುಮತಿ ಬೇಕಿರಲಿಲ್ಲವೇ ? ಇಂತಹ ದ್ವಂದ್ವ ವಿಪರ್ಯಾಸಗಳಿಗೆ ನಾಟಕದಲ್ಲಿ ಸೂಕ್ತ ಸಮರ್ಥನೆಗಳನ್ನು ಒದಗಿಸಬೇಕಾಗಿತ್ತು. ಶತಮಾನಗಳ ಕಲ್ಪನೆಯನ್ನು ಒಡೆದುಹಾಕಿ ಮತ್ತೆ ಹೊಸದಾಗಿ ತಾರ್ಕಿಕ ನೆಲೆಯಲ್ಲಿ ಕಟ್ಟುವಾಗ ಸಮರ್ಥವಾದ ವಾದ ಮಂಡಿಸುವ, ಇಲ್ಲವೇ ದೃಶ್ಯರೂಪದಲ್ಲಿ ನಿರೂಪಿಸುವ ಪ್ರತಿಭೆಯನ್ನು ಗಿರೀಶ್ ಮಾಚಳ್ಳಿ ರೂಢಿಸಿಕೊಳ್ಳಬೇಕಿದೆ.



ಗಿರೀಶ್ ಮಾಚಳ್ಳಿ ಇನ್ನೂ ಯುವಕ. ಏನನ್ನೋ ಸಾಧಿಸುವ ತವಕ. ಅವರ ಪ್ರಯತ್ನವೂ ಸಾರ್ಥಕ. ಆದರೆ... ಅತಿ ಉತ್ಸಾಹದಲ್ಲಿ ಅನುಮಾನಗಳನ್ನು ಹುಟ್ಟಿಸುವಂತಹ ನಾಟಕವನ್ನು ಕಟ್ಟಿಕೊಟ್ಟಿರುವುದು ಅಪಾಯಕಾರಿಯಾಗಿದೆ. ನಾಟಕದಾದ್ಯಂತ ವೈಚಾರಿಕತೆಗೆ ವಿರುದ್ಧ ನಡೆಯನ್ನೂ ಅಲ್ಲಲ್ಲಿ ಕಾಣಬಹುದಾಗಿದೆ. ಹಿಮಾಲಯದಲ್ಲಿದ್ದ ಮುನಿಗೆ ಬಹುದೂರದ ನಾಡಲ್ಲಿ ಸಂಭವಿಸಿದ ಬುದ್ಧನ ಜನನ ಗೊತ್ತಾಗುವುದಕ್ಕೆ ಸೂಕ್ತ ಸಮರ್ಥನೆಯಿಲ್ಲ. ಬುದ್ಧ ಹುಟ್ಟಿದಾಗ 'ಪ್ರಕೃತಿಯಲ್ಲಿ ಕೋಲಾಹಲ ಉಂಟಾಯಿತು' ಎಂದು ಮುನಿ ಹೇಳುತ್ತಾನೆ. ಆದರೆ ಕೋಲಾಹಲ ಹುಟ್ಟುವುದು ಕೆಟ್ಟದ್ದಕ್ಕೇ ಹೊರತು ಒಳ್ಳೆಯದಕ್ಕಲ್ಲ ಎನ್ನುವ ಪರಿಜ್ಞಾನ ಆ ಜ್ಞಾನಿಗಿರಲಿಲ್ಲವೆ ? ಹೋಗಲಿ ಅರಮನೆಗೆ ಬಂದು ಮಗುವಿಗೆ ಸಿದ್ಧಾರ್ಥ ಎಂದು ಹೆಸರಿಡುವ ಮುನಿ 'ಈ ಮಗು ಹೆಚ್ಚು ದಿನ ಮಹಾರಾಜನಾಗಿರುವುದಿಲ್ಲ, ಜಗತ್ತಿಗೆ ಬೆಳಕಾಗುತ್ತಾನೆ, ಜ್ಞಾನದ ಜ್ಯೋತಿಯಾಗುತ್ತಾನೆ' ಎಂದು ಭವಿಷ್ಯ ಹೇಳುತ್ತಾನೆ. ಹೆಚ್ಚು ದಿನ ಹೋಗಲಿ, ಒಂದು ದಿನವೂ ಸಿದ್ಧಾರ್ಥ ಆತನ ಬದುಕಿನಲ್ಲಿ ಮಹಾರಾಜನಾಗಿರಲಿಲ್ಲ ಎನ್ನುವ ಸತ್ಯ ಎಲ್ಲರಿಗೂ ಗೊತ್ತು. ಮುನಿಯ ಬಾಯಲ್ಲಿ ಸುಳ್ಳು ಹೇಳಿಸುವ ಅಗತ್ಯವಿರಲಿಲ್ಲ. ಹೋಗಲಿ, ಮುನಿಯ ಭವಿಷ್ಯ ಕೇಳಿ ಕುಸಿದು ಬಿದ್ದ ಸಿದ್ಧಾರ್ಥನ ತಾಯಿ ಇದ್ದಕ್ಕಿದ್ದಂತೆ ಸಾಯುವುದು ಆಭಾಸಕಾರಿಯಾಗಿದೆ. ಯಾಕೆಂದರೆ ಮುನಿ ಹೇಳಿದ ಭವಿಷ್ಯದಲ್ಲಿ ಅಂತಹ ಹೃದಯಾಘಾತವಾಗುವಂತಹ ಆತಂಕಕಾರಿ ವಿಷಯವೇನಿರಲಿಲ್ಲ. ಹಾಗೆ ನೋಡಿದರೆ ನಾಟಕದ ಆರಂಭದಲ್ಲಿರುವ ರಾಜನಿಗೆ ಬಹುಪರಾಕ್ ಹೇಳುವ ದೃಶ್ಯ, ಬುದ್ಧ ಜನನದ ದೃಶ್ಯ ಹಾಗೂ ಮುನಿಯ ದಿವ್ಯದೃಷ್ಟಿ ಮತ್ತು ಭವಿಷ್ಯ ಹೇಳುವ ದೃಶ್ಯಗಳು ಈ ವೈಚಾರಿಕ ನಾಟಕಕ್ಕೆ ಅನಗತ್ಯವೆನಿಸುತ್ತವೆ. ಕೆಲವೊಮ್ಮೆ ವಿಪರ್ಯಾಸಗಳನ್ನೂ ಹುಟ್ಟಿಸುತ್ತವೆ. ಆರಂಭದ ಈ ದೃಶ್ಯಗಳನ್ನು ಬಿಟ್ಟಿದ್ದರೂ ನಾಟಕಕ್ಕೆ ಯಾವುದೇ ನ್ಯೂನತೆ ಉಂಟಾಗುತ್ತಿರಲಿಲ್ಲ. ವೈಚಾರಿಕತೆಯನ್ನು ಹೇಳುವ ಈ ನಾಟಕದಲ್ಲಿ ಈ ದಿವ್ಯದೃಷ್ಟಿ ಹಾಗೂ ಭವಿಷ್ಯ ಹೇಳುವ ಪರಿಕಲ್ಪನೆಗಳು ವಿರೋಧಾಭಾಸಗಳನ್ನು ಸೃಷ್ಟಿಸುವಂತಿವೆ.

ನಾಟಕದಾದ್ಯಂತ ಬುದ್ಧನ ತತ್ವಗಳು ಉಲ್ಲೇಖಗೊಂಡಿವೆ. ಬುದ್ಧನ ಪಂಚಶೀಲ, ಅಷ್ಟಾಂಗ ಮಾರ್ಗಗಳು, ಸೌಂದರ್ಯ ಮೀಮಾಂಸೆಗಳನ್ನು ಬುದ್ಧನಿಂದ ಬೋಧಿಸಲಾಗುತ್ತದೆ. ವೈಚಾರಿಕ ಮನೋಭಾವದವರಿಗೆ ಇದೆಲ್ಲಾ ಅರ್ಥವಾದರೂ ಜನಸಾಮಾನ್ಯರಿಗೆ, ಗ್ರಾಮೀಣ ಜನತೆಗೆ ತಲುಪುವುದು ಕಷ್ಟ. ಬೋಧನೆಗಾಗಿಯೇ ನಾಟಕವನ್ನು ಕಟ್ಟಿಕೊಟ್ಟರೆ ಅಂತಹ ಪ್ರಯತ್ನ ಯಶಸ್ವಿಯಾಗುವುದು ಅನುಮಾನ. ಬೋಧನೆಗಳನ್ನು ದೃಶ್ಯದ ಒಳಗೆ ಕಟ್ಟುವುದಕ್ಕೂ ಬಾಹ್ಯವಾಗಿ ಹೇರುವುದಕ್ಕೂ ವ್ಯತ್ಯಾಸವಿದೆ. ಉಪದೇಶ ಅಥವಾ ಬೋಧನೆ ಎಂದು ಪ್ರೇಕ್ಷಕರಿಗೆ ಅನುಮಾನ ಬಾರದ ಹಾಗೆ ನಾಟಕವನ್ನು ಪೂರಕ ದೃಶ್ಯ ಸೃಷ್ಟಿಗಳಿಂದ ದರ್ಶನಗೊಳಿಸಿದ್ದರೆ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಜನರನ್ನು ತಲುಪಬಹುದಾಗಿತ್ತು. ಅಂಬೇಡ್ಕರ್ ಕೃತಿಯನ್ನು ರಂಗರೂಪಗೊಳಿಸುವಾಗಲೇ ರಂಗಪ್ರಯೋಗದ ಸಾಧ್ಯತೆಗಳನ್ನು ನಿರ್ದೇಶಕರು ಅರಿತು ಬಳಸಿದ್ದರೆ 'ಬುದ್ಧನೆಡೆಗೆ' ನಾಟಕ ಕನ್ನಡ ರಂಗಭೂಮಿಗೆ ಒಂದು ಅಪರೂಪದ ಕೊಡುಗೆಯಾಗುತ್ತಿತ್ತು. ಅದೇನೇ ಇರಲಿ, ಬುದ್ಧನೆಡೆಗೆ ಜನ ಹೋಗಲು ಸಾಧ್ಯವಾಗುತ್ತೋ ಇಲ್ಲವೋ ಗೊತ್ತಿಲ್ಲ, ಆದರೆ ಜನರೆಡೆಗೆ ಬುದ್ಧನನ್ನು ಹಾಗೂ ಆತನ ಜೀವಪರ ತತ್ವಗಳನ್ನು ತೆಗೆದುಕೊಂಡು ಹೋಗುವ ಸಾರ್ಥಕ ಪ್ರಯತ್ನವನ್ನು ಮಾಡುವಲ್ಲಿ ಈ ನಾಟಕ ಯಶಸ್ವಿಯಾಗಿದೆ.

ಈ ನಾಟಕದಲ್ಲಿ ಕೆಲವೊಂದು ಸಮಕಾಲೀನ ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಬಹು ಮುಖ್ಯವಾಗಿ ಯುದ್ಧ ಮತ್ತು ನದಿ ನೀರಿನ ಹಂಚಿಕೆ. ಈ ಪ್ರಕ್ಷುಬ್ಧತೆ ಬಹುಶಃ ಎಲ್ಲ ಕಾಲಕ್ಕೂ ಇರುವಂತಹುದು. ಇಂತಹ ಸಮಸ್ಯೆ ಬುದ್ಧನ ಕಾಲದಲ್ಲೂ ಇತ್ತು ಹಾಗೂ ಇದನ್ನು

ಬಗೆಹರಿಸಲು ಯುದ್ಧಕ್ಕಿಂತ ಪರಸ್ಪರ ಮಾತುಕತೆ ಹಾಗೂ ಕೊಡುಕೊಳ್ಳುವ ಮನೋಭಾವ ಅಗತ್ಯವಿದೆ ಎಂದು ಸಿದ್ಧಾರ್ಥ ಪ್ರತಿಪಾದಿಸಿದ್ದು ಎಲ್ಲ ಕಾಲಕ್ಕೂ ಮಾದರಿಯಂತಿದೆ. 'ಬೆಂಕಿಯಿಂದ ಬೆಂಕಿಯನ್ನು ಆರಿಸಲು ಸಾಧ್ಯವಿಲ್ಲ, ಯುದ್ಧ ಎನ್ನುವುದು ಕೇಡನ್ನಲ್ಲದೆ ಬೇರೆ ಏನನ್ನೂ ಸಾಧಿಸದು, ದ್ವೇಷದಿಂದ ದ್ವೇಷ ಹುಟ್ಟುತ್ತದೆಯೇ ಹೊರತು 'ಪ್ರೀತಿಯಲ್ಲ' ಎನ್ನುವ ಸಿದ್ಧಾರ್ಥನ ದಾರ್ಶನಿಕ ಮಾತು ಬಹುಶಃ ಆಗಿನವರಿಗೂ ಅರ್ಥವಾಗಲಿಲ್ಲ, ಈಗಿನವರಿಗೂ ಅರ್ಥವಾಗಿಲ್ಲ. ಆದ್ದರಿಂದಲೇ ಈಗಲೂ ನೆಲ – ಜಲ ಕುರಿತ ವಿವಾದಗಳಾದರೆ ರಾಜ್ಯಗಳು ದೇಶಗಳು ಆಕ್ರಮಣದ ಮಾತನ್ನು ಆಡುತ್ತವೆ. ಯುದ್ಧಕ್ಕೆ ಸಿದ್ಧತೆಯನ್ನೂ ಮಾಡಿಕೊಳ್ಳುತ್ತವೆ. ಆದರೆ... ಸಿದ್ಧಾರ್ಥನ ಯುದ್ಧವಿರೋಧಿ ಕಾಳಜಿ ಹಾಗೂ ಪರಸ್ಪರ ಮಾತುಕತೆಯ ಮೂಲಕ ಎಂತಹ ಸಮಸ್ಯೆಗಳಿದ್ದರೂ ಬಗೆಹರಿಸಿಕೊಳ್ಳಲು ಹಲವಾರು ಸಾಧ್ಯತೆಗಳಿವೆ ಎಂಬ ಮಾತು ಸಾರ್ವಕಾಲಿಕ ಸತ್ಯವಾಗಿದ್ದು, ಈ ಸತ್ಯವನ್ನು 'ಬುದ್ಧನೆಡೆಗೆ' ನಾಟಕ ಪ್ರತಿಪಾದಿಸುತ್ತದೆ.

"ಧಮ್ಮಕ್ಕೆ ಉತ್ತರಾಧಿಕಾರಿಯ ಅನಿವಾರ್ಯತೆ ಇಲ್ಲ. ಮಗ, ಹೆಂಡತಿ, ತಾಯಿ... ರಕ್ತಸಂಬಂಧಿಗಳನ್ನು ಉತ್ತರಾಧಿಕಾರಿಯನ್ನಾಗಿ ಮಾಡಲಾಗದು. ಧಮ್ಮ ಎನ್ನುವುದು ಕುಟುಂಬ ರಾಜಕಾರಣವಾಗಬಾರದು. ಧರ್ಮ ಮತ್ತು ರಾಜಕಾರಣ ಒಂದೇ ನಾಣ್ಯದ ಎರಡು ಮುಖಗಳು. ಇವು ಎಂದೂ ಸ್ವಾರ್ಥಕ್ಕೆ ಬಳಕೆಯಾಗಕೂಡದು... ಧಮ್ಮಕ್ಕೆ ಧಮ್ಮವೇ ಉತ್ತರಾಧಿಕಾರಿ. ನನ್ನ ಧಮ್ಮ ಬಾಯಿಪಾಠವಲ್ಲ ಬಾಳ ಪಾಠ, ನನ್ನ ಧಮ್ಮ ನುಡಿಯಲ್ಲ ನಡತೆ, ನನ್ನ ಧಮ್ಮ ಲೀಲೆಯಲ್ಲ ಶೀಲ... ನಾನು ಮಾರ್ಗದಾತನೇ ಹೊರತು ಮುಕ್ತಿದಾತನಲ್ಲ..." ಎಂದು ಉತ್ತರಾಧಿಕಾರತ್ವದ ಪ್ರಶ್ನೆಗೆ ಬುದ್ಧ ಮಾರ್ಮಿಕವಾಗಿ ಉತ್ತರಿಸುತ್ತಾನೆ. ಈ ಮಾತು ಸಮಕಾಲೀನ ಸಂದರ್ಭದಲ್ಲಿ ಕುಟುಂಬ ರಾಜಕಾರಣ ಮಾಡುವ ಸ್ವಾರ್ಥ ರಾಜಕಾರಣಿಗಳಿಗೆ ಹಾಗೂ ತಮ್ಮ ಉತ್ತರಾಧಿಕಾರಿಗಳನ್ನು ಆಯ್ಕೆ ಮಾಡಿಯೇ ನಿರ್ಗಮಿಸುತ್ತಿರುವ ಮಠಾಧಿಪತಿಗಳಿಗೆ ಪಾಠ ಹೇಳುವಂತಿದೆ. ಬಹುಶಃ ಡಾ॥ ಅಂಬೇಡ್ಕರರು ಬುದ್ಧನ ನೆಪದಲ್ಲಿ ಸಮಕಾಲೀನ ಧರ್ಮ ಹಾಗೂ ರಾಜಕೀಯ ಸ್ವಾರ್ಥತೆಯನ್ನು ಸರಿಯಾಗಿ ಗ್ರಹಿಸಿ ಕೃತಿ ರಚಿಸಿದ್ದಾರೆ. ಅದು ಈ ನಾಟಕದಲ್ಲಿ ಪ್ರತಿಬಿಂಬಿತವಾಗಿದೆ.

ಡಾ॥ ಅಂಬೇಡ್ಕರ್ ಅವರ ವೈಚಾರಿಕ ದೃಷ್ಟಿಕೋನದಲ್ಲಿ ಬುದ್ಧನ ಆದರ್ಶಗಳನ್ನು ಹೇಳುವಂತಹ ಈ ನಾಟಕದ ಆಶಯ ಅನನ್ಯ. ಬುದ್ಧನ ಕುರಿತು ಮಿಥ್‌ಗಳನ್ನು ಒಡೆದು ಹಾಕಿ ಸತ್ಯಕ್ಕೆ ಹತ್ತಿರವಾದದ್ದನ್ನು ಹೇಳುವ ಪ್ರಯತ್ನ ಇಂದಿನ ಅಗತ್ಯವಾಗಿದೆ. ಹಿಂಸೆ, ಅಸಹನೆ, ಸ್ವಾರ್ಥ, ದುರಾಸೆಗಳೇ ತುಂಬಿರುವ ಪ್ರಸ್ತುತ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಬುದ್ಧನ ವಿವೇಕ ಮತ್ತು ಆದರ್ಶಗಳು ಮನುಕುಲದ ನೆಮ್ಮದಿಗೆ ಅಗತ್ಯವಾಗಿವೆ. ಈ ನಿಟ್ಟಿನಲ್ಲಿ ನಿರ್ದೇಶಕ ಗಿರೀಶ್‌ರವರ ರಂಗ ಪ್ರಯತ್ನವೂ ಶ್ಲಾಘನೀಯ. ಆದರೆ... ಈ ನಾಟಕದಲ್ಲಿ ವಿರೋಧಾಭಾಸಗಳು ಹುಟ್ಟಿಸುವಂತಹ ಸಂದೇಹಗಳನ್ನು ನಿವಾರಿಸಿ ಪೂರಕ ಸಮರ್ಥನೆಗಳನ್ನು ಕೊಟ್ಟಿದ್ದರೆ, ಸಾಂಪ್ರದಾಯಿಕ ನಿರೂಪಣಾ ಶೈಲಿಯನ್ನು ಬದಲಾಯಿಸಿ, ಆಧುನಿಕ ರಂಗಭೂಮಿಯ ರಂಗತಂತ್ರಗಳನ್ನು ಅಳವಡಿಸಿಕೊಂಡು ದೃಶ್ಯಗಳನ್ನು ಕಟ್ಟಿದ್ದರೆ, ನಾಟಕ ಇನ್ನೂ ಅದ್ಭುತವಾಗಿ ಮೂಡಿಬರಬಹುದಾಗಿತ್ತು. ಈ ಕುರಿತು ಮುಂದಿನ ರಂಗಪ್ರಯೋಗಗಳ ಸಂದರ್ಭದಲ್ಲಿ ಈ ನಾಟಕದ ಯುವ ನಿರ್ದೇಶಕ ಆಲೋಚಿಸುವುದು ಉತ್ತಮ.

ಅಭಿನಯದಲ್ಲಿ ಇನ್ನೂ ನಟರು ಪಳಗಬೇಕಿದೆ. ಬುದ್ಧನ ಪಾತ್ರಧಾರಿ ತನ್ನ ಅಭಿನಯ ಸಾಮರ್ಥ್ಯವನ್ನು ತುಂಬ ಮಿತಿಗೊಳಿಸಿಕೊಂಡಂತಿದೆ. ಸಿನೆಮಾಗಳಲ್ಲಿ ಕ್ಲೋಸ್‌ಅಪ್ ಶಾಟ್‌ಗಳಲ್ಲಿ ಅಭಿನಯಿಸುವಂತೆ ಶಿಶಿರ್ ಭಾರದ್ವಾಜ್ ಬುದ್ಧನಾಗಿ ನಟಿಸಿದ್ದಾರೆ. ಅಗತ್ಯ ಇರಲಿ ಬಿಡಲಿ ತೋರುಬೆರಳು ತೋರುವ ಮುಷ್ಟಿಯನ್ನು ಮುಖದ ಮುಂದಿರಿಸಿಕೊಂಡೇ ಮಾತಾಡುವ ಬುದ್ಧನ ನಟನೆ ಸೀಮಿತವೆನಿಸುತ್ತದೆ. ಬುದ್ಧನ ಪಾತ್ರಧಾರಿಯ ಅಭಿನಯ ಹಾಗೂ ಮಾತಿನ ಶೈಲಿ ನಾಟಕದಾದ್ಯಂತ ಏಕತಾನತೆಯನ್ನುಂಟುಮಾಡಿದೆ. ಇರುವುದರಲ್ಲಿ ಶುದ್ಧೋಧನ ಪಾತ್ರದ ದಿನೇಶ್‌ರವರ ನಟನೆ ಚೆನ್ನಾಗಿತ್ತಾದರೂ ಪಾತ್ರೋಚಿತ ಆಯ್ಕೆ ಎನ್ನಿಸುವಂತಿಲ್ಲ. ಬ್ರಾಹ್ಮಣನಾಗಿ ಸುಸಿಲ್ ಕಲಮಾರ್‌ರವರ ಅತಿಶಯದ ನಟನೆ ಚಪ್ಪಾಳೆ ಗಿಟ್ಟಿಸುವಲ್ಲಿ ಸಫಲವಾಗಿದೆ. ಅಂಗುಲಿಮಾಲ ಪಾತ್ರಧಾರಿಯ ಅಭಿನಯ ನೋಡುಗರ ನೆನಪಿನಲ್ಲಿ ಉಳಿಯುವಷ್ಟು ಸೊಗಸಾಗಿದೆ. ಗುಂಪು ಬಳಕೆಯಲ್ಲಿ ರಂಗಶಿಸ್ತು ಬೇಕಾಗಿದೆ. ಬ್ಲಾಕಿಂಗ್ ಮತ್ತು ಮೂವ್‌ಮೆಂಟ್‌ಗಳಲ್ಲಿ ಇನ್ನೂ ನಿಖರತೆ ಬೇಕಿದೆ. ಏನೇ ಆದರೂ ಗ್ರಾಮೀಣ ಪ್ರದೇಶದ ಯುವಕ ಯುವತಿಯರು ಒಂದು ನಾಟಕವನ್ನು ಕಟ್ಟಿದ ರೀತಿ ಪ್ರಶಂಸಾರ್ಹ.



ರವಿಶಂಕರ್‌ರವರ ಬೆಳಕಿನ ವಿನ್ಯಾಸ ದೃಶ್ಯಗಳನ್ನು ಸಮರ್ಥವಾಗಿ ಬೆಳಗಿದೆ. ಸೈಕ್‌ಅನ್ನು ಬಳಸಿ ಹುಣ್ಣಿಮೆಯನ್ನು ಸೃಷ್ಟಿಸಿದ ರೀತಿ ನೋಡುಗರ ಗಮನ ಸೆಳೆಯುವಂತಿದೆ. ಸಂಗೀತ ಮತ್ತು ಹಾಡುಗಳು ನಾಟಕದ ಅಗತ್ಯವಾಗಿವೆ ಯಾದರೂ ಹಾಡಿನ ಅರ್ಥಕ್ಕೂ ದೃಶ್ಯದ ಥೀಮಿಗೂ ಎಷ್ಟೋ ಸಲ ಸಂಬಂಧವೇ ಇಲ್ಲದಂತಿದೆ. ಹಾಡನ್ನು ಯಾವಾಗ ಎಷ್ಟು ಬಳಸಬೇಕು, ಹಾಗೂ ಹಾಡು-ಸಂಗೀತವನ್ನು ಕಥಾವಸ್ತುವಿಗೆ ನಿಷ್ಠಗೊಳಿಸಿ ಇನ್ನಷ್ಟು ಎಡಿಟ್ ಮಾಡಿದರೆ ಈ ನಾಟಕಕ್ಕೆ ಹೆಚ್ಚಿನ ಮೆರಗು ಬರಲು ಸಾಧ್ಯ. ಮುಂದಿನ ಪ್ರಯೋಗಗಳಲ್ಲಿ ಈ ಕೆಲವು ನ್ಯೂನತೆಗಳನ್ನು ಸರಿಪಡಿಸಿಕೊಂಡರೆ ಉತ್ತಮ ಪ್ರದರ್ಶನವಾಗಬಹುದಾದ ಎಲ್ಲ ಸಾಧ್ಯತೆಗಳೂ ಈ ನಾಟಕದಲ್ಲಿವೆ. ಮತ್ತು ಈ 'ಬುದ್ಧನೆಡೆಗೆ' ರೀತಿಯಲ್ಲಿ ಜನರಲ್ಲಿ ವಿವೇಕವನ್ನು ಹೆಚ್ಚಿಸುವಂತಹ ನಾಟಕಗಳ ಅಗತ್ಯ ಇದೆ. ಹಿಂಸಾತ್ಮಕ ಜಗತ್ತಿನಲ್ಲಿ ಮನುಷ್ಯತ್ವವನ್ನು ಹೇಳುವ ಬುದ್ಧ ಇಂದು ನಮಗೆ ಅಗತ್ಯ. ವಿಷಾದ, ನಿರಾಶೆಯ ಕಗ್ಗತ್ತಲು ತುಂಬಿದ ಸಮಾಜದಲ್ಲಿ ಬುದ್ಧನ ಬೆಳಕು ಬದಲಾವಣೆ ತರಬೇಕಿದೆ. ಅಗತ್ಯ ಪರಿಷ್ಕರಣೆಯೊಂದಿಗೆ ನಾಡಿನಾದ್ಯಂತ ಈ 'ಬುದ್ಧನೆಡೆಗೆ' ನಾಟಕ ಪ್ರದರ್ಶನಗೊಳ್ಳಬೇಕಿದೆ.

ನಾಟಕದ ಅಂತ್ಯಕ್ಕೆ ಬಳಸಲಾದ ಸೋಸಲೆ ಗಂಗಾಧರ್‌ರವರು ರಚಿಸಿದ ಬುದ್ಧನ ಈ ಸ್ತುತಿ ಗೀತೆ ತುಂಬ ಸೊಗಸಾಗಿ ಮೂಡಿಬಂದಿದೆ.

*ಹೇ ಭುವಿ ನೀ ಧನ್ಯಳಾದೆ, ಸಮ್ಮಾ ಸಂಬುದ್ಧನ ಹಡೆದು*
*ಹೇ ಭುವಿ ನೀ ಪಾವನಳಾದೆ ಸಮ್ಮಾ ಸಂಬುದ್ಧನು ನಡೆದು*
*ಹೇ... ಧರೇ ವಸುಂಧರೇ...*
*ನಿನ್ನಾ ಮೈತ್ರಿಗೆ ಸ್ಫೂರ್ತಿ ಯಾರೇ*
*ನಿನ್ನ ಕರುಣೆಗೆ ಸಾಟಿ ಯಾರೇ...*

*ಪಂಚ ಭೂತಗಳಿಗೂ ಪಂಚಶೀಲ ಬೋಧಿಸಿ*
*ಅಷ್ಟ ದಿಕ್ಕುಗಳಿಗೂ ಅಷ್ಟಾಂಗ ಮಾರ್ಗ ತಿಳಿಸಿ*
*ನಿನ್ನ ಒಡಲ ಜೀವಜಂತುಗಳನ್ನೆಲ್ಲಾ ನುಡಿಸಿ*
*ಧಮ್ಮ ಚಕ್ರ ಉರುಳಿಬಿಟ್ಟ, ಮುಕ್ತಿ ಮಾರ್ಗ ತೋರಿಸಿಕೊಟ್ಟ*
*ಧರಣಿ ದೇವಿ ನಿನ್ನಾ ವರ ಸುತನೇ*
*ದೇವಮಾನವರಿಗೂ ಗುರು ಬುದ್ಧನೇ.*

**ಶಶಿಕಾಂತ ಯಡಹಳ್ಳಿ**
'ಪ್ರಗತಿ ನಿವಾಸ', ಸಂಖ್ಯೆ – ೧೩೧, ರಾಮ ದೇವಸ್ಥಾನದ ಬೀದಿ
ದೊಮ್ಮಲೂರು ಹಳ್ಳಿ, ಬೆಂಗಳೂರು – ೫೬೦ ೦೭೧

# ಆಧುನಿಕ ಭಾರತದ ಪ್ರಥಮ ಶಿಕ್ಷಕಿ ಸಾವಿತ್ರಿಬಾಯಿ ಫುಲೆ



ಸಾವಿತ್ರಿಬಾಯಿಯವರು ಕ್ರಿಯಾಶೀಲ ಚಿಂತಕಿ ಮತ್ತು ವೈಜ್ಞಾನಿಕ ತಳಹದಿಯ ಮೇಲೆ ಸಮಾಜ ವಿಶ್ಲೇಷಿಸುವ ಸ್ತ್ರೀವಾದಿ, ಶಿಕ್ಷಣ ತಜ್ಞೆ ಹಾಗೂ ಹೋರಾಟಗಾರ್ತಿ. ಪ್ರಪಂಚದ ಎಲ್ಲ ಪರಿವರ್ತನೆಗಳ ಹಿಂದೆ ಒಂದು ಹೋರಾಟವಿರುತ್ತದೆ. ಆ ಹೋರಾಟದ ಹಿಂದೆ ಒಂದು ಚೇತನ ಇರುತ್ತದೆ. ಆ ಚೇತನ ಸ್ವತಂತ್ರವಾಗಿ ಆಲೋಚಿಸುವಂತಹದ್ದು. ತಾನು ತುಳಿಯುವ ದಾರಿ ಎಷ್ಟೇ ದುರ್ಗಮವಾಗಿದ್ದರೂ ಅದನ್ನು ಛಲಬಿಡದೆ ಭೇದಿಸುವುದು. ಇತರರಿಗೆ ಮಾರ್ಗ ತೋರಿಸುವುದು. ತನ್ನೆಲ್ಲ ದಣಿವರಿಯದ ನಿರಂತರ ಪ್ರಯತ್ನಗಳ ಮೂಲಕ ಸ್ವಂತಿಕೆ ಮತ್ತು ಸ್ವಾಭಿಮಾನ ಹುಟ್ಟುಹಾಕಿ ಹೊಸತನ್ನು ತರಲು ಹವಣಿಸುವುದು. ಜ್ಯೋತಿಬಾ ಹಾಗೂ ಸಾವಿತ್ರಿಬಾಯಿ ಅಂತಹ ಚೈತನ್ಯವುಳ್ಳ ಸ್ವಾಭಿಮಾನಿ ಹೋರಾಟಗಾರರಾಗಿದ್ದರು. ಸಮಾಜದಲ್ಲಿ ಬೇರುಬಿಟ್ಟ ಸಾಮಾಜಿಕ ಪರಂಪರೆಯನ್ನು ಬದಲಾಯಿಸುವ ನಿಟ್ಟಿನಲ್ಲಿ ದೃಢಸಂಕಲ್ಪ , ಸ್ವಂತಿಕೆ, ಸ್ವತಂತ್ರ ಚಿಂತನೆ ಮತ್ತು ಪರಿವರ್ತನೆಯ ಚಿಕಿತ್ಸಕ ಮನೋಭಾವ ಇವರಲ್ಲಿದ್ದವು. ಅಂತೆಯೇ ಅವರು ಸಾಮಾಜಿಕ ಪರಿವರ್ತನೆಯ ಹರಿಕಾರರಾದರು. ಹೊಸ ಮನ್ವಂತರದ ದಿಕ್ಸೂಚಿಯಾದರು.

"ಸಾವಿತ್ರಿಬಾಯಿ ಫುಲೆ ತನ್ನ ಕ್ರಾಂತಿಕಾರಿ ಪತಿ ಜ್ಯೋತಿಬಾ ಫುಲೆಯವರೊಂದಿಗೆ ಸರಿ ಸಮಾನವಾಗಿ ಹೋರಾಟ ಮಾಡಿ ಸಾಮಾಜಿಕ ಚಳುವಳಿಯ ತಿದಿಯನ್ನು ಒತ್ತಿದ್ದರೂ ಪಿತೃಪ್ರಧಾನ ವ್ಯವಸ್ಥೆ, ಲಿಂಗ ಅಸಮಾನತೆ ಮತ್ತು ಜಾತೀಯತೆಯ ಪ್ರಭಾವದಿಂದಾಗಿ ನಿರ್ಲಕ್ಷಿಸಲ್ಪಟ್ಟವರು. ಜ್ಯೋತಿಬಾ ಫುಲೆಯವರ ಪತ್ನಿ ಎಂಬುದರ ಹೊರತಾಗಿ ಅವರು ಹೊರಜಗತ್ತಿಗೆ ಪರಿಚಿತವಾದದ್ದು ಕಡಿಮೆಯೇ. ಆಧುನಿಕ ಭಾರತದ ಪ್ರಥಮ ಮಹಿಳಾ ಶಿಕ್ಷಕಿಯಾಗಿದ್ದು, ಸಾವಿತ್ರಿಬಾಯಿ ಮಹಿಳಾ ಮತ್ತು ಸಾರ್ವಜನಿಕ ಶಿಕ್ಷಣದ ಕ್ರಾಂತಿಕಾರಿ ಪ್ರತಿಪಾದಕಿಯಾಗಿದ್ದರು, ಮಹಿಳೆಯರ ವಿಮೋಚನೆಯ ಹರಿಕಾರರೂ, ಮಹಿಳಾ ಮರಾಠಿ ಕಾವ್ಯದ ಪ್ರವರ್ತಕರೂ, ಜಾತಿ ಮತ್ತು ಪಿತೃಪ್ರಧಾನ ವ್ಯವಸ್ಥೆಗಳನ್ನು ವಿರೋಧಿಸಿದ ಸ್ವತಂತ್ರ ಚಿಂತಕಿಯೂ, ಆಗಿದ್ದರು. ಆಧುನಿಕ ಭಾರತದ ಇತಿಹಾಸದಲ್ಲಿ ಸ್ತ್ರೀ ವಿಮೋಚಕಿ ಮತ್ತು ಮಹಿಳಾ ಹೋರಾಟಗಾರ್ತಿಯಾಗಿದ್ದ ಸಾವಿತ್ರಿಬಾಯಿಯಂತಹ ಪ್ರಮುಖರ ಕೊಡುಗೆಗಳು ದಾಖಲಾಗದಿರುವುದು ಅತ್ಯಂತ ಖೇದಕರ ಸಂಗತಿ. ಸಾವಿತ್ರಿಬಾಯಿಯವರ ಹೋರಾಟ ಮತ್ತು ನಿರಂತರ ಪರಿಶ್ರಮದ ಯಶೋಗಾಥೆಯನ್ನು ವಿಶಾಲ ದೃಷ್ಟಿಕೋನದಿಂದ ನೋಡುವುದು ಮತ್ತು ಅದನ್ನು ಮರಾಠಿಯೇತರ ಸಮುದಾಯಗಳಿಗೆ ತಲುಪಿಸುವದು ಅತೀ ಅವಶ್ಯವಾಗಿದೆ" ಎಂಬುದು ಬ್ರಜ್ ರಂಜನ್ ಮಣಿ ಅವರ ಅಭಿಮತ.

ಪಿತೃಪ್ರಧಾನ ವ್ಯವಸ್ಥೆ, ಜಾತೀಯತೆ ಮತ್ತು ಲಿಂಗ ಅಸಮಾನತೆಗಳಿಂದ ಸಾಮಾಜಿಕ ಶೋಷಣೆಗೆ ತುತ್ತಾಗಿ ಸಮಾಜದ ಅಂಚಿಗೆ ತಳ್ಳಲ್ಪಟ್ಟಿದ್ದ ಸ್ತ್ರೀ ಸಮುದಾಯದ ವಿಮೋಚನೆಗೆ ಹೋರಾಟ ಮಾಡಿದ ಆರಂಭಿಕ ಸ್ತ್ರೀವಾದಿ ಚಿಂತಕರಲ್ಲಿ ಸಾವಿತ್ರಿಬಾಯಿ ಪ್ರಮುಖರು. ಕತ್ತಲೆ ಯುಗವೆಂದೇ ಕರೆಯಲ್ಪಟ್ಟಿದ್ದ ೧೯ನೇ ಶತಮಾನದ ಪೂರ್ವಾರ್ಧ ಭಾರತದಲ್ಲಿ ಶಿಕ್ಷಕ ವೃತ್ತಿಯನ್ನಾರಂಭಿಸಿ ಸಮಾಜದ ಕಟ್ಟಕಡೆಯ ಅಸ್ಪೃಶ್ಯ ಹೆಣ್ಣು ಮಕ್ಕಳಿಗೆ ಶಿಕ್ಷಣ ನೀಡಲು ಆರಂಭಿಸಿದ್ದು ಕ್ರಾಂತಿಕಾರಕ ಕ್ರಮವಾಗಿದ್ದಿತು. ಸ್ತ್ರೀಯರು ಭೋಗಿಸಲು ಇರುವ ವಸ್ತುಗಳು ಮಾತ್ರ, ಅವರಿಗೆ ಶಿಕ್ಷಣ ನೀಡುವುದು ಶಿಕ್ಷಾರ್ಹ ಅಪರಾಧ, ಸ್ವಾತಂತ್ರ್ಯಕ್ಕೆ ಹಾಗೂ ಮಾನವ ಹಕ್ಕುಗಳಿಗೆ ಅವರು ಅರ್ಹರಲ್ಲವೆಂದು ಪರಿಗಣಿತವಾಗಿದ್ದ ಕಾಲಘಟ್ಟದಲ್ಲಿ ಸಾವಿತ್ರಿಬಾಯಿ ಮಹಿಳೆಯರಿಗೆ ಶಿಕ್ಷಣ ನೀಡಿ, ಜ್ಞಾನದ ಧಾರೆಯೆರೆದು ತಮ್ಮ ಶೋಷಿತ ಬದುಕಿನ ಬಗ್ಗೆ ಅವರು ಸ್ವ ಅರಿವು ಮೂಡಿಸಿಕೊಳ್ಳುವಂತೆ ಪ್ರೇರಣೆ ನೀಡಿರುವುದು ಬಹುಸಂಖ್ಯಾತ ಸ್ತ್ರೀಯರಿಗೆ ತಿಳಿಯದಿರುವುದು ವಿಷಾದನೀಯ ಸಂಗತಿ. ಭಾರತೀಯ ಸ್ತ್ರೀ ಶಿಕ್ಷಣಕ್ಕೆ ಪ್ರಥಮ ಶಿಕ್ಷಕಿಯಾಗಿ ಸಲ್ಲಿಸಿದ ಅನುಪಮ ಸೇವೆಯನ್ನು ಯಾವತ್ತಿಗೂ ನೆನಪಿಸಿಕೊಳ್ಳಬೇಕಿದೆ.

**ಸದಾಶಿವ ಮರ್ಜಿ**

ಮಹಾರಾಷ್ಟ್ರದ ಸತಾರಾ ಜಿಲ್ಲೆಯ ಖಂಡಾಲ ತಾಲೂಕಿನ ನೈಗಾಂವನಲ್ಲಿ ಅನುಕೂಲಸ್ಥ ಕೃಷಿಕ ಕುಟುಂಬದಲ್ಲಿ ಜನಿಸಿದ್ದ ಸಾವಿತ್ರಿಬಾಯಿಯವರು ಜ್ಯೋತಿಬಾ ಫುಲೆಯವರನ್ನು ವಿವಾಹವಾದಾಗ ೧೩ ವರ್ಷದ ಬಾಲಕಿ. ಪ್ರಾರಂಭದಲ್ಲಿ ಅನಕ್ಷರಸ್ಥೆಯಾಗಿದ್ದ ಸಾವಿತ್ರಿಬಾಯಿಯವರಿಗೆ ಸ್ವತಃ ಶಿಕ್ಷಣ ನೀಡಿದ ಜ್ಯೋತಿಬಾ ತಾವು ಮಹಾರ ಮತ್ತು ಮಾಂಗ ಅಸ್ಪೃಶ್ಯ ಜಾತಿಯ ಹೆಣ್ಣು ಮಕ್ಕಳಿಗಾಗಿ ೧೮೪೮ರಲ್ಲಿ ಪ್ರಾರಂಭಿಸಿದ್ದ ಶಾಲೆಯಲ್ಲಿ ಶಿಕ್ಷಕಿಯನ್ನಾಗಿ ನೇಮಿಸಿಕೊಂಡರು. ಜ್ಯೋತಿಬಾ ಅವರ ಸ್ನೇಹಿತೆಯಾಗಿದ್ದ ಸದಾಶಿವ ಗೋವಂಡೆ ಅವರ ಪತ್ನಿ ಸರಸ್ವತಿಬಾಯಿ ಗೋವಂಡೆ ಹಾಗೂ ಸಾವಿತ್ರಿಬಾಯಿ ಇಬ್ಬರೂ ಮಿಸ್ ಫೆರಾರ್ ಅವರು ಅಹಮದ್ ನಗರದಲ್ಲಿ ಅಮೆರಿಕನ್ ಮಿಶನ್ ನಡೆಸುತ್ತಿದ್ದ ಹೆಣುಮಕ್ಕಳ ಶಾಲೆಯಲಿ ವಿದ್ಯಾರ್ಜನೆ ಮಾಡಿ ಶಾಲಾ ಶಿಕ್ಷಕಿಯಾಗುವ ಅರ್ಹತೆ ಗಳಿಸಿದರು.

ಹಿಂದು ಸ್ತ್ರೀಯರ ವಿಮೋಚನೆ ಮಾಡುವದು ಮತ್ತು

ಶಿಕ್ಷಣದಿಂದ ವಂಚಿತರಾದವರಿಗೆ ಶಿಕ್ಷಣ ನೀಡಿ ಜ್ಞಾನಧಾರೆಯೆರೆದು ತಮ್ಮ ಶೋಷಣೆಯನ್ನು ತಾವೇ ಅರಿತುಕೊಂಡು ಅದರ ವಿರುದ್ಧ ಹೋರಾಡಲು ಸ್ತ್ರೀಯರನ್ನು ಸಜ್ಜುಗೊಳಿಸುವದು ಸಾವಿತ್ರಿಬಾಯಿ ಮತ್ತು ಜ್ಯೋತಿಬಾ ಅವರ ಪ್ರಥಮ ಆದ್ಯತೆಯಾಗಿತ್ತು. ಸಂಪೂರ್ಣ ಸ್ವಾಭಿಮಾನಿ ಬದುಕಿಗೆ ಶಿಕ್ಷಣ ಅವಶ್ಯವಾಗಿತ್ತು. ಸ್ತ್ರೀಯರು ತಮ್ಮ ಮಕ್ಕಳ ಭವಿಷ್ಯ ನಿರ್ಧರಿಸುವ ಮಾರ್ಗದರ್ಶಕರಾಗಿರುವದರಿಂದ ಅವರು ತಮ್ಮ ಕರ್ತವ್ಯದ ಬಗ್ಗೆ ಕಾಳಜಿ ಹೊಂದಿದ್ದರೆ ದೇಶ ಖಂಡಿತ ಪ್ರಗತಿ ಸಾಧಿಸುವದು ಎಂಬುದು ಸಾವಿತ್ರಿಬಾಯಿಯವರ ಅಭಿಪ್ರಾಯವಾಗಿತ್ತು. ಜಾತೀಯತೆ, ಲಿಂಗ ತಾರತಮ್ಯ ಮತ್ತು ಪಿತೃಪ್ರಾಧಾನ್ಯತೆಯೇ ಮೈವೆತ್ತಂತಿದ್ದ ೧೯ನೇ ಶತಮಾನದ ಭಾರತೀಯ ಸಮಾಜದಲ್ಲಿ ಸಾಮಾಜಿಕ ಪರಿವರ್ತನೆ ಎಂಬುದು ಅಷ್ಟು ಸುಲಭವಾಗಿಲ್ಲವೆಂಬ ಸತ್ಯದ ಮನವರಿಕೆ ಜ್ಯೋತಿಬಾ ಮತ್ತು ಸಾವಿತ್ರಿಬಾಯಿಯವರಿಗೆ ಆಗಿತ್ತು. ಆದ್ದರಿಂದಲೇ ಸಮಾಜದ ಕಟ್ಟ ಕಡೆಯ ಅಸ್ಪೃಶ್ಯ ಕೆಳಜಾತಿಯವರಾಗಿದ್ದ ಮಹಾರ ಮತ್ತು ಮಾಂಗ ಸಮುದಾಯದ ಹೆಣ್ಣುಮಕ್ಕಳಿಗೆ ೧೮೪೮ರಲ್ಲಿ ಪುಣೆಯ ಬುಧವಾರಪೇಟೆಯ ಭಿಡೆ ಎಂಬುವರ ಮನೆಯಲ್ಲಿ ಶಾಲೆಯನ್ನು ತೆರೆಯಲಾಯಿತು.




ಆ ಶಾಲೆ ಪ್ರಾರಂಭಿಸಲು ಸದಾಶಿವ ಗೋವಂಡೆ ಮತ್ತು ಸದಾಶಿವ ಗೋವಿಂದ ಹಾಟೆ ನೆರವು ನೀಡಿದರು. ಅಸ್ಪೃಶ್ಯರಿಗೆ ಶಾಲೆ ಪ್ರಾರಂಭ ಮಾಡಿದ್ದು ಸನಾತನವಾದಿಗಳ ಕಣ್ಣು ಕೆಂಪು ಮಾಡಿತು. ಅದನ್ನು ಅವರು ಕಠೋರವಾಗಿ ವಿರೋಧಿಸಿದರು. ಈ ಘಟನೆಯು ಪುಣೆಯಲ್ಲಿ ತೀವ್ರಗತಿಯಲ್ಲಿ ಸಾಮಾಜಿಕ ಸಂಚಲನವನ್ನು ಉಂಟುಮಾಡಿತು. ತಮ್ಮ ಹೆಂಡತಿಗೆ ಶಿಕ್ಷಣ ನೀಡಿ ಶಾಲಾ ಶಿಕ್ಷಕಿಯನ್ನಾಗಿ ಮಾಡಿದ್ದಲ್ಲದೆ ಅಸ್ಪೃಶ್ಯ ಮಹಾರ ಮತ್ತು ಮಾಂಗ ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡಲು ಪ್ರಾರಂಭಿಸಿದ್ದರಿಂದ ಸಂಪ್ರದಾಯಸ್ಥರು ಕೆಂಡಾಮಂಡಲವಾದರು. ಜ್ಯೋತಿಬಾ ಫುಲೆಯವರ ಕುಟುಂಬವನ್ನು ಸಮಾಜದಿಂದ ಬಹಿಷ್ಕರಿಸ ಲಾಗುವದೆಂದು ಅವರ ತಂದೆಗೆ ಎಚ್ಚರಿಕೆ ನೀಡಲಾಯಿತು. ಇದರಿಂದ ತೀವ್ರವಾಗಿ ನೊಂದ ಗೋವಿಂದರಾವ್ ಶಾಲೆಯನ್ನು ಮುಚ್ಚಬೇಕೆಂದು ಆಜ್ಞಾಪಿಸಿದರು. ಅಲ್ಲದೆ ಮನೆ ಬಿಟ್ಟುಹೋಗಲು ಸೂಚಿಸಿದರು. ತಾವು ನಂಬಿದ್ದ ಮೌಲ್ಯಕ್ಕಾಗಿ ಶ್ರಮಿಸುತ್ತಿದ್ದ ಜ್ಯೋತಿಬಾ ಹೆಂಡತಿ ಸಾವಿತ್ರಿಬಾಯಿಯೊಂದಿಗೆ ಉಟ್ಟ ಬಟ್ಟೆಯೊಂದಿಗೆ ತಂದೆಯ ಇಚ್ಛೆಗೆ ವಿರುದ್ಧವಾಗಿ ಮನೆ ಬಿಟ್ಟು ಹೊರಟರು.

ಸಂಪ್ರದಾಯಸ್ಥರ ತೀವ್ರ ವಿರೋಧದ ನಡುವೆಯೂ ಪ್ರಾರಂಭಿಸಿದ ಶಾಲೆಯ ಉಸ್ತುವಾರಿಯೊಂದಿಗೆ ಶಿಕ್ಷಕಿಯ ಜವಾಬ್ದಾರಿಯನ್ನು ಸಾವಿತ್ರಿಬಾಯಿ ನಿಭಾಯಿಸಬೇಕಾಗಿತ್ತು. ಶಾಲೆ ಆರಂಭಿಸಿ ಶಿಕ್ಷಣವನ್ನು ಅಸ್ಪೃಶ್ಯರಿಗೆ ನೀಡುವುದು ಧರ್ಮಕ್ಕೆ ಮಾಡಿದ ಅಪಚಾರ, ಅಪವಿತ್ರ ಎಂದು ಬೊಬ್ಬೆ ಹಾಕಿದ ಸನಾತನವಾದಿಗಳು ಸಾವಿತ್ರಿಬಾಯಿ ಶಾಲೆಗೆ ಹೋಗುವಾಗ ಮಣ್ಣು, ಕಲ್ಲು ತೂರಿದರು, ಸೆಗಣಿ ಎರಚಿದರು. ತಮ್ಮ ಮೇಲೆ ನಡೆಯುವ ಈ ಹಿಂಸೆಗೆ ಗೊಣಗದೆ, ಎದೆಗುಂದದೆ ತಾವು ಕೈಗೊಂಡ ಕಾರ್ಯದ ಸಿದ್ಧಿಗಾಗಿ ಸಾವಿತ್ರಿಬಾಯಿ ಶ್ರಮಿಸಲು ಮನಸ್ಸನ್ನು ಗಟ್ಟಿಮಾಡಿಕೊಂಡರು.

ಇವರು ಶಾಲೆಗೆ ಹೋಗುವಾಗ ಕೈಯಲ್ಲಿ ಒಂದು ಸೀರೆ ಗಂಟನ್ನು ಕಂಕುಳಲ್ಲಿ ಇಟ್ಟುಕೊಂಡು ಹೋಗುತ್ತಿದ್ದರು. ಏಕೆಂದರೆ ಪುಣೆಯ ಬೀದಿಯಲ್ಲಿ ನಡೆದು ಶಾಲೆಗೆ




# ಘನತೆ

ಕುದಿವ ಹಾಲಿಗೆ ಬಿದ್ದ ಹಾರುನೊಣ
ತಪ್ಪದಾರದು ಎಂದರೆ
ಒಪ್ಪ ಓರಣದ ಮಾತು
ಬಡಿವಾರದ ಬೊಬ್ಬೆಯಾದೀತು

ಬಗೆಯ ಬೇಗುದಿಯೊಳಗೆ
ಜಗದ ನಗೆಯೆಂಬುದು ಹಾಲಾಹಲ
ಉತ್ತರಿಸಿದರೆ ಹುಳಿದೇಗು
ನಿತ್ತರಿಸಿದರೆ ನೀಲಕಂಠ

ಆತ್ಮಮರುಕದಳಲಿನಲ್ಲಿ
ಮುಗಿತಾಯದ ಜಾರುಬಂಡೆ
ಅಡ್ಡನಿಂತರೆ ಬೆಟ್ಟ
ಮೇಲೇರಬೇಕು ಅಡಿಮೆಟ್ಟಿ
ಸಿಗದಿದ್ದರೂ ಆಕಾಶ
ಸೀಮಾಂತ ಸೀಮೆಯೆಲ್ಲಾ ಬಟಾಬಯಲು

ಕಂಡದ್ದು ಕಣ್ಣ ಬಲ
ಕಾಣದ್ದು ಮಣ್ಣ ಹೊಲ
ಕುರುಹುಗಳೆಲ್ಲ ಅರಿವಿನ ದಾರಿ
ಅರಿತೇನೆಂಬುದು ಮರೆವಿನ ಮಾರಿ

ಕೂಗಳತೆಯ ಕರುಳ ಕರೆಗೆ
ಕರಗುವುದು ತಾಯ ಗುಣ
ಮಣಿಯುವುದು ಮಣ್ಣ ಋಣ

ಭಯಪಡದೆ ಕತ್ತಲಿಗೆ
ಹಚ್ಚಬೇಕು ಹಣತೆ
ಕಂಗೆಡದೆ ಬತ್ತಲೆಗೆ
ಮೆಚ್ಚುವುದು ಘನತೆ

**ಡಾ॥ ಎಸ್. ಜಿ. ಸಿದ್ಧರಾಮಯ್ಯ**
ಎಸ್-೧೩೨, ದೀಪ್ತಿ ಅಪಾರ್ಟ್‌ಮೆಂಟ್ಸ್, ಎಫ್-೨
ಕಿರ್ಲೋಸ್ಕರ್ ಕಾಲೋನಿ, ೧ನೇ ಅಡ್ಡರಸ್ತೆ, ಬಸವೇಶ್ವರನಗರ
ಬೆಂಗಳೂರು – ೫೬೦ ೦೭೯

ಹೋಗುವಾಗ ಎಸೆದ ಸೆಗಣಿಯಿಂದ ಕೊಳೆಯಾದ ಸೀರೆಯನ್ನು ಬದಲಿಸಿ ಮತ್ತೊಂದು ಸೀರೆಯನ್ನುಟ್ಟು ಮಕ್ಕಳಿಗೆ ಪಾಠ ಮಾಡುತ್ತಿದ್ದರು. ೧೮೫೧ರ ಜುಲೈ ೩ರಂದು ಪುಣೆಯ ಬುಧವಾರಪೇಟೆಯಲ್ಲಿರುವ ಅಣ್ಣಾಸಾಹೇಬ ಚಿಪಳೂಣಕರರ ಮನೆಯಲ್ಲಿ ಎರಡನೆಯ ಶಾಲೆಯನ್ನು ಪ್ರಾರಂಭಿಸಿದರು. ಶಾಲೆಯ ಜವಾಬ್ದಾರಿಯನ್ನು ನಿಭಾಯಿಸಲು ಜಗನ್ನಾಥ, ಸದಾಶಿವ, ಕೇಶವ ಶಿವರಾಮ ಜೋಶಿ, ಅಣ್ಣಾಸಾಹೇಬ ಪ್ರಬುದ್ಧೆ, ವಿಷ್ಣು ಮೋರೇಶ್ವರ ಭಿಡೆ, ಬಾಪುರಾವಜೀ ಮಂಡೆ, ಕೃಷ್ಣಶಾಸ್ತ್ರಿ ಚಿಮ್ಲಾಂಟಕರ ಹಾಗೂ ವಿಷ್ಣು ಶಾಸ್ತ್ರಿ ಪಂಡಿತ ಅವರನ್ನೊಳಗೊಂಡ ಸಮಿತಿಯೊಂದನ್ನು ನೇಮಿಸಲಾಯಿತು.

ಎಂಟು ಜನ ಹೆಣ್ಣುಮಕ್ಕಳಿಂದ ಪ್ರಾರಂಭಿಸಿದ ಶಾಲೆಗೆ ೪೮ ಜನ ಸೇರಿಕೊಳ್ಳಲು ಬಹಳ ಸಮಯ ಬೇಕಾಗಲಿಲ್ಲ. ಶಾಲೆಯ ಉಸ್ತುವಾರಿ ವಹಿಸಿಕೊಂಡಿದ್ದ ಸಾವಿತ್ರಿಬಾಯಿಯವರ ಕಠಿಣ ಪರಿಶ್ರಮ, ನಿರಂತರ ಹೋರಾಟ ಹಾಗೂ ಶ್ರದ್ಧೆಯ ಫಲವಾಗಿ ಶಾಲೆ ಪ್ರಗತಿ ಕಂಡಿತು.

ಮಾರ್ಚ್ ೧೫, ೧೮೫೨ರಲ್ಲಿ ವಿಠ್ಠಲ್‌ಪೇಟೆಯಲ್ಲಿ ಮತ್ತೊಂದು ಶಾಲೆಯನ್ನು ಆರಂಭಿಸಿದರು. ಈ ಕಾರ್ಯಕ್ಕಾಗಿ ಜ್ಯೋತಿಬಾ ಫುಲೆ ದಂಪತಿಯನ್ನು ನವೆಂಬರ್ ೧೬, ೧೮೫೨ರಂದು ಸನ್ಮಾನಿಸಲಾಯಿತು. ಪುಣೆಯ ಸ್ಕಾಟಿಷ್ ಮಿಶನರಿ ಶಿಕ್ಷಕ ವೃತ್ತಿಯನ್ನು ಆರಂಭಿಸಿದ ಜ್ಯೋತಿಬಾ ಫುಲೆ ಅವರೊಂದಿಗೆ ಸಾವಿತ್ರಿಬಾಯಿ ಅವರು ಅದೇ ಶಾಲೆಯ ಆವರಣದಲ್ಲಿ ಜುಲೈ, ೧೮೫೪ರಲ್ಲಿ ಹೆಣ್ಣುಮಕ್ಕಳ ವಸತಿ ಶಾಲೆಯನ್ನು ಆರಂಭಿಸಿದರು.

ಕೇವಲ ಶಿಕ್ಷಣದಿಂದ ಮಾತ್ರ ಮಹಿಳೆಯರ ಪ್ರಗತಿ ಸಾಧ್ಯವಿಲ್ಲವೆಂದು ಭಾವಿಸಿದ್ದ ಇವರು ಮಹಿಳೆಯರಲ್ಲಿ ಸ್ವಾಭಿಮಾನ ಮತ್ತು ಸ್ವಂತಿಕೆಯನ್ನು ಬೆಳೆಸಿದರು. ೧೯ನೇ ಶತಮಾನದಲ್ಲಿ ಬಾಲ್ಯ ವಿವಾಹಗಳು ಸಾಮಾನ್ಯವಾಗಿದ್ದವು. ವಿಧವೆಯರ ಸಂಖ್ಯೆ ಗಣನೀಯ ಪ್ರಮಾಣದಲ್ಲಿತ್ತು. ವಿಧವೆಯರ ಸಂಕಷ್ಟ ಮತ್ತು ಯಾತನಾಮಯ ಬದುಕಿನ ಒಳಸುಳಿಗಳನ್ನು ಅರ್ಥೈಸಿಕೊಂಡಿದ್ದ ಈಕೆ ವಿಧವೆಯರ ತಲೆ ಬೋಳಿಸದಂತೆ ಕ್ಷೌರಿಕರ ಮೇಲೆ ಪ್ರಭಾವ ಬೀರಿ ಅವರಿಂದ ಕ್ಷೌರ ಬಹಿಷ್ಕಾರ ಮಾಡಿಸಲು ಮುಂದಾದರು. ವಿಧವೆಯರಿಗೆ ರಕ್ಷಣೆ ಇರಲಿಲ್ಲ. ಪುರುಷರ ಕೈಯಲ್ಲಿ ನಲುಗಿಹೋಗಿದ್ದರು. ವಿಧವೆಯರು ಬಸಿರಾಗಿ ಅನುಭವಿಸುವ ತಲ್ಲಣಗಳು ಮತ್ತು ಸಮಾಜ ವಿಧಿಸುವ ಸಾಮಾಜಿಕ ಬಹಿಷ್ಕಾರದ ಅರಿವಿದ್ದ ಫುಲೆ ಮತ್ತು ಅವರ ಪತ್ನಿ ಇಬ್ಬರೂ ವಿಧವೆಯಾಗಿದ್ದು ಬಸುರಿಯಾದವರಿಗೆ ಹೆರಿಗೆ ಮಾಡಿಸಲು 'ಡೆಲಿವರಿ ಹೋಮ್' ಪ್ರಾರಂಭಿಸಿದರು. ಅದಕ್ಕೆ 'ಬಾಲ ಹತ್ಯಾ ಪ್ರತಿಬಂಧಕ ಗೃಹ' ಎಂಬ ಹೆಸರಿಟ್ಟರು. ಈ ಸಂದರ್ಭದಲ್ಲಿಯೇ ಒಂದು ಘಟನೆ ಸಂಭವಿಸಿತು. ಪುರುಷರ ಒತ್ತಾಯಕ್ಕೆ ಮಣಿದು ಬಸುರಿಯಾಗಿದ್ದ ವಿಧವೆಯೊಬ್ಬಳು ಸಮಾಜದ ಕೆಂಗಣ್ಣಿನಿಂದ ತಪ್ಪಿಸಿಕೊಳ್ಳಲು ಆತ್ಮಹತ್ಯೆಗೆ ಪ್ರಯತ್ನಿಸಿ ವಿಫಲಳಾಗಿ ಬದುಕುಳಿದಿದ್ದಳು. ಅವಳಿಗೆ ರಕ್ಷಣೆ ನೀಡಿ ಅವಳಿಂದ ಹುಟ್ಟಿದ ಗಂಡುಮಗುವನ್ನು ಮಕ್ಕಳಿಲ್ಲದ ಫುಲೆ ದಂಪತಿ ದತ್ತು ಸ್ವೀಕರಿಸಿ ಸಾಕಿ ಸಲುಹಿ ಆತನನ್ನು ಡಾಕ್ಟರನನ್ನಾಗಿ ಮಾಡಿದರು. ಆತನೇ ಡಾ॥ ಯಶವಂತ ಫುಲೆ. ಈ 'ಡೆಲಿವರಿ ಹೋಮ್'ಅನ್ನು ಸಾವಿತ್ರಿಬಾಯಿಯವರೇ ನಡೆಸಿಕೊಂಡುಹೋದರು. ಅಲ್ಲಿ ಹುಟ್ಟಿದ ಮಕ್ಕಳನ್ನು ಸಾಕಿ ಸಲುಹಿದರು.



## ಮಳೆ

ಮಳೆಯಿಂದ
ಮೈ ತೋಯಿಸಿಕೊಂಡ
ಮಗುವನು
ಬೈದರು ತಂದೆ;
ಸೆರಗಿನಿಂದ ತಲೆಯೊರೆಸಿದ
ತಾಯಿಯೂ ಬೈದಳು
'ಮಳೆ'ಯನ್ನು।

**ಡಾ॥ ವಿ. ಫುಗಳೇಂದಿ**
ಬಳ್ಳಾರಿ

ನೀರನ್ನು ಜೀವಜಲ ಎನ್ನುತ್ತಾರೆ. ನೀರಿನಂತಹ ಮೂಲಭೂತ ಸೌಲಭ್ಯದಿಂದ ವಂಚಿತರಾಗಿದ್ದ ಮತ್ತು ಸಾರ್ವಜನಿಕ ಕೆರೆ-ಕಟ್ಟೆ, ಬಾವಿಗಳಿಂದ ಮುಕ್ತವಾಗಿ ನೀರು ಪಡೆಯಲು ನಿರ್ಬಂಧಕ್ಕೊಳಗಾಗಿದ್ದ ಅಸ್ಪೃಶ್ಯರಿಗೆ ಪತಿ ಫುಲೆಯವರೊಂದಿಗೆ ಬುಧವಾರಪೇಟೆಯ ತಮ್ಮ ಮನೆಯಲ್ಲಿದ್ದ ಬಾವಿಯನ್ನು ೧೮೬೮ರಲ್ಲಿ ಮುಕ್ತಗೊಳಿಸಿದರು. ೧೮೫೨ರಲ್ಲಿ ಮಹಿಳಾ ಸೇವಾ ಮಂಡಲವನ್ನು ಆರಂಭಿಸಿ ಅದರ ಮೂಲಕ ಮಹಿಳೆಯರಲ್ಲಿ ಮಾನವ ಹಕ್ಕುಗಳ ಬಗ್ಗೆ ಅರಿವು ಮೂಡಿಸಲು ಶ್ರಮಿಸಿದರು. ೧೮೭೬ರಿಂದ ೧೮೯೮ರ ನಡುವೆ ಸಂಭವಿಸಿದ ಬರಗಾಲದ ಪರಿಸ್ಥಿತಿಯಲ್ಲಿ ಹಗಲು ರಾತ್ರಿಯೆನ್ನದೆ ಸಾವಿತ್ರಿಬಾಯಿ ಗಂಜೀ ಕೇಂದ್ರ ಆರಂಭಿಸಿ ಸಂತ್ರಸ್ತ ಕುಟುಂಬದವರಿಗೆ ನೆರವು ನೀಡಿದರು. ಫುಲೆ ಸ್ಥಾಪಿಸಿದ್ದ ಸತ್ಯಶೋಧಕ ಸಮಾಜದ ಚಟುವಟಿಕೆಗಳಲ್ಲಿ ತಮ್ಮನ್ನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದ ಸಾವಿತ್ರಿಬಾಯಿಯವರು ವೈಚಾರಿಕ ಚಿಂತನೆಯ ಮೂಲಕ ಸಾಮಾಜಿಕ ಪರಿವರ್ತನೆ ತರಲು ತೀವ್ರವಾಗಿ ಶ್ರಮಿಸಿದರು.

ಸಾವಿತ್ರಿಬಾಯಿಯವರು ಆಧುನಿಕ ಭಾರತದ ಕ್ರಿಯಾಶೀಲ ಚಿಂತಕಿಯಾಗಿದ್ದರು, ಪ್ರಬುದ್ಧ ಸ್ತ್ರೀವಾದಿಯಾಗಿದ್ದರು. ಆರಂಭಿಕ ಹಂತದಲ್ಲಿ ಭಾರತೀಯ ಸಮಾಜದಲ್ಲಿ ಸ್ತ್ರೀ ಪುರುಷ ತಾರತಮ್ಯದ ವಿರುದ್ಧ ಧ್ವನಿಯೆತ್ತಿದ್ದ ಪಂಡಿತಾ ರಮಾಬಾಯಿ, ತಾರಾಬಾಯಿ ಸಿಂಧೆ ಅವರಂತೆಯೇ ಸ್ತ್ರೀ ಶೋಷಣೆ ಹಾಗೂ ವಿಮೋಚನೆಗೆ ಕೊಡುಗೆ ನೀಡಿದರು. ಸಾವಿತ್ರಿಬಾಯಿಯವರು ಪದ್ಯ ರಚಿಸಿದ್ದಲ್ಲದೆ, 'ಕಾವ್ಯ ಫುಲೆ' ಎಂಬ ಪದ್ಯ ಸಂಕಲನವನ್ನು ೧೮೫೪ರಲ್ಲಿ ಪ್ರಕಟಿಸಿದ್ದರು. ಈ ಪದ್ಯಗಳಲ್ಲಿ ಸ್ತ್ರೀಯರ ಶಿಕ್ಷಣ, ಪರಿಸರ, ನಿಸರ್ಗ, ಜಾತಿ ಪದ್ಧತಿ ಹಾಗೂ ಲಿಂಗ ತಾರತಮ್ಯದ ಬಗ್ಗೆ ಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದರು. 'ಬಾವನ್ ಕಶಿ ಸುಬೋಧ್ ರತ್ನಾಕರ್'ಅನ್ನು ೧೮೯೩ರಲ್ಲಿ ರಚಿಸಿ ಪ್ರಕಾಶಿಸಿದ್ದರು. ಸಾವಿತ್ರಿಬಾಯಿಯವರು 'ಖರ್ಜ' ಎಂಬ ಪ್ರಬಂಧ ರಚಿಸಿ ಹಬ್ಬ ಹರಿದಿನ ಆಚರಿಸಲು ಸಾಲ ಮಾಡುವ ಮೂಲಕ ಸಾಲದ ಜಾಲದಲ್ಲಿ ಸಿಕ್ಕಿ ನರಳುವವರ ಸ್ಥಿತಿಯನ್ನು ಬಣ್ಣಿಸಿದರು.

ಸಾವಿತ್ರಿಬಾಯಿಯವರು ಕ್ರಿಯಾಶೀಲ ಚಿಂತಕಿ ಮತ್ತು ವೈಜ್ಞಾನಿಕ ತಳಹದಿಯ ಮೇಲೆ ಸಮಾಜ ವಿಶ್ಲೇಷಿಸುವ ಸ್ತ್ರೀವಾದಿ, ಶಿಕ್ಷಣ ತಜ್ಞೆ ಹಾಗೂ ಹೋರಾಟಗಾರ್ತಿ. ಪ್ರಪಂಚದ ಎಲ್ಲ ಪರಿವರ್ತನೆಗಳ ಹಿಂದೆ ಒಂದು ಹೋರಾಟವಿರುತ್ತದೆ. ಆ ಹೋರಾಟದ ಹಿಂದೆ ಒಂದು ಚೇತನ ಇರುತ್ತದೆ. ಆ ಚೇತನ ಸ್ವತಂತ್ರವಾಗಿ ಆಲೋಚಿಸುವಂತಹದ್ದು. ತಾನು ತುಳಿಯುವ ದಾರಿ ಎಷ್ಟೇ ದುರ್ಗಮವಾಗಿದ್ದರೂ ಅದನ್ನು ಛಲಬಿಡದೆ ಭೇದಿಸುವುದು. ಇತರರಿಗೆ ಮಾರ್ಗ ತೋರಿಸುವುದು. ತನ್ನೆಲ್ಲ ದಣಿವರಿಯದ ನಿರಂತರ ಪ್ರಯತ್ನಗಳ ಮೂಲಕ ಸ್ವಂತಿಕೆ ಮತ್ತು ಸ್ವಾಭಿಮಾನ ಹುಟ್ಟುಹಾಕಿ ಹೊಸತನ್ನು ತರಲು ಹವಣಿಸುವುದು. ಜ್ಯೋತಿಬಾ ಹಾಗೂ ಸಾವಿತ್ರಿಬಾಯಿ ಅಂತಹ ಚೈತನ್ಯವುಳ್ಳ ಸ್ವಾಭಿಮಾನಿ ಹೋರಾಟಗಾರರಾಗಿದ್ದರು. ಸಮಾಜದಲ್ಲಿ ಬೇರುಬಿಟ್ಟ ಸಾಮಾಜಿಕ ಪರಂಪರೆಯನ್ನು ಬದಲಾಯಿಸುವ ನಿಟ್ಟಿನಲ್ಲಿ ದೃಢಸಂಕಲ್ಪ, ಸ್ವಂತಿಕೆ, ಸ್ವತಂತ್ರ ಚಿಂತನೆ ಮತ್ತು ಪರಿವರ್ತನೆಯ ಚಿಕಿತ್ಸಕ ಮನೋಭಾವ ಇವರಲ್ಲಿದ್ದವು. ಅಂತೆಯೇ ಅವರು ಸಾಮಾಜಿಕ ಪರಿವರ್ತನೆಯ ಹರಿಕಾರರಾದರು. ಹೊಸ ಮನ್ವಂತರದ ದಿಕ್ಸೂಚಿಯಾದರು.

**ಸದಾಶಿವ ಮರ್ಜಿ**
ರಸೋನಿ ಬಿಲ್ಡಿಂಗ್, ಬಾರಾಕೊಟ್ರಿ ರಸ್ತೆ, ಧಾರವಾಡ - ೫೮೦ ೦೦೧



ಆಹಾರಧಾನ್ಯ ಬೆಳೆ ಬೆಳೆದ ರೈತರಿಗಿಂತ ಹತ್ತಿ, ಕಬ್ಬು, ಶೇಂಗಾ, ವನಿಲ, ಕಾಫಿ, ಕಾಳುಮೆಣಸು ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆಯುವ ರೈತರ ನಡುವೆ ಆತ್ಮಹತ್ಯೆ ಸಂಖ್ಯೆ ಜಾಸ್ತಿ ಇದೆ. ಮುಂಗಾರು ಕೃಷಿಗೆ ಬಹು ಮುಖ್ಯವಾದರೂ, ಮುಂಗಾರಿನ ವೈಫಲ್ಯ ಕೃಷಿಕರ ಆತ್ಮಹತ್ಯೆಗೆ ಕಾರಣವಲ್ಲ. ವಾಣಿಜ್ಯ ಬೆಳೆಗಳನ್ನು ಬೆಳೆದವರನ್ನು ಕಾಡುವ ಸಾಲ, ಅತಿಯಾದ ವಾಣಿಜ್ಯೀಕರಣ, ಹೆಚ್ಚುತ್ತಿರುವ ಬಂಡವಾಳದ ಖರ್ಚು, ನೀರಿನ ಬಳಕೆ, ಬೆಲೆಗಳಲ್ಲಿನ ಏರುಪೇರುಗಳಿಂದ ರೈತರ ಆತ್ಮಹತ್ಯೆಗಳು ಹೆಚ್ಚುತ್ತಿವೆ. ಇವೆಲ್ಲದರ ಮೂಲ ಸರ್ಕಾರದ ಯೋಜನೆಗಳೇ. ಇವಿಷ್ಟನ್ನು ಗಮನಿಸಿಯಾದ ಮೇಲೆ, ಈಗ ಬರ ಬಂದರೆ ಏನಾದೀತೆಂದು ನೀವೇ ಯೋಚಿಸಿ. ಜೂನ್, ಆಗಸ್ಟ್ ಮತ್ತು ಸೆಪ್ಟೆಂಬರ್‌ಗಿಂತ ಹೆಚ್ಚಾಗಿ ಜುಲೈನಲ್ಲಿ ಬರುವ ಶೇಕಡ ೫೦ರಷ್ಟು ಮುಂಗಾರಿನ ಮಳೆ ಬಹು ಮುಖ್ಯವಾದದ್ದು. ಈ ಅನಿಶ್ಚಿತತೆಯ ನಡುವೆ ರೈತರ ಆತ್ಮಹತ್ಯೆಗಳು ಕಡಿಮೆಯಾದವೋ ಇಲ್ಲವೋ ಎಂದು ಲೆಕ್ಕ ಇಡುವವರು ಯಾರು ?

# ಮಹಾರಾಷ್ಟ್ರದಲ್ಲಿ ೬೦,೦೦೦ ಗಡಿದಾಟಿದ ರೈತರ ಆತ್ಮಹತ್ಯೆಗಳು



ರಾಷ್ಟ್ರೀಯ ಅಪರಾಧ ದಾಖಲಾತಿ ಕಾರ್ಯಾಲಯ (NCRB) ಬಿಡುಗಡೆಗೊಳಿಸಿದ ಇತ್ತೀಚಿನ ಅಂಕಿಅಂಶಗಳ ಪ್ರಕಾರ, ೨೦೧೩ರಲ್ಲಿ ಮಹಾರಾಷ್ಟ್ರದಲ್ಲಿ ನಡೆದ ರೈತರ ಆತ್ಯಹತ್ಯೆಗಳ ಸಂಖ್ಯೆ ೩,೧೪೬. ಅಂದರೆ ೧೯೯೫ರಿಂದ ಇಲ್ಲಿಯವರೆಗೆ ಮಹಾರಾಷ್ಟ್ರದಲ್ಲಿ ನಡೆದ ರೈತರ ಆತ್ಮಹತ್ಯೆಗಳ ಸಂಖ್ಯೆ ಸುಮಾರು ೬೦,೭೫೦. ಮಾಧ್ಯಮಗಳಲ್ಲಿ ಇವು ಎಲ್ಲೂ ದಾಖಲಾದಂತೆ ತೋರುತ್ತಿಲ್ಲ. ೨೦೦೪ರ ನಂತರ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿತ್ತು. ೨೦೦೪–೧೩ರ ನಡುವೆ ತಮ್ಮ ಜೀವ ತೆಗೆದುಕೊಂಡ ರೈತರ ಸಂಖ್ಯೆ ಪ್ರತಿವರ್ಷಕ್ಕೆ ಸರಾಸರಿ ೩,೬೮೫. ಇವೆಲ್ಲದರ ಅರ್ಥ, ಇದೀಗ ತಾನೇ ಚುನಾವಣೆಗೆ ಸಜ್ಜಾಗುತ್ತಿರುವ ಮಹಾರಾಷ್ಟ್ರದಲ್ಲಿ ಕಳೆದ ಒಂದು ದಶಕದಿಂದ ಪ್ರತಿದಿನ ಸರಾಸರಿ ಹತ್ತು ಜನ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ೧೯೯೫–೨೦೦೩ರ ನಡುವೆ ಈ ಸರಾಸರಿ ಸಂಖ್ಯೆ ೭ರಷ್ಟಿತ್ತು. ಇದೀಗ ಅದೇ ಸಂಖ್ಯೆ ಶೇಕಡಾ ೪೨ರಷ್ಟು ಹೆಚ್ಚಿದೆ. ರಾಷ್ಟ್ರೀಯ ಅಪರಾಧ ದಾಖಲಾತಿ ಕಾರ್ಯಾಲಯವು ರೈತರ ಆತ್ಮಹತ್ಯೆಗಳನ್ನು ಅಪಘಾತ ಮತ್ತು ಆತ್ಯಹತ್ಯೆಯಿಂದಾದ ಸಾವುಗಳಡಿಯಲ್ಲಿ ಪರಿಗಣಿಸಲು ಶುರುಮಾಡಿದ್ದೇ ೧೯೯೫ರಲ್ಲಿ.

೧೯೯೫ರಿಂದ ಭಾರತದಲ್ಲಿ ೨,೯೬,೪೩೮ ರೈತರು ಜೀವ ಕಳೆದುಕೊಂಡಿದ್ದಾರೆ. ಆದರೆ ಅಚ್ಚರಿಯೆನ್ನುವಂತೆ ೨೦೧೨ಕ್ಕೆ ಹೋಲಿಸಿದರೆ ಆತ್ಮಹತ್ಯೆ ಮಾಡಿಕೊಳ್ಳುವವರಲ್ಲಿ ೬೪೦ ಜನ ರೈತರು ಕಡಿಮೆಯಾಗಿದ್ದಾರೆ. ವಾಸ್ತವಾಂಶವೆಂದರೆ, ರೈತರ ಆತ್ಮಹತ್ಯೆಗಳಲ್ಲಿ ಮುಂಚೂಣಿಯಲ್ಲಿದ್ದ ೫ ರಾಜ್ಯಗಳು – ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ, ಮಧ್ಯಪ್ರದೇಶ ಮತ್ತು ಛತ್ತೀಸ್‌ಘಡ – ಈ ಬಾರಿ ರೈತರ ಆತ್ಮಹತ್ಯೆಗಳು ಕಡಿಮೆಯಾಗಿವೆ ಎಂದೇ ದಾಖಲಿಸಿವೆ. ಮಹಾರಾಷ್ಟ್ರವನ್ನು ಹೊರತುಪಡಿಸಿ ಉಳಿದ ರಾಜ್ಯಗಳಲ್ಲಿ ಕಡಿಮೆಯಾಗಿರುವ ಆತ್ಯಹತ್ಯೆಗಳ ಸಂಖ್ಯೆ ಕ್ರಮವಾಗಿ ೪೭೨, ೫೫೮, ೮೨ ಮತ್ತು ೦೪.

ಹಾಗಾದರೆ ರೈತರು ನಿಜಕ್ಕೂ ಆತ್ಮಹತ್ಯೆ ಮಾಡಿಕೊಳ್ಳುವುದನ್ನು ನಿಲ್ಲಿಸಿದರೇ ? ಹೌದೆನ್ನುತ್ತವೆ ಎನ್.ಸಿ.ಆರ್.ಬಿ.ಯ ಅಂಕಿಅಂಶಗಳು. ೨೦೧೨ರ ೧೩,೭೫೪ಕ್ಕಿಂತ ೨೦೧೩ರಲ್ಲಿ ೧,೯೮೨ ಸಾವುಗಳು ಕಡಿಮೆ ಇವೆ. ಅಂದರೆ ಒಟ್ಟು ರೈತರ ಸಾವುಗಳು ೧೧,೭೪೪. ಈ ಸಂಖ್ಯೆಗಳನ್ನು ನೀವು ಸೂಕ್ಷ್ಮವಾಗಿ ಪರಿಶೀಲಿಸಿದ ಹೊರತು ಇಲ್ಲಿನ ಒಳ ಮರ್ಮ ನಿಮಗೆ ಅರ್ಥವಾಗಲಿಕ್ಕಿಲ್ಲ.

**ಪಿ. ಸಾಯಿನಾಥ್**
**ಕನ್ನಡಕ್ಕೆ : ಸಾಕ್ಷಿ**

ದೇಶದಲ್ಲಿನ ಒಟ್ಟು ರೈತರ ಆತ್ಮಹತ್ಯೆಗಳಲ್ಲಿ ಮುಕ್ಕಾಲು ಪಾಲು ಕೊಡುಗೆಯಿರುವುದೇ ಈ ಮೊದಲು ಹೇಳಿದ ಐದು ರಾಜ್ಯಗಳಿಂದ (ಒಟ್ಟು ೭,೬೫೫ ಆತ್ಮಹತ್ಯೆಗಳು). ಉಳಿದ ೧೫ ರಾಜ್ಯಗಳಲ್ಲಿ ರೈತರ ಆತ್ಮಹತ್ಯೆಯ ಸಂಖ್ಯೆ ಕೊಂಚ ಏರಿಕೆಯಾಗಿದೆ. ಹರ್ಯಾಣದಲ್ಲಿ ೯೮ ಸಾವುಗಳು ಹೆಚ್ಚಾಗಿವೆ. ಕೆಲವು ರಾಜ್ಯಗಳಂತೂ ತಮ್ಮಲ್ಲಿ ಯಾವ ರೈತರೂ ಆತ್ಮಹತ್ಯೆ ಮಾಡಿಕೊಂಡಿಲ್ಲ ಎಂದು ಘೋಷಿಸಿಕೊಳ್ಳುತ್ತಿವೆ. ಛತ್ತೀಸ್‌ಘಡ ೨೦೧೧ರಿಂದ ಸಂಭವಿಸಿದ ಸಾವುಗಳ ಸಂಖ್ಯೆಯನ್ನು (ಮೂರು ಬಾರಿ) ಸೊನ್ನೆ ಎಂದು ತೋರಿಸಿದೆ. ಪಶ್ಚಿಮ ಬಂಗಾಳವೂ ೨೦೧೨ ಮತ್ತು ೨೦೧೩ರಲ್ಲಿ ರೈತರ ಸಾವಿನ ಸಂಖ್ಯೆಯನ್ನು ಸೊನ್ನೆ ಎಂದು ದಾಖಲಿಸಿದೆ. ಹಾಗಾದರೆ ಈ ಶೂನ್ಯ ಸಂಪಾದನೆಗೂ ಮುಂಚೆ ಮೂರು ವರ್ಷಗಳಲ್ಲಿ ಸರಾಸರಿ ಸಾವುಗಳು ಎಷ್ಟಿತ್ತೆಂದು ಊಹಿಸುತ್ತೀರಾ ? ಛತ್ತೀಸ್‌ಘಡದಲ್ಲಿ ಅದು ೧,೫೬೭ ಮತ್ತು ಪಶ್ಚಿಮ ಬಂಗಾಳದಲ್ಲಿ ೯೫೧. ಒಟ್ಟು ೨,೫೧೮. ೨೦೧೩ರಲ್ಲಿನ ಮೊತ್ತಕ್ಕೆ ಇದನ್ನು ಸೇರಿಸಿದರೆ ಒಟ್ಟು ಸಂಖ್ಯೆ ೧೪,೨೬೨ಅನ್ನು ಮೀರುತ್ತದೆ.

ಹಾಗೆಂದಮಾತ್ರಕ್ಕೆ ರಾಜ್ಯಗಳಲ್ಲಿ ರೈತರ ಆತ್ಮಹತ್ಯೆಗಳು ಇಳಿಮುಖ ಆಗಲೇ ಇಲ್ಲವೆಂದಲ್ಲ. ಈ ಮೂರು ವರ್ಷಗಳಲ್ಲಿ ಇಳಿಕೆಯಾಗಿದೆಯೆಂದು ಪ್ರಕಟಿಸಿರುವ ಸಂಖ್ಯೆ ಅನುಮಾನಾಸ್ಪದವಾಗಿದೆ. ೨೦೦೧-೧೦ರ ನಡುವೆ ೧೪,೦೦೦ ರೈತರ ಆತ್ಮಹತ್ಯೆಗಳನ್ನು ಕಂಡ ಛತ್ತೀಸ್‌ಘಡದಲ್ಲಿ ಮುಂದಿನ ಮೂರು ವರ್ಷಗಳಲ್ಲಿ ಒಂದೇ ಒಂದು ಸಾವೂ ಸಂಭವಿಸದಿರಲು ಹೇಗೆ ಸಾಧ್ಯ ? ಬೇರೆ ರಾಜ್ಯಗಳಿಗೆ ಹೋಲಿಸಿದರೆ ಮೇಲ್ನೋಟಕ್ಕೆ ಇದೊಂದು ಮಾದರಿ ರಾಜ್ಯ ಎಂದೆನಿಸಬಹುದು. ಹಾಗೆಂದು ಈ ಮಾದರಿಯನ್ನು ಅವೂ ಅನುಕರಿಸಲು ಹೊರಟರೆ, ದೊಡ್ಡದೊಂದು ವಂಚನೆಗೆ ಕೈಹಾಕಿದಂತೆಯೇ ಸರಿ.

ಯೂನಿಯನ್ ಟೆರಿಟರಿಗಳಲ್ಲೇ ಅತಿ ಹೆಚ್ಚು ರೈತರ ಆತ್ಮಹತ್ಯೆಗಳು ದಾಖಲಾಗಿರುವುದು ಗಮನಾರ್ಹ. ಪುದುಚೇರಿಯಲ್ಲಿ ೨೦೦೯ರಲ್ಲಿ ದಾಖಲಾದ ಆತ್ಮಹತ್ಯೆ ಪ್ರಕರಣಗಳು ೧೫೪. ಆದರೆ ೨೦೧೧, ೨೦೧೨, ೨೦೧೩ರಲ್ಲಿ ಇದು ಸೊನ್ನೆಯಾಗಿತ್ತು. ೨೦೧೦ರಲ್ಲಿ ಮಾತ್ರ ಈ ಸಂಖ್ಯೆ ನಾಲ್ಕಕ್ಕೇರಿತ್ತು. "ಇದು ಅಂಕಿಅಂಶಗಳನ್ನು ಮುಚ್ಚಿಹಾಕುವ ಹುನ್ನಾರ" ಎನ್ನುತ್ತಾರೆ ಚೆನ್ನೈನ ಏಷಿಯನ್ ಕಾಲೇಜ್ ಆಫ್ ಜರ್ನಲಿಸಂನ ಆರ್ಥಿಕ ತಜ್ಞ ಪ್ರೊ॥ ಕೆ. ನಾಗರಾಜ್. ಮುಂದುವರಿದು, "ಅಂಕಿ ಅಂಶಗಳು ನಿಮಗೆ ಒಪ್ಪಿಗೆಯಾಗದಿದ್ದರೆ, ಅವುಗಳನ್ನು ಅಳಿಸಿಹಾಕುವುದು ಸಾಧ್ಯವಿಲ್ಲ. ಹಾಗಾಗಿ ಕುತಂತ್ರದಿಂದ ಬೇರೆ ದಾರಿ ಕಂಡುಕೊಳ್ಳಲಾಗುತ್ತಿದೆ. ಸಾಮಾನ್ಯವಾಗಿ 'ಇತರೆ' ಎಂಬ ತಲೆಪಟ್ಟಿಯಡಿಯಲ್ಲಿ ತಮಗೆ ಬೇಡವಾದ ಸಂಖ್ಯೆಗಳನ್ನೆಲ್ಲಾ ತುಂಬಿಬಿಡುತ್ತಾರೆ ಎನ್ನುತ್ತಾರೆ."

ರಾಜ್ಯಗಳು ಎನ್.ಸಿ.ಆರ್.ಬಿ.ಗೆ ನೀಡುತ್ತಿರುವ ಅಂಕಿಗಳಲ್ಲಿ ಮಾಡುತ್ತಿರುವುದೂ ಇದನ್ನೇ. ಈ ಸಂಸ್ಥೆಯ ಆತ್ಮಹತ್ಯೆಗಳ ಪಟ್ಟಿಯಲ್ಲಿ 'ಸ್ವ ಉದ್ಯೋಗ (ಕೃಷಿ)' ಮತ್ತು 'ಸ್ವ ಉದ್ಯೋಗ (ಇತರೆ)' ಎಂಬ ಎರಡು ತಲೆಬರಹಗಳಿವೆ. ಛತ್ತೀಸ್‌ಘಡದಲ್ಲಿ ರೈತರ ಆತ್ಮಹತ್ಯೆಗಳು ಸೊನ್ನೆಯಾಗುತ್ತಿದ್ದಂತೆ, 'ಸ್ವ ಉದ್ಯೋಗ (ಇತರೆ)' ಅಡಿಯಲ್ಲಿನ ಆತ್ಮಹತ್ಯೆಗಳ ಸಂಖ್ಯೆ ಏಕ್‌ದಂ ಏರತೊಡಗಿತು. ೨೦೦೮ ಮತ್ತು ೨೦೦೯ರಲ್ಲಿ ಛತ್ತೀಸ್‌ಘಡ ರೈತರ ಸಾವುಗಳನ್ನು ಸೊನ್ನೆ ಎಂದು ತೋರಿಸದಿದ್ದಾಗ 'ಇತರೆ' ಕಲಂನಡಿಯ ಆತ್ಮಹತ್ಯೆಗಳ ಸಂಖ್ಯೆ ೮೬೭ ಮತ್ತು ೮೫೧ ಇತ್ತು. ಕಳೆದ ಎರಡು ವರ್ಷಗಳಲ್ಲಿ ಈ ಸಂಖ್ಯೆ ೧,೮೯೬ ಮತ್ತು ೨,೦೭೭ಕ್ಕೆ ಏರಿದೆ. ಮಹಾರಾಷ್ಟ್ರದಲ್ಲಿ 'ಇತರೆ' ಕಲಂನಡಿಯ ಆತ್ಮಹತ್ಯೆಗಳು ೧೦೦೦ದಷ್ಟು ಏರಿದ್ದು, ಮಧ್ಯಪ್ರದೇಶದಲ್ಲಿ ೨೫೬ರಷ್ಟು ಹೆಚ್ಚಿದೆ. ಪುದುಚೇರಿ ಮತ್ತು ಪಶ್ಚಿಮ ಬಂಗಾಳದಲ್ಲಿಯೂ ಇದೇ ಕತೆ. ೨೦೧೨ಕ್ಕೆ ಇವರು ಯಾವ ಸಂಖ್ಯೆಗಳನ್ನೂ ತೋರಿಸಲೇ ಇಲ್ಲ. ನಿಮಗೆ ಅಪ್ರಿಯವಾದ ಸತ್ಯವಿದ್ದರೆ ಅದನ್ನು 'ಇತರೆ' ಕಲಂನಡಿ ತುಂಬಿದರಾಯ್ತು !

ಅಷ್ಟೇ ಅಲ್ಲ, ಇಲ್ಲಿ ಮತ್ತೊಂದು ದುರಂತವಿದೆ. ಇತ್ತೀಚಿನ ಜನಗಣತಿ ಪ್ರಕಾರ, ೨೦೦೧ಕ್ಕಿಂತ ೨೦೧೧ರಲ್ಲಿ ಶೇಕಡ ೭.೭ರಷ್ಟು ರೈತರು ಕಡಿಮೆ ಯಾಗಿದ್ದಾರೆ. ಒಂದೋ, ಇವರೆಲ್ಲಾ ಕೃಷಿಯನ್ನು ವೃತ್ತಿಯಾಗಿ ಕೈಬಿಡುತ್ತಿದ್ದಾರೆ, ಇಲ್ಲವೇ, 'ಕೃಷಿಕ' ಎಂಬ ಸ್ಥಾನಮಾನವನ್ನು ಕಳೆದುಕೊಳ್ಳುತ್ತಿದ್ದಾರೆ. ಅಂದರೆ ಈ ಹತ್ತು ವರ್ಷಗಳಲ್ಲಿ ಪ್ರತಿದಿನ ಸುಮಾರು ೨೦೦೦ ಜನ ಕೃಷಿಕರು ತಮ್ಮ ವೃತ್ತಿ ತೊರೆದು ಹೊರನಡೆದಿದ್ದಾರೆ. ಈ ಸಂಖ್ಯೆಗಳ ಹಿನ್ನೆಲೆಯಲ್ಲಿ ರೈತರ ಆತ್ಮಹತ್ಯೆಗಳ ಬಗ್ಗೆ ಇನ್ನೊಮ್ಮೆ ಯೋಚಿಸಿ ನೋಡಿ.

ಪ್ರೊ॥ ಕೆ. ನಾಗರಾಜ್ ಮತ್ತು ಎಂ. ಎಸ್. ಸ್ವಾಮಿನಾಥನ್ ಫೌಂಡೇಶನ್‌ನ ಸಂಶೋಧಕರು ಎನ್.ಸಿ.ಆರ್.ಬಿ.ಯ ಸಂಖ್ಯೆಗಳ ಆಧಾರದ ಮೇಲೆ ನಡೆಸಿದ ಅಧ್ಯಯನದ ಪ್ರಕಾರ, ೨೦೧೧ರಲ್ಲಿ ಉಳಿದ ಜನಸಂಖ್ಯೆಗೆ ಹೋಲಿಸಿದರೆ ರೈತರ ನಡುವಿನ ಆತ್ಮಹತ್ಯೆ ಶೇಕಡ ೪೭ರಷ್ಟು ಹೆಚ್ಚಿತ್ತು. ಕೃಷಿ ಪರಿಸ್ಥಿತಿ ತೀರ ಹದಗೆಟ್ಟಿರುವ ಕೆಲವು ರಾಜ್ಯಗಳಲ್ಲಂತೂ ಇದು ಶೇಕಡ ೧೦೦ಕ್ಕಿಂತಲೂ ಹೆಚ್ಚಿತ್ತು. ಮಹಾರಾಷ್ಟ್ರದಲ್ಲಿ ಇದು ಶೇಕಡ ೧೬೨ರಷ್ಟಿತ್ತು, ದೇಶದ ಇತರ




ಜನರಿಗಿಂತ ಇಲ್ಲಿ ಒಬ್ಬ ರೈತ ಆತ್ಮಹತ್ಯೆ ಮಾಡಿಕೊಳ್ಳಬಹುದಾದ ಸಾಧ್ಯತೆ ಎರಡೂವರೆ ಪಟ್ಟು ಜಾಸ್ತಿ ಇದೆ. ಈ ಆತ್ಮಹತ್ಯೆಗಳು ಬರ ಅಥವಾ ಬೆಳೆ ವೈಫಲ್ಯದಿಂದ ನಡೆಯುತ್ತಿವೆ ಎಂದು ನೀವು ಭಾವಿಸಿದ್ದರೆ ಅದು ತಪ್ಪು. ಇಲ್ಲಿ ಬೆಳೆ ಚೆನ್ನಾಗಿ ದಕ್ಕಿದ ವರ್ಷವೂ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಮಳೆ ಬಂದರೂ, ಬಾರದಿದ್ದರೂ ಇಲ್ಲಿ ರೈತರಿಗೆ ಕಷ್ಟ ತಪ್ಪಿದ್ದಲ್ಲ. ಬರ ಬಂದರಂತೂ ಕೇಳುವುದೇ ಬೇಡ.

ಆಹಾರಧಾನ್ಯ ಬೆಳೆ ಬೆಳೆದ ರೈತರಿಗಿಂತ ಹತ್ತಿ, ಕಬ್ಬು, ಶೇಂಗಾ, ವೆನಿಲ, ಕಾಫಿ, ಕಾಳುಮೆಣಸು ಮುಂತಾದ ವಾಣಿಜ್ಯ ಬೆಳೆಗಳನ್ನು ಬೆಳೆದ ರೈತರ ನಡುವೆ ಆತ್ಮಹತ್ಯೆ ಸಂಖ್ಯೆ ಜಾಸ್ತಿ ಇದೆ. ಮುಂಗಾರು ಕೃಷಿಗೆ ಬಹು ಮುಖ್ಯವಾದರೂ, ಮುಂಗಾರಿನ ವೈಫಲ್ಯ ಕೃಷಿಕರ ಆತ್ಮಹತ್ಯೆಗೆ ಕಾರಣವಲ್ಲ. ವಾಣಿಜ್ಯ ಬೆಳೆಗಳನ್ನು ಬೆಳೆದವರನ್ನು ಕಾಡುವ ಸಾಲ, ಅತಿಯಾದ ವಾಣಿಜ್ಯೀಕರಣ, ಹೆಚ್ಚುತ್ತಿರುವ ಬಂಡವಾಳದ ಖರ್ಚು, ನೀರಿನ ಬಳಕೆ, ಬೆಲೆಗಳಲ್ಲಿನ ಏರುಪೇರುಗಳಿಂದ ರೈತರ ಆತ್ಮಹತ್ಯೆಗಳು ಹೆಚ್ಚುತ್ತಿವೆ. ಇವೆಲ್ಲದರ ಮೂಲ ಸರ್ಕಾರದ ಯೋಜನೆಗಳೇ. ಇವಿಷ್ಟನ್ನು ಗಮನಿಸಿಯಾದ ಮೇಲೆ, ಈಗ ಬರ ಬಂದರೆ ಏನಾದೀತೆಂದು ನೀವೇ ಯೋಚಿಸಿ. ಜೂನ್, ಆಗಸ್ಟ್ ಮತ್ತು ಸೆಪ್ಟೆಂಬರ್‌ಗಿಂತ ಹೆಚ್ಚಾಗಿ ಜುಲೈನಲ್ಲಿ ಬರುವ ಶೇಕಡ ೫೦ರಷ್ಟು ಮುಂಗಾರಿನ ಮಳೆ ಬಹು ಮುಖ್ಯವಾದದ್ದು. ಈ ಅನಿಶ್ಚಿತತೆಯ ನಡುವೆ ರೈತರ ಆತ್ಮಹತ್ಯೆಗಳು ಕಡಿಮೆಯಾದವೋ ಇಲ್ಲವೋ ಎಂದು ಲೆಕ್ಕ ಇಡುವವರು ಯಾರು ?

(ಪಿ. ಸಾಯಿನಾಥ್‌ರ 'Maharashtra crosses 60,000 farm suicides'ನ ಅನುವಾದ.)

ಮೂಲ : **ಪಿ. ಸಾಯಿನಾಥ್**
ಕನ್ನಡಕ್ಕೆ : **ಸಾಕ್ಷಿ**
ಕೇರಾಫ್ : ಕೆ. ಅರವಿಂದ, ಸ್ಟೇಟ್ ಬ್ಯಾಂಕ್ ಇಂಡಿಯಾ
ಬೆಂಗಳೂರು ಪ್ರಧಾನ ಕಛೇರಿ, ಅವಿನ್ಯೂ ರಸ್ತೆ
ಬೆಂಗಳೂರು - ೫೬೦ ೦೦೨



## ಇಬ್ಬನಿ

ಹೂವೇ..........
ನಿನ್ನ ಮೇಲೆ ಬಿದ್ದಿರುವುದು
ಇಬ್ಬನಿಯೆಂದು ತಪ್ಪಾಗಿ ತಿಳಿಯಬೇಡ
ನೀನು ಬಾಡದೆ ಇರಲೆಂದು
ಕಣ್ಣೀರ ಹನಿ ಸುರಿಸಿಹನೆಂದಿತು ಮೋಡ

**ಶ್ರೀನಿವಾಸ ಕುಂಡಂತಾಯ**
ಯಲಹಂಕ, ಬೆಂಗಳೂರು - ೫೬೦ ೦೬೪

ನಾನು ಓದಿದ ಪುಸ್ತಕ

# ಕಡಿವಾಣ

ಕಡಿವಾಣ ಒಂದು ಸ್ಥಳವೂ ಹೌದು, ಕಾದಂಬರಿಯ ಶೀರ್ಷಿಕೆಯೂ ಹೌದು. ಭಾರತ ಬದುಕಿಗೆ ಹಾಕಿಕೊಳ್ಳಬೇಕಾದ ಕಡಿವಾಣದ ಸಂಕೇತವೂ ಹೌದು. ಕಾಲದ ಹೊಂದಾಣಿಕೆಗೆ ಬದುಕನ್ನು ಬಾಗಿಸಿಕೊಳ್ಳದ ಹಠದ ಪ್ರತಿಮಾ ವಿಧಾನವೂ ಹೌದು. ಇದು ಗಾಂಧಿ ಮಾದರಿ. ವಿವೇಕಾನಂದರ ಅರಿವು. 'ಮೇಕ್ ಇನ್ ಇಂಡಿಯಾ' ಎರಡೂವರೆ ಲಕ್ಷ ಕೋಟಿಯ ವ್ಯಾಪಾರದ ಮಾತು. ೧೯ನೇ ಶತಮಾನದ ತುದಿಯಲ್ಲಿ ನಿಂತು ಭಾರತದ ಬಗ್ಗೆ ಹೇಳಿದ ಅಂದಿನ ನರೇಂದ್ರನ ಸಂದೇಶವೇನು! ೨೧ನೇ ಶತಮಾನದ ಆದಿಯಲ್ಲಿ ನಿಂತು ಹೇಳುತ್ತಿರುವ ಇಂದಿನ ನರೇಂದ್ರನ ಬಿಸಿನೆಸ್ ಏನು! ಇಂದು ಮಾಧ್ಯಮಗಳು ಭಜನೆ ಮಾಡುತ್ತಾ ಇಂಥಾ ಬಿಸಿನೆಸ್‌ಗಿಳಿದಿವೆಯಲ್ಲಾ! ಇದಕ್ಕೆ ಕಡಿವಾಣ ಹೇಗೆ! ಇದೇ ಕಾದಂಬರಿ ಓದಿದಾಗಿನ ಚಿಂತೆ.

ಎನ್. ಬೋರಲಿಂಗಯ್ಯನವರನ್ನು ಕೇಳಿಬಲ್ಲೆ. ಅವರ ಮಾವ ಇನ್ಸೂರೆನ್ಸ್ ಜಯರಾಮಯ್ಯ ಹಾಸನದವರು. ನನ್ನಪ್ಪ, ಅವರು ಸ್ನೇಹಿತರು. ಮಕ್ಕಳನ್ನು ಓದಿಸಲೇಬೇಕೆಂಬ ಹಟದಿಂದ ನಮ್ಮಪ್ಪ ಮನೆ ಮಾಡಿ ಓದಿಸುತ್ತಿದ್ದಾಗ ಆಗವರು ನೆರೆಯವರು. ಇದು ಅರ್ಧ ಶತಮಾನದ ನೆನಪು. ಒಮ್ಮೆ ಪ್ರೊ॥ ಶಿವರಾಮಯ್ಯನವರು ಅವರ 'ಜವನಕ್ಕ' ಕಾದಂಬರಿ ಕೊಟ್ಟರು. ಬಹಳ ವಾಸ್ತವ ತಾತ್ವಿಕ ಕಾದಂಬರಿ. ಈಗ ಪುನಃ 'ಕಡಿವಾಣ' ಕಾದಂಬರಿಯನ್ನು ಕೊಟ್ಟರು. 'ಜವನಕ್ಕ' ಕಾದಂಬರಿಯ ಬೇರುಗಳಲ್ಲಿ 'ಕಡಿವಾಣ' ಚಿಗುರೊಡೆಯುತ್ತದೆ. ಈಚೆಗೆ ಪ್ರೊ॥ ಅಜೀಜ್ ಹೇಳಿದ್ದು : "ನಾನು ಮೈಸೂರು ಮಾನಸ ಗಂಗೋತ್ರಿಯಲ್ಲಿ ಶಿಕ್ಷಕನಾಗಿದ್ದೆ. ಬಹಳ ಕಷ್ಟದ ಕಾಲ. ಅಲ್ಲಿ ವಾತಾವರಣ ಕುತ್ತಿಗೆ ಹಿಸುಕುವಂತಿತ್ತು. ಏನು ಮಾಡೋದು! ಆಗ ಹೌಸಿಂಗ್ ಲೋನ್ ಸಹ ತೆಗೆದಿದ್ದೆ. ನನಗೆ ಬೆಂಗಳೂರಿನ ಐಸೆಕ್‌ನಲ್ಲಿ ಕೆಲಸ ಸಿಕ್ಕಿತು. ರಿಲೀವ್ ಆಗಬೇಕು, ಲೋನ್ ಕ್ಲಿಯರ್ ಮಾಡಿ ಹೋಗಿ ಎಂದು ಕಾನೂನು ಹೇಳಿಬಿಟ್ಟರು. ಕಂಡಕಂಡವರಲ್ಲೆಲ್ಲಾ ಬೇಡಿ ೧೫ ಸಾವಿರ ತಂದು ಕಟ್ಟಿದೆ. ಸಾಲ ಕೇಳಲು ಬಂದಾನು! ಎಂದು ನೋಡಿದರೂ ನೋಡದಂತಿದ್ದವರು ಸಹ ಇದ್ದರು. ರಾತ್ರಿ ಊಟ ಮಾಡಿ ಇನ್ನೇನು ಮಲಗುವುದರಲ್ಲಿದ್ದೆ. ಯಾರೋ ಬಂದು ಬಾಗಿಲು ತಟ್ಟಿದರು. ಬಾಗಿಲು ತೆಗೆದೆ. ಬೋರಲಿಂಗಯ್ಯನವರು ಬಾಗಿಲಲ್ಲಿ ನಿಂತಿದ್ದಾರೆ! 'ಏನಯ್ಯ ನೀನು, ನಾನೇನು ಸತ್ತು ಹೋಗಿದ್ದೇನೆಯೇ, ಯಾರ್‍ಯಾರನ್ನೋ ದುಡ್ಡು ಕೇಳಿದೆಯಂತೆ, ನನಗೇಕೆ ಕೇಳಲಿಲ್ಲ' ಎಂದು ದಬಾಯಿಸಿದರು. ಇಲ್ಲಾ ಬಿಡಿ ಅಡ್ಜಸ್ಟ್ ಆಗಿದೆ ಎಂದು ಹೇಳಿ ನಿಮ್ಮ ವಿಶ್ವಾಸಕ್ಕೆ ಋಣಿ ಎಂದೆ. ಇವರು ಬೋರಲಿಂಗಯ್ಯ." ಇದು ಸಮಾಜ ಗುರುತಿಸುವ ಗಾಂಧಿ ಹಾದಿಯ ಬೋರಲಿಂಗಯ್ಯನವರ ಬದುಕು ಎನಿಸಿತು. ದೈಹಿಕವಾಗಿ ಅರ್ಧಕಣ್ಣುಳ್ಳ ಇವರಿಗೆ ಅವರ ಪತ್ನಿ ಸರಸ್ವತಿ ಎರಡು ಸಂಪೂರ್ಣ ಕಣ್ಣುಗಳಾಗಿ ಬಾಳಿದವರು. 'ಕಡಿವಾಣ' ಕಾದಂಬರಿಯ ಅನುಬಂಧ ಸಂಪೂರ್ಣ ಬೋರಲಿಂಗಯ್ಯನವರನ್ನು ಕಟ್ಟಿಕೊಡುತ್ತದೆ.

'ಬಡತನ ರೋಚಕ ಅನುಭವಗಳ ಆಗರ' (ಪು. ೧೯೧) ಎಂಬ ಮಾತು ಬರುತ್ತದೆ. ಜವನಕ್ಕನ ಈ ಅನುಭವದ ತಳಹದಿಯೇ ಬೋರಲಿಂಗಯ್ಯನವರ ಎರಡು ಕಾದಂಬರಿಗಳ ತಳಹದಿ. ಭಾರತೀಯ ಗ್ರಾಮಗಳು ಈ ನೆಲೆಯವು. ಸ್ವಾತಂತ್ರ್ಯಾನಂತರ ಎಲ್ಲಾ ಅಪ್ಪ-ಅವ್ವಂದಿರು ವಿದ್ಯಾಭ್ಯಾಸದ ಕಡೆ ಒಲಿದದ್ದು ಜಾಗತಿಕ ಮಾದರಿ. ಶ್ರವಣಬೆಳಗೊಳ ಎಂದಾಕ್ಷಣ ಕಂಚಿನ ಪಾತ್ರೆ ಹೊತ್ತು ಬರುತ್ತಿದ್ದ ಗ್ರಾಮ ವ್ಯಾಪಾರಿಗಳ ನೆನಪಾಗುವುದುಂಟು. ಎಸ್. ಕೆ. ಕರೀಂಖಾನರ ಜನಪದ ಆಸಕ್ತಿಗೆ ಅವರೇ ಕಾರಣ. ಈ ನೆಲದ ಪರಿಸರ ಬೋರಲಿಂಗಯ್ಯನವರ ಬರವಣಿಗೆಯಲ್ಲಿ ಪ್ರಾರಂಭವಾಗಿ ಹಾಸನದವರೆಗೂ ಹರಡುತ್ತದೆ. ಕೂಡು ಕುಟುಂಬದ ಹೆಡ್ಡಗಂಡನ ಹೆಂಡತಿಯಾಗಿ ಬಂದು ಸೇರಿದ ಜವನಕ್ಕ ಜನ ಮೆಚ್ಚುವಂತಹ ಬದುಕು ನಿರ್ವಹಿಸಿದಳು. 'ಕಡಿವಾಣ' ಕಾದಂಬರಿಕಾರರು ಹೇಳುವಂತೆ ಇಲ್ಲಿನ ಪಾತ್ರಗಳು ಕಲ್ಪಿತವಲ್ಲ. ಸನ್ನಿವೇಶಗಳು ಮಾತ್ರ ನೇಯ್ದವು.

**ಡಾ॥ ರಾಜೇಗೌಡ ಹೊಸಹಳ್ಳಿ**




ಕೃತಿಯ ಹೆಸರು
**ಕಡಿವಾಣ (ಕಾದಂಬರಿ)**
*ಲೇಖಕರು*
**ಎನ್. ಬೋರಲಿಂಗಯ್ಯ**
ಪುಟಗಳು : ೩೭೬ ಬೆಲೆ : ರೂ. ೨೨೫/-
ಪ್ರಕಾಶಕರು
**ದಾರಿದೀಪ ಪ್ರಕಾಶನ**
ನಂ. ೪೪, ೮ನೇ ಮುಖ್ಯರಸ್ತೆ
೧೨ನೇ ಅಡ್ಡರಸ್ತೆ, ಕಾಮಾಕ್ಷಿ ಆಸ್ಪತ್ರೆ ರಸ್ತೆ
ಸರಸ್ವತಿಪುರಂ
ಮೈಸೂರು – ೫೭೦ ೦೦೯

ಅಂದರೆ ಜಗತ್ತಿನ ಕಾದಂಬರಿ ಮಾದರಿಗಳನ್ನು ಈ ಕಾದಂಬರಿಕಾರರು ತಳ್ಳಿಹಾಕುತ್ತಾರೆ. ಅತ್ಯಂತ ಸರಳ, ಪರಿಸರ ಪ್ರೇಮಿ, ಪ್ರಕೃತಿಯ ಆಸರೆಯ ಜೀವನ. ಕೈತೋಟ, ನೂರಾರು ಗಿಡಗಳ ಆರೈಕೆ ಇವು ಲೇಖಕರ ಕಾಯಕ. ಇವು ಸಾರ್ವತ್ರಿಕವಾಗಲಿ ಎಂಬ ಬಯಕೆ. ಈ ಕಾಲದಲ್ಲೂ ಹೀಗುಂಟೆ! ಆಶ್ಚರ್ಯವಾಗ ಬಹುದು. ಇಂಥವರು ಈ ದೇಶಕ್ಕೆ ಮಾದರಿಯಾಗ ಬೇಡವೆ! ಇದುವೇ ಗಾಂಧಿ ಬಯಸಿದ ಭಾರತ. ಬದುಕು ಅವರವರ ಬಯಕೆ. ಈ ಸಾಧ್ಯತೆಯ ಬೆನ್ನುಹತ್ತಿ ಹೋಗುವ ಲೇಖಕರು ಜಗತ್ತನ್ನು ಹೀಗೆ ಬಯಸುತ್ತಾರೆ. ನಮ್ಮ ಹಳ್ಳಿಗಳನ್ನು ಹೀಗೆ ಬಯಸುತ್ತಾರೆ. ಇದು ಗಾಂಧಿಯ ಹಾದಿ. ಗಾಂಧಿಯ ಹಾದಿ ಸಾಧ್ಯವಿಲ್ಲ ಎಂದು ಹೇಳುತ್ತಲೇ ಆ ಕಡೆ ಎಲ್ಲಾ ಮನಸ್ಸುಗಳು ಚಲನೆಯಲ್ಲಿರುತ್ತವೆ. ಇದೇ ಗಾಂಧಿತತ್ವ. ಇದೇ ಬುದ್ಧನ ದಾರಿ. ಕಾದಂಬರಿಯಲ್ಲಿ ಅನೇಕ ವಿಚಾರಗಳಿವೆ. ಅನೇಕ ತತ್ವಗಳಿವೆ. ಅನೇಕ ಆದರ್ಶಗಳಿವೆ. ಇವೆಲ್ಲ ಕಾದಂಬರಿಯೆಂಬ ಚೌಕಟ್ಟನ್ನು ಎತ್ತರಿಸದಿರಬಹುದು. ಆದರೆ ಲೋಕದರ್ಶನವನ್ನು ಬಯಸುವ ಮಾದರಿಗಳಾಗುತ್ತವೆ, ದೇಶೀ ವಾದಗಳನ್ನು

ಪ್ರತಿಪಾದಿಸುತ್ತವೆ. ಧರ್ಮ, ಜಾತಿ, ಲಿಂಗ, ಬಡತನ ಸಿರಿತನಗಳನ್ನು ಮೀರುತ್ತವೆ. ವಿಜ್ಞಾನವನ್ನು, ಭೌತವಿಜ್ಞಾನವನ್ನು, ಭಾರತೀಯ ವಿದ್ಯಾ ಮಾದರಿಗಳನ್ನು ಕಲಿತ ವಿದ್ಯಾವಂತರ ನೀತಿನಿಯಮಗಳನ್ನು, ಇವೆಲ್ಲವೂ ಗ್ರಾಮದ ಕಡೆ ಹರಿಯಬೇಕೆಂಬ ಸರ್ವೋದಯ ತತ್ವಗಳನ್ನು ನಿರೂಪಿಸುತ್ತವೆ. ಹೆಣ್ಣು ಹಿರಿದೆಂಬ ಸಾಮಾಜಿಕ ಮೌಲ್ಯವನ್ನು ಬಿತ್ತರಿಸುತ್ತವೆ. ಒಕ್ಕಲಿಗ, ಬ್ರಾಹ್ಮಣ, ಕ್ರೈಸ್ತ ನಿಯಮಗಳನ್ನು ಕಿತ್ತೆಸೆಯುತ್ತವೆ. ಗೆಳೆಯ ಕೃಷ್ಣನು ಜವನಕ್ಕನನ್ನು ನೋಡಿಕೊಳ್ಳುವ ಮಾದರಿ ಒಂದು ಸಾಮಾಜಿಕ ಆಶಯವಾಗಿಯೇ ಬರುತ್ತದೆ. ಈ ಆಶಯದಲ್ಲಿ ಲೈಂಗಿಕ ಅನ್ಯ ಸಂಬಂಧದ ತೊಡಕು ಕೂಡ ಕಳಚಿಹೋಗುತ್ತದೆ. 'ದೇವರನ್ನು ನಂಬಿ ಬದುಕು ಸಾಗಿಸುವುದರಲ್ಲಿ ಅಂಥಾ ದೊಡ್ಡಸ್ತಿಕೆಯೇನೂ ಇಲ್ಲ. ಅದರಲ್ಲಿ ಒಂದು ಬಗೆಯ ಯಾಂತ್ರಿಕತೆ ಇರುತ್ತದೆ. ಸಹವಾಸಿಗಳಾದ ಪ್ರಾಣಿಪಕ್ಷಿಗಳನ್ನು ನಂಬಿ ಬದುಕುವುದರಲ್ಲಿ ಮಾನವೀಯ ಸರ್ವೋದಯವಿದೆ' (ಪು. ೩೪೯). ಇದು ಕಾದಂಬರಿಯೇ ಹೇಳುವಂತೆ ಕಡಿವಾಣ ಗ್ರಾಮದ ಜನ ನಿರೂಪಿಸಿರುವುದಷ್ಟೆ ಅಲ್ಲ; ಕಾದಂಬರಿಕಾರರು ಈ ದೇಶಕ್ಕೆ ಹೇಳುತ್ತಿರುವ ಮೌಢ್ಯ ನಿವಾರಣೆಯ ಹಾದಿ; ಸರ್ವೋದಯದ ಹಾದಿ. ಪಂಚೇಂದ್ರಿಯಗಳು ಆರೋಗ್ಯವಾಗಿರಬೇಕಾದರೂ ನೆಲ, ನೀರು, ಗಾಳಿ, ಬೆಳಕು, ಆಕಾಶ ಈ ಪಂಚಭೂತಗಳು ಶುದ್ಧವಾಗಿರಬೇಕು (ಪು. ೩೪೦). ಈ ಮಾತು ೧೯೧೬ರಲ್ಲಿ ಗಾಂಧಿ ವಾರಣಾಸಿಯಲ್ಲಿ ಹೇಳಿದ ಮಾತುಗಳನ್ನು ನೆನಪಿಸುತ್ತದೆ. ಅದನ್ನೆ ಈಗಿನ ಪ್ರಧಾನಿ ಉರುಹೊಡೆದು ಹೇಳುತ್ತಿರುವುದು ಸರಿ. ಗಾಂಧಿ ತನ್ನ ಕೊಂದವರನ್ನು ಇದು ಹತ್ತಿರಕ್ಕೆ ಕರೆದು ಮಾತಾಡಿಸುವ ಮಾದರಿ. ರಾವಣ ರಾಮನೊಳಗಾಗುವ ಐಕ್ಯ. ಅದು ಕಾರ್ಯಗತವಾಗಲು ಏನು ಮಾಡಬೇಕು! ಮೊದಲು ಭಾರತೀಯ ಮೌಢ್ಯವನ್ನು ಯಾವ ಕಾನೂನು ಮಾಡಿಯಾದರೂ ಕಿತ್ತೊಗೆಯಬೇಕು. ಗಂಗೆ ಕಂಡಾಕ್ಷಣ ಮಲಿನ ಮಾಡುವ ಮನಸ್ಸುಗಳನ್ನು ತೊಳೆಯುವುದು ಹೇಗೆ? ಇದೇ ಸ್ವಚ್ಛ ಭಾರತದ ಕನಸಾಗಬೇಕು. ಕಾದಂಬರಿಯಲ್ಲಿ ರೈತಾಪಿಯ ಹಪಾಹಪಿಯಿದೆ. ಪಶುಪಾಲನೆಯ ದೇಶೀ ಆಲಾಪನೆಗಳಿವೆ. ಸಾವಯವ ಬೆಳೆಗಳ ಅಭಿಲಾಷೆಗಳಿವೆ. ಇವೆಲ್ಲವೂ ಭಾರತಕ್ಕೆ ಬೇಕು. ಅವು ಬೇಕಾದರೆ ಏನು ಮಾಡಬೇಕು? ಅದುವೇ ಈಗಾಗಲೇ ತಥಾಕಥಿತ 'ಅಭಿವೃದ್ಧಿ' ಮಾದರಿಯಿಂದ ಮುರುಟಿಹೋಗಿರುವ ರಸಾಯನ ಹಸಿರು ಕ್ರಾಂತಿ ಪುನಃ ಚಿಗುರಿ ಗಾಂಧಿ ಮಾದರಿಯತ್ತ ತಿರುಗಲು ಆರಂಭಿಸಬೇಕು. ಕಾದಂಬರಿಕಾರನ ಬಯಕೆಯಂತೆ ಯಾವುದೂ ಅಸಾಧ್ಯವಲ್ಲ. ಯಾವುದೂ ಜಾಗತಿಕ ಹಿಡಿತದಲ್ಲೇ ಇರುವುದಿಲ್ಲ. ಪ್ರಕೃತಿಗೆ ಅದರದೇ ತಂತ್ರಗಳಿರುತ್ತವೆ. ಭೂತಾಯಿ ಕೆಮ್ಮಿದರೆ, ಎವೆ ಮುಚ್ಚಿದರೆ, ಎವೆ ಬಿಚ್ಚಿದರೆ ಜಾಗತೀಕರಣವೆಂಬ ಹುಳುಗಳು ಬಿಸಿಲಿಗೆ ಬಿದ್ದು ಬೆಂದುಹೋಗುತ್ತವೆ.

ಕಾದಂಬರಿಕಾರರ ಆಶಯವು ದೇಶೀ ಕಡೆ ಹೊರಳುವುದೆಂದರೆ ಕೇವಲ ಹಳತರಲ್ಲಿ ನಿಲ್ಲುವುದಿಲ್ಲ. ಆವಿಷ್ಕಾರಗಳನ್ನು ಮಾಡುತ್ತಾ ವಿಜ್ಞಾನವನ್ನು ದೇಶೀಯತೆ ಕಡೆ ತಿರುಗಿಸುವುದು. 'ರಾಗಿಕಲ್ಲು ಕೊಟ್ಟಣ ಇವಕ್ಕೆಲ್ಲಾ ಗೋಬರ್ ಗ್ಯಾಸ್ ಬಳಸಿಕೊಂಡು ಸ್ವಯಂಚಾಲಿತ ಮಾಡಿದರೆ ಊರಿಗೆ ಊರೇ ಸ್ವತಂತ್ರವಾಗುತ್ತದೆ' (ಪು. ೩೦೪). ಈ ಅಭೀಪ್ಸೆ ಸಾಮಾನ್ಯದ್ದಲ್ಲ. ಗ್ರಾಮದ ಎಲ್ಲ ಮನೆಗಳ ನೀರು, ಅಲ್ಲಿನ ದನಕರುಗಳ ಕೊಟ್ಟಿಗೆ ತೊಳೆದ ನೀರು, ಸೂರು ನೀರು, ಸ್ನಾನದ ನೀರು, ಟಾಯ್ಲೆಟ್ ನೀರು ಹೀಗೆ ಎಲ್ಲಾ ಒಟ್ಟುಗೂಡಿಸಿದರೆ ಬೆಳೆಯಬಹುದಾದ ಬೆಳೆ ಗೋಬರ್ ಗ್ಯಾಸಿನ ಒಲೆ (ಪು. ೩೦೩). ಇವೆಲ್ಲ ಗ್ರಾಮತತ್ವದ ದಾರಿಯಲ್ಲಿ ಭಾರತೀಯ ಹಳ್ಳಿಗಳು ಪುನಃ ಕಂಡುಕೊಳ್ಳಬೇಕಾದ ಭವಿಷ್ಯದ ದಾರಿಗಳು. ಕಾದಂಬರಿ ಏನೋ ಆಗದ ಕೆಲಸ, ಆಗುಹೋಗದ ವಿಚಾರ ಹೇಳುತ್ತಿದೆ ಎನಿಸುವುದುಂಟು. ಈ ತತ್ವಗಳೇ ಹಾಗೆ! ಗಾಂಧಿಯ ಆಲೋಚನೆಗಳು ಸಹ ಪ್ರಾರಂಭದಲ್ಲಿ ಹೀಗೇ ಇದ್ದವು. ಈಗ ಅವು ದಾರಿ ತಪ್ಪಿವೆ, ನಿಜ. ಮುಂದೊಂದು ದಿನ ಇಂತಾವಕ್ಕೆ ಆತುಕೊಳ್ಳುವ ಕಾಲ ಬರುತ್ತದೆ. ಈ ಜಗತ್ತಿಗೆ ಗಾಂಧಿ ಮಾರ್ಗವಲ್ಲದೆ ಬೇರೊಂದಿಲ್ಲ ಎಂಬುದು ಸತ್ಯ. ಈಗಿನ ಸಾಮಾಜಿಕ ಸ್ಥಿತಿ, ಭೂಗೋಳ ಸ್ಥಿತಿ, ವಾತಾವರಣ ಮಾದರಿಗಳನ್ನೆಲ್ಲಾ ಅತ್ತ ಚಿಂತಿಸಲು ನೂಕುವ ಎಲ್ಲಾ ಸೂಚನೆಗಳಿವೆ. ಆಗ ಈ ಕಾದಂಬರಿಯಲ್ಲಿ ಅಸಾಧ್ಯವೆನಿಸುವ ಅನೇಕ ಸಂಗತಿಗಳಿಗೆ ಮುಂದೊಂದು ದಿನ, "ಹೌದಲ್ಲವೆ! ಬೋರಲಿಂಗಯ್ಯನವರು ಇದನ್ನೇ ಹೇಳಿದ್ದು" ಅನ್ನುವ ಕಾಲ ಬರಬಹುದು. ದೇವರು ಇದ್ದಾನೋ ಇಲ್ಲವೋ ಎಂಬುದು ಭಾರತೀಯರಲ್ಲಿ ಅನಾದಿ ಕಾಲದಿಂದಲೂ ನಡೆಯುತ್ತಿರುವ ಜಿಜ್ಞಾಸೆ. ಬುದ್ಧ, ಬಸವ, ಗಾಂಧಿ ನಂಬಿದ್ದು ಕಾಯಕದಲ್ಲಿ ದೇವರನ್ನು. "ಯಾರಜ್ಜಿ ದೇವರಿಲ್ಲ ಅಂದೋರು? ಆದರೆ ಅವನು ನಮ್ಮ ಕಣ್ಣಿಗೆ ಕಾಣಿಸೋದಿಲ್ಲ, ನಿನ್ನೆ ನೀವು ಮಾತಾಡಿದಿರಲ್ಲಾ ಊರಿಗೆ ಊರೇ ನಾಚಿಕೊಳ್ಳೋ ಹಾಗೆ, ಅವು ದೇವರ ಮಾತಲ್ದೆ ಇನ್ನೇನು? ನಮಗೆಲ್ಲ ನಿಮ್ಮಂಥ ಹಿರಿಯರ ಆಶೀರ್ವಾದವೇ ದೇವರಿದ್ದ ಹಾಗೆ" (ಪು. ೨೯೩). ಕಾದಂಬರಿಯ ಪಾತ್ರದ ಶ್ರೀಲಕ್ಷ್ಮಿ ಹೇಳುವ ಈ ಮಾತುಗಳಲ್ಲಿ ಈಗಿನ ಹಿರಿಯರ ಕಿರಿಯರ ಅಂತರದ ಜಾಗತಿಕ ಕಳಚಿದ ಕೊಂಡಿಗಳ ಹೂರಣವಿದೆ. ಪಶ್ಚಿಮದ ಕಡೆ ಹೊರಳಿದ ಪೂರ್ವದ ಬದುಕಿನಲ್ಲಿ ಅಸ್ತಮಾನಗಳಿವೆ. ಇಂದು ಸಂಸಾರಗಳು ಏನಾಗುತ್ತಿವೆ! ಮುಂದೇನು! ಈ ತಲ್ಲಣಗಳು ಇಂದು ನಮ್ಮನ್ನು ಕಾಡುತ್ತಿವೆ. ಕಾದಂಬರಿ ಇಂತಹ ಗಾಢ ತಾಕಲಾಟಗಳನ್ನು ಎದುರು ಬದುರಾಗಿಸುತ್ತಿಲ್ಲ, ನಿಜ! ಆದರೆ ಗ್ರಾಮದ ನಡುವೆ ನಿಂತು ಗೋಳೀಕರಣದ ಗೋಳನ್ನು ಹೇಳಲೆತ್ನಿಸುತ್ತಿದೆ. ಭಾರತೀಯ ವಿದ್ಯಾಮಾದರಿ ಏನನ್ನು ಬಯಸಬೇಕಾಗಿತ್ತು, ಈಗ ಏನಾಗುತ್ತಿದೆ, ಎಂಬುದನ್ನು ಕಾದಂಬರಿ ಮುಖಾಮುಖಿ ಮಾಡುವುದಿಲ್ಲ. ಆದರೆ ತಣ್ಣಗೆ ಶಿಕ್ಷಣ ಎಂದರೇನು ಎಂಬುದನ್ನು ಹೇಳುತ್ತದೆ. "ನೋಡಿ ಮಕ್ಕಳೇ, ನಾವು ನಮಗೆನಿಸಿದಂತೆ ಬದುಕಿ ಬಾಳಿದ್ದೀವಿ, ಸಾಕಷ್ಟು ಸಂತೋಷವಾಗಿಯೂ ಇದ್ದೀವಿ, ನಮಗೆ ನಿಮಗೆ ಸಿಕ್ಕಷ್ಟು ಹೊಸತನದ ಶಿಕ್ಷಣ ಸಿಕ್ಕಿರಲಿಲ್ಲ. ಹಾಗಾಗಿ ನೀವು ನಮಗಿಂತ ಎರಡು ಹೆಜ್ಜೆ ಮುಂದಕ್ಕೆ ಸಾಗಿದರೆ ನಮಗಷ್ಟು ಸಾಕು ತೃಪ್ತಿ" (ಪು. ೨೮೭). ಈಗ ಮಂಗಳಕ್ಕೆ ಹಕ್ಕಿ ಹಾರಿರಬಹುದು. ಈ ಹಾರಿದ ಹಕ್ಕಿ ಏನು ತರಬಹುದು! ತಂದು ಏನು ಹೇಳಬಹುದು! ಈ ಭೂಮಿತಾಯಿ ಅದರಿಂದ ಏನು ಅಪೇಕ್ಷಿಸ ಬಹುದು! ನಾಗಾಲೋಟದಲ್ಲಿ ಬೆಳೆದಿದೆಯೆಂದು ನಾವು ತಿಳಿದಿರುವ, ತಿಳಿಯುತ್ತಿರುವ, ವಿಜ್ಞಾನ ಹಾಗೂ ಆಧುನಿಕ ವಿದ್ಯೆ ಇಲ್ಲಿ ಕಾದಂಬರಿಕಾರರಿಗೆ ಅಂತರಂಗದಲ್ಲಿ ಕಾಡದೆ ಇಲ್ಲ. "ಒಂದೆರಡು ವರ್ಷಗಳಲ್ಲಿಯೇ ಕಡಿವಾಣ ತನಗೆ ತಾನೆ ಸ್ವಯಂಪ್ರೇರಿತ ಸಂಪೂರ್ಣ ಸಾಕ್ಷರತಾ ಗ್ರಾಮವಾಗಿ ಪರಿವರ್ತನೆಯಾಗಿತ್ತು. ಬದುಕುವ ಎಲ್ಲ ವಿಷಯಗಳ ಸಾಮಾನ್ಯ ಜ್ಞಾನಕ್ಕೆ ಅಲ್ಲಿ ಯಾವ ಕೊರತೆಯೂ ಇರಲಿಲ್ಲ. ಇಂಥ ಪರಿಸರದಲ್ಲಿ ಮೂಗರೂ ಮಾತನಾಡುತ್ತಾರೆ, ಕಿವುಡರೂ ಕೇಳಿಸಿಕೊಳ್ಳುತ್ತಾರೆ" (ಪು. ೨೭೭).

ಕಾದಂಬರಿಯ ಈ ಆಶಯವು ವಾಸ್ತವವೋ ಎಂದರೆ ಭಾರತದಲ್ಲಿ ಎಲ್ಲಿ ಹುಡುಕುವುದು! ಗಾಂಧಿ ಭಾರತವನ್ನು ಈಗ ಮೋದಿ ಭಾರತದವರೆಗೂ ಬಗೆದು ತೆಗೆದರೆ ಇದು ಸಾಧ್ಯವಾಗಿದೆಯೋ, ಎಂದರೆ ಇಲ್ಲ! ಆದರೆ ಇದಾಗಬೇಕೆಂಬುದು ಗಾಂಧಿಯ ಬಯಕೆ. ಕಾದಂಬರಿಕಾರನ ಬಯಕೆ. ಬಯಕೆ ಇಲ್ಲದ ಜೀವ ಬಳಲಿಹೋಗುತ್ತದೆ. ಗುಂಡು ಬೀಳುವ ಕಡೇ ಗಳಿಗೆಯವರೆಗೆ ಗಾಂಧಿ ತಾತ ಇಂಥಾ ಬಯಕೆಯಿಂದ ದೂರ ಸರಿದಿರಲಿಲ್ಲ. ಎಷ್ಟೇ ಹತಾಶನಾದರೂ ಉರಿಯುತ್ತಿರುವ ಬೂದಿಯೊಳಗೂ ಚಿಗುರೊಡೆಯಬಹುದಾದ ಆಶಾಭಾವನೆ ಗಾಂಧಿ



**ನಿಶ್ಶಬ್ದ**

ನಾವಿಬ್ಬರೂ
ವಿರಹಿಗಳಾದಾಗ
ಶಬ್ದವಾಗುತ್ತೇವೆ
ಪ್ರೇಮಿಗಳಾದಾಗ
ನಿಶ್ಶಬ್ದರಾಗುತ್ತೇವೆ!

ಎಂ. ಜಿ. ದೇಶಪಾಂಡೆ
ಬೀದರ್

ಯೊಳಗಿತ್ತು. ಅದು ಗಾಂಧಿ ತತ್ವದೊಳಗಿದೆ. ಈ ದಾರಿಯದು ಕಾದಂಬರಿಕಾರನ ಬಯಕೆ.

"ಒಬ್ಬ ವ್ಯಕ್ತಿಯ ಜೀವನದಲ್ಲಿ ಸಂಭವಿಸ ಬಹುದಾದ ಸರಿತಪ್ಪುಗಳು, ಪಾಪಪುಣ್ಯಗಳು ಆ ವ್ಯಕ್ತಿಯ ಹುಟ್ಟಿಗಿಂತ ಮುಂಚೆಯೇ ನಿರ್ಣಯ ವಾಗುವುದಿಲ್ಲ. ಅವುಗಳನ್ನು ಆ ವ್ಯಕ್ತಿಯ ಜೀವನ ಪಥದ ಸಮಯ ಸಂದರ್ಭಗಳೇ ನಿರ್ಣಯಿಸುತ್ತವೆ" (ಪು ೨೪೮). ಈ ಮಾತುಗಳ ಸನ್ನಿವೇಶಗಳು ಗ್ರಾಮ ಜೀವನದ ಜವನಿ ಹಾಗೂ ಕೃಷ್ಣ ದೇಶಿ ಬದುಕು ಕುರಿತವು. ಶಿಕ್ಷಣ, ಶಿಕ್ಷಣದಲ್ಲಿ ಲೈಂಗಿಕ ವಿಚಾರಗಳು, ಮನಃಶಾಸ್ತ್ರ, ಮಾನವಶಾಸ್ತ್ರ ಇವೆಲ್ಲವೂ ನಗರ ಮಾದರಿಯವು. ಬದುಕಿನಲ್ಲಿ ಗ್ರಾಮ ನಗರಗಳ ಇಬ್ಭಾಗಗಳಿಲ್ಲ. ಹೆಣ್ಣು ಗಂಡುಗಳ ಅಸಹಾಯಕ ಪರಿಸ್ಥಿತಿಗಳಿರುತ್ತವೆ. ಅವುಗಳ ತೀರುವಳಿಗಳಿರುತ್ತವೆ. ಈಗಿನ ನವೀನ ಬದುಕಿನ ನವ್ಯ ಮಾದರಿಯಲ್ಲಿರ ಬಹುದಾದ ಗಂಡು ಹೆಣ್ಣುಗಳ ಬದುಕು ಆ ಕಾದಂಬರಿಯಲ್ಲಿ ಹಸಿಹಸಿಯಾಗಿಲ್ಲದೆ ಪರಸ್ಪರ ಆತುಕೊಳ್ಳುವಿಕೆಯ ಒಂದು ಬದುಕು ಮಾದರಿ ಯಾಗಿದೆ. ನೀವು ಏನೇ ಹೇಳಿ ಆರ್ಥಿಕ ಸ್ವಾತಂತ್ರ್ಯವೇ ಮುಖ್ಯ ಸಮಾನ ಹಕ್ಕನ್ನು, ಒಟ್ಟು ಕುಟುಂಬದೊಳಗಿನ ಸಮಾನ ಹಕ್ಕನ್ನು, ಗ್ರಾಮದೊಳಗಿನ ಸಮಾನ ಹಕ್ಕನ್ನು ಬಯಸುತ್ತದೆ. ಇದು ದೇಶಕ್ಕೆ ಬೆನ್ನೆಲುಬು. ಆದರೆ ಇದೇ ಸಮಯದಲ್ಲಿ ದೇಶೀಯ ಮಾದರಿಯನ್ನು ಗಟ್ಟಿಯಾಗಿ ಕಾದಂಬರಿ ಅವಲಂಬಿಸುತ್ತದೆ. ಇದೇ ಕಾದಂಬರಿಯ ಸತ್ವ ಸೂತ್ರ.

ಇದೇ ಸಮಯದಲ್ಲಿ ಕಾದಂಬರಿಯು ಭಾರತೀಯ ಒಟ್ಟು ಕುಟುಂಬದ ಮಾದರಿಯನ್ನು ಪೋಷಿಸುತ್ತದೆ. ಲಘು ಕುಟುಂಬಗಳು ಇಂದು ಗ್ರಾಮಗಳನ್ನು ಮುದಿಯನ್ನಾಗಿಸುತ್ತಿವೆ. ಅತ್ತ ಹೋದ ಮಕ್ಕಳು ಇತ್ತ ಬರುತ್ತಿಲ್ಲ. ಇತ್ತ ಇಳಿ ವಯಸ್ಸಿನವರು ಅನಾಥರಾಗಿ ಮೂಲೆ ಹಿಡಿದಿರುವುದು ಇಂದಿನ ಜಾಗತಿಕ ಸತ್ಯ. "ಯಾರದ್ದೇ ಸಂಪಾದನೆಯಾದರೂ ಅದು ಕುಟುಂಬ ನಿರ್ವಹಣೆಗಾಗಿರುವುದರಿಂದ ಅದು ಒಟ್ಟು ಕುಟುಂಬದ ಸಂಪಾದನೆಯೆಂದೇ ತಿಳಿಯಬೇಕು" (ಪು. ೨೪೦). ಈ ತತ್ವಗಳು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಎಲ್ಲ ಕುಟುಂಬಗಳಲ್ಲಿತ್ತು. ಆದರೆ ಇಂದು ಏನಾಗಿದೆ! ಛಿದ್ರ ಕುಟುಂಬ ನೀತಿಗಳು ಕೇವಲ ಕೂಡು ಕುಟುಂಬಗಳನ್ನು ಅಲ್ಲಾಡಿಸುತ್ತಿಲ್ಲ, ಕೂಡು ಭಾರತವನ್ನೇ ಅಲ್ಲಾಡಿಸುತ್ತಿವೆ. ಏನು ದುಡಿದರೇನು! ಅದು ತಿರುಗಾಡುವ ಬದುಕಿನ ಮಾದರಿಗಳಾಗುತ್ತಿವೆ. ಕಾದಂಬರಿಯಲ್ಲಿ ಮೇಷ್ಟ್ರು ನರಸಿಂಹ ಮೂರ್ತಿಗಳು ಅವರ ಪತ್ನಿ ಸಾವಿತ್ರಮ್ಮ ಜಾತಿ ಮೀರಿ ವರ್ತಿಸುತ್ತಾ ಜಾತಿ ಮೀರಿ ಶಿಕ್ಷಣ ಕೊಟ್ಟು ಮಕ್ಕಳ ಸ್ಥಾನದಲ್ಲಿ ಒಕ್ಕಲಿಗರ ಮಕ್ಕಳನ್ನು ಸಾಕುವ ಪರಿ ಗಾಂಧಿ ಭಾರತವು ಬಯಸುವ ಮಾದರಿ. ಇದು ಸ್ವಾತಂತ್ರ್ಯಾ ನಂತರದ ಪ್ರಾರಂಭದಲ್ಲಿ ಸಾಧ್ಯವಾಗುವತ್ತ ಸಾಗುತ್ತಿತ್ತು. ಮುಂದೆ ಅದಕ್ಕೆ ಪೆಟ್ಟು ತಗುಲಿದ್ದು ಜನತಂತ್ರ ವ್ಯವಸ್ಥೆಯಲ್ಲಿ ಆವರಿಸಿದ ಲೋಪ. ಅದಕ್ಕೆ ಕಾರಣ ಹಲವಾರು ಇರಬಹುದು. ಮಾತೃಭಾಷಾ ಶಿಕ್ಷಣದ ಅವಸಾನ, ಶಿಕ್ಷಣ ವ್ಯಾಪಾರೀಕರಣ, ರಾಜಕೀಯ



ನನಗೆ ಆಶ್ರಯ ಮನೆ ಕೊಟ್ಟಿಲ್ಲಾ, ಅದಕ್ಕೆ ಇದನ್ನೇ ನಿವಾಸವನ್ನಾಗಿ ಮಾಡಿಕೊಂಡಿದ್ದೇನೆ ಬುದ್ದಿ....!

ಅಧೋಗತಿ, ಜಾಗತೀಕರಣದ ವ್ಯಾಪಾರೀಕರಣ, ಏನೇ ಇರಲಿ, ಕಾದಂಬರಿ ಇವೆಲ್ಲವನ್ನು ಆಚೆಗೆ ನೂಕಿ ಗ್ರಾಮ ಭಾರತ ಚಿಂತನೆಗೆ ಒತ್ತು ಕೊಡುತ್ತದೆ. ಭವಿಷ್ಯದ ಕಿರುಬೆಳಕು ಹಾಯಿಸುತ್ತದೆ.

'ವಿಜ್ಞಾನವೇ ನಿಜವಾದ ಧರ್ಮ', ಉಳಿದವೆಲ್ಲ ಅಭಿಪ್ರಾಯಗಳು' (ಪು. ೧೪೨) ಎಂದು ಹೇಳುವ ಕಾದಂಬರಿ ಸತ್ಯವು ಲೋಕದ ಸತ್ಯ. ಇಂದು ಧರ್ಮ ಹಾಗೂ ಮೌಢ್ಯದ ಆಟ ಜಗವನ್ನು ತಲ್ಲಣಿಸುತ್ತಿದೆ. ಕಾದಂಬರಿಯು ವಿಜ್ಞಾನ, ಸಮಾಜವಿಜ್ಞಾನ, ಕುಟುಂಬವಿಜ್ಞಾನ, ಪರಿಸರವಿಜ್ಞಾನ, ಪಶುವಿಜ್ಞಾನ, ರೈತವಿಜ್ಞಾನಗಳೆಲ್ಲವನ್ನೂ ಹೇಳಬೇಕೆನ್ನುವ ತವಕದಲ್ಲಿ ಕಾದಂಬರಿಯ ಬಂಧವನ್ನು, ಸಾಂಪ್ರದಾಯಿಕ ಹೆಜ್ಜೆಯ ಕಾಲ್ಪನಿಕ ನಿಮಿಷಗಳನ್ನು, ಕೌತುಕ ವಿಚಾರಗಳನ್ನು, ಸುಳ್ಳನ್ನು ಕಟ್ಟುವ, ಅದರಲ್ಲಿ ಸತ್ಯ ಹುಡುಕುವ, ಕಲೆಯನ್ನು ನಿರಾಕರಿಸುತ್ತದೆ. ಈ ನಿರಾಕರಣೆಯು ಸಾಂಪ್ರದಾಯಿಕ ಕಾದಂಬರಿ ತತ್ವಗಳನ್ನು ನಿರಾಕರಿಸುತ್ತದೆಯೇ ಹೊರತು ಬದುಕಿನ ನಿರಾಕರಣೆಯನ್ನಲ್ಲ. ಕಾದಂಬರಿಯೆಂದರೆ ಅದೊಂದು ಕಡೆಗೋಲು, ಅದರಲ್ಲಿ ಬೆಣ್ಣೆ ಬರಬೇಕು, ಮಜ್ಜಿಗೆಯಾಗಬೇಕು. ಹೀಗೆ ಆಲೋಚಿಸಿದಾಗ ಕಾದಂಬರಿಯ ಒಳಗಡೆ ಗ್ರಾಮ ಮೂಲದ ಕರೆದ ಹಾಲಿನ ಹೆಪ್ಪಾದ ಮೊಸರಿದೆ, ಕಡೆಗೋಲು ಕಂಬವೂ ಇದೆ. ಕಡೆಯುವ ಕೈಗಳೂ ಇವೆ. ಕನ್ನಡದ ಪ್ರಸಿದ್ಧ ಸಾಹಿತಿಗಳು ಅಥವಾ ಜನಪ್ರಿಯ ಸಾಹಿತಿಗಳ ಮಾದರಿ ಇದಲ್ಲ. ಓದುಗನನ್ನು ಸೆಳೆದಿಟ್ಟುಕೊಳ್ಳುವ ಪರಂಪರೆಯೂ ಇಲ್ಲಿಲ್ಲ. ಇಲ್ಲಿ ಕಾದಂಬರಿಯ ಪ್ರವೇಶ ಆದರ್ಶದತ್ತ ಸಾಗುವ ಮಾದರಿಯೊಂದನ್ನು ಗಮನಿಸುತ್ತ ಹೋಗುವ ಒಂದು ಪರಿ. ಬದುಕಿನ ತಾಕಲಾಟಕ್ಕೆ ಇಲ್ಲಿ ತಾವಿಲ್ಲ. ಸಮಾಜದ ಘರ್ಷಣೆಗೆ ಇಲ್ಲಿ ಜಾಗವಿಲ್ಲ. ಶೀತಲ ಮಾರ್ಗಗಳಿಗೆ ಎಡೆಯಿಲ್ಲ. ಇವೆಲ್ಲವೂ ಇಲ್ಲದ ಗ್ರಾಮಭಾರತವು ಭಾರತದೊಳಗಿಲ್ಲ. ಈ ಮಾತು ಕಾದಂಬರಿಯನ್ನು ಸರ್ವೋದಯದ ಸತ್ಯದ ಕಡೆಗೆ ನಿಲ್ಲಿಸುವಲ್ಲಿ ತಾಕಲಾಟವಿಲ್ಲದ ಭಾರತದ ಪ್ರತಿನಿಧಿಯಾಗಿಸುತ್ತದೆ. ಗಾಂಧಿ ಭಾರತ ಕುದಿಯುತ್ತಿತ್ತು. ಗಾಂಧಿ ಭಾರತ ಕುದಿಯುತ್ತಲೇ ಇದೆ. ಗಾಂಧಿ ಭಾರತ ತಾಕಲಾಟದಲ್ಲೇ ಇದೆ. ಗಾಂಧಿ ಭಾರತ ಶಾಂತಿಯನ್ನು, ಅಹಿಂಸೆಯನ್ನು ಬಯಸುತ್ತದೆ, ನಿಜ. ಆದರೆ ಅದರೊಳಗೆ ಘರ್ಷಣೆಯಿಲ್ಲದೆ ಶಾಂತಿ, ಅಹಿಂಸೆ ಸೂತ್ರಗಳು ಹೊರಹೊಮ್ಮುವುದಿಲ್ಲ. ಕಾದಂಬರಿಯಲ್ಲಿ ಆದರ್ಶವೇ ಜೀವಾಳವಾಗಿ ಸಾಗುವ ಮಾದರಿಗಳಿವೆ. ಕಾದಂಬರಿಯಲ್ಲಿ ಬರುವ ಬಾಲಕೃಷ್ಣೇಗೌಡ, ಜಾಂಬವಿ, ಎಲಿಜಬತ್, ಮೋಹನಾಕ್ಷಿ, ರಾಬರ್ಟ್ ಇವರೆಲ್ಲರೂ ಕಾದಂಬರಿ ನಡೆಸುವ ಅನೇಕ ಪಾತ್ರಗಳು, ಕಾದಂಬರಿಕಾರರ ಬಯಕೆಯಂತೆ ಸನ್ಮಾರ್ಗದ ಗುರಿ ಮುಟ್ಟುವ ಮಾದರಿಗಳು. ಹಾಸನದಲ್ಲಿ ಬರುವ ಇರಾಕಿ ಬಂಗಲೆ ಎಂಬುದು ನಾವುಗಳು ಹಾಸನದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಕಂಡುಂಡ ಸಾಹುಕಾರನೊಬ್ಬನ ಬಂಗಲೆ. ಇರಾನಿ ಬಂಗಲೆ ಎಂದು ಸಹ ಕರೆಯುತ್ತಿದ್ದರು. ಅಲ್ಲಿನ ಇಂಪೀರಿಯಲ್ ಟಾಕೀಸಿನ ಷರೀಫ್ ಅವರ ಪುತ್ರ ಆಧುನಿಕ ಜಗತ್ತಿನ ರಿಯಲ್ ಎಸ್ಟೇಟ್ ವ್ಯಾಪಾರಕ್ಕೆ ಕೈ ಹಾಕಿದ್ದು ಆ ಬಂಗಲೆ ಕೊಂಡಾಗಲೇ! ಅನಂತರದಲ್ಲಿ ಅಲ್ಲಿಂದ ನಿವೇಶನ ಮಾರಿ ಷರೀಫ್ ಸಾಮ್ರಾಜ್ಯವನ್ನು ಬೆಂಗಳೂರಲ್ಲಿ ಡೈಮಂಡ್ ಡಿಸ್ಟ್ರಿಕ್ಟ್, ಪ್ಲಾಟಿನಂ ಡಿಸ್ಟ್ರಿಕ್ಟ್ ಎಂದೆಲ್ಲಾ ಮುಗಿಲೆತ್ತರ ಕಟ್ಟಡ ಕಟ್ಟಿ ದುಬೈವರೆಗೂ ಹೋಗಿ ಈಗ ಮಲೆನಾಡಿನಲ್ಲಿ ಐ.ಬಿ.ಸಿ. ಕಂಪೆನಿ ಹೆಸರಿನಲ್ಲಿ ಸಾವಿರಾರು ಎಕರೆ ಕಾಫಿ ತೋಟದ ಮಾಲೀಕನೆಂಬುದು ಆ ಕಂಪೆನಿಯ ಒಂದು ಭಾಗ. ಈ ಕಾದಂಬರಿ ಇಂತಹ ಸ್ಥಿತ್ಯಂತರಕ್ಕೆ ತುತ್ತಾದ ನೆನಪು ತರುತ್ತದೆ.

ಕಡಿವಾಣ ಒಂದು ಸ್ಥಳವೂ ಹೌದು, ಕಾದಂಬರಿಯ ಶೀರ್ಷಿಕೆಯೂ ಹೌದು. ಭಾರತ ಬದುಕಿಗೆ ಹಾಕಿಕೊಳ್ಳಬೇಕಾದ ಕಡಿವಾಣದ ಸಂಕೇತವೂ ಹೌದು. ಕಾಲದ ಹೊಂದಾಣಿಕೆಗೆ ಬದುಕನ್ನು ಬಾಗಿಸಿಕೊಳ್ಳದ ಹಠದ ಪ್ರತಿಮಾ ವಿಧಾನವೂ ಹೌದು. ಇದು ಗಾಂಧಿ ಮಾದರಿ. ವಿವೇಕಾನಂದರ ಅರಿವು. ಮೇಕ್ ಇನ್ ಇಂಡಿಯಾ ಎರಡೂವರೆ ಲಕ್ಷ ಕೋಟಿಯ ವ್ಯಾಪಾರದ ಮಾತು. ೧೯ನೇ ಶತಮಾನದ ತುದಿಯಲ್ಲಿ ನಿಂತು ಭಾರತದ ಬಗ್ಗೆ ಹೇಳಿದ ಅಂದಿನ ನರೇಂದ್ರನ ಸಂದೇಶವೇನು! ೨೧ನೇ ಶತಮಾನದ ಆದಿಯಲ್ಲಿ ನಿಂತು ಹೇಳುತ್ತಿರುವ ಇಂದಿನ ನರೇಂದ್ರನ ಬಿಸಿನೆಸ್ ಏನು! ಇಂದು ಮಾಧ್ಯಮಗಳು ಭಜನೆ ಮಾಡುತ್ತಾ ಇಂಥಾ ಬಿಸಿನೆಸ್‌ಗಿಳಿದಿವೆಯಲ್ಲಾ! ಇದಕ್ಕೆ ಕಡಿವಾಣ ಹೇಗೆ! ಇದೇ ಕಾದಂಬರಿ ಓದಿದಾಗಿನ ಚಿಂತೆ.

**ಡಾ|| ರಾಜೇಗೌಡ ಹೊಸಹಳ್ಳಿ**
ನಂ. ೪೧೫, ಒಂದನೇ ತಿರುವು, ಟೀಚರ್ಸ್ ಕಾಲನಿ,
ನಾಗರಭಾವಿ
ಬೆಂಗಳೂರು – ೫೬೦ ೦೭೨

ಹಿಮಾಲಯದ ಗಂಗೋತ್ರಿಯ ಒಡಲಲ್ಲಿ ಉಗಮಿಸುವ ಗಂಗಾ ನದಿಯ ತಪ್ಪಲು ಸಹಸ್ರಾರು ವರ್ಷಗಳಿಂದ ನೂರಾರು ವಿವಿಧ ನಾಗರಿಕತೆಗಳಿಗೆ, ಸಂಸ್ಕೃತಿಗಳಿಗೆ ತವರು. ಬಂಗಾಳಕೊಲ್ಲಿಯವರೆಗೆ ಸುಮಾರು ೨೫೦೦ ಕಿ.ಮೀ.ನಷ್ಟು ದೂರ ಹರಿಯುವ ಗಂಗೆ ಕೋಟ್ಯಂತರ ಜನರಿಗೆ ಜೀವನದಿ. ಗಂಗೆಯನ್ನು ಪೂಜಿಸುವ ನಮ್ಮ ಸಮಾಜ, ನಮ್ಮ ಸರ್ಕಾರಗಳು ನಗರೀಕರಣ, ಕೈಗಾರಿಕೀಕರಣಗಳ ಹೆಸರಿನಲ್ಲಿ ಈ ಮಹಾನ್ ನದಿಯನ್ನು, ಪರಿಸರ ಮಾಲಿನ್ಯ ನಿವಾರಣೆಯ ಎಲ್ಲ ಅಂಶಗಳನ್ನು ಗಾಳಿಗೆ ತೂರಿ, ಅತ್ಯಧಿಕ ಪ್ರಮಾಣದಲ್ಲಿ ಕಲುಷಿತಗೊಳಿಸುತ್ತ, ಬಂದಿರುವುದು ನಮ್ಮೆದುರಿಗಿರುವ ವಾಸ್ತವ. ಇದೀಗ ಅದನ್ನು ಶುದ್ಧೀಕರಿಸುವ ದಿಶೆಯಲ್ಲಿ ಯೋಜನೆಗಳ ಮೇಲೆ ಯೋಜನೆಗಳನ್ನು ರೂಪಿಸಲು ಭ್ರಷ್ಟ ಸರ್ಕಾರಗಳು ಪೈಪೋಟಿಗೆ ನಿಂತಿವೆ. ಇದಕ್ಕೆ ಕೊನೆ ಎಲ್ಲಿ ?

# ಗಂಗೆ, ನೀನು ಸದಾ ಕೊಳಕಿ !

**ನಾ. ದಿವಾಕರ**

ಇನ್ನೆಷ್ಟೇ ನರೇಂದ್ರ ಮೋದಿಗಳು ಭಾರತದ ಪ್ರಧಾನಿಗಳಾದರೂ ಗಂಗಾ ನದಿಯಲ್ಲಿನ ಕೊಳಕು ನೀರನ್ನು ಶುಚಿಗೊಳಿಸುವುದು ಅಸಾಧ್ಯ. 'ಗಂಗೆ, ನೀನು ಸದಾ ಕೊಳಕಿ' ಎಂಬ ಹಣೆಪಟ್ಟಿ ಹೊತ್ತಿರುವ ಪವಿತ್ರ ಗಂಗೆ ಪರಿಶುದ್ಧಳಾಗ ಬೇಕಾದರೆ ಜನರು ತಮ್ಮ ಮನೋಭಾವ, ವರ್ತನೆ, ನಡವಳಿಕೆ, ಧೋರಣೆಗಳನ್ನು ಬದಲಾಯಿಸಿಕೊಂಡು ತಮ್ಮ ಮೂಢನಂಬಿಕೆಗಳನ್ನು, ಅಂಧವಿಶ್ವಾಸಗಳನ್ನು ಕೈಬಿಡಬೇಕು. ಇಲ್ಲವಾದಲ್ಲಿ ಗಂಗೆಯ ಶುದ್ಧೀಕರಣಕ್ಕಾಗಿ ಸರ್ಕಾರ ವಿನಿಯೋಗಿಸುವ ಕೋಟ್ಯಂತರ ರೂಪಾಯಿಗಳನ್ನು ನದಿಯಲ್ಲಿ ಹೋಮ ಮಾಡಿದಂತಾಗುತ್ತದೆ. ಸುಟ್ಟ ಮೃತ ದೇಹಗಳನ್ನು, ಅರೆಬೆಂದ ಮೃತ ದೇಹಗಳನ್ನು, ಸತ್ತ ಪ್ರಾಣಿಗಳನ್ನು ಗಂಗಾ ನದಿಯಲ್ಲಿ ಎಸೆಯುವುದನ್ನು ಬಿಡಬೇಕು. ರಾಸಾಯನಿಕ ವಸ್ತುಗಳು ಮತ್ತು ಜೀವಾಣು ವಿಷಭರಿತ ಕೈಗಾರಿಕಾ ತ್ಯಾಜ್ಯ ಗಂಗಾ ನದಿಯಲ್ಲಿ ಬೆರೆಯುವುದನ್ನು ತಪ್ಪಿಸಬೇಕು. ಗಂಗಾ ನದಿ ತೀರದಲ್ಲಿರುವ ಪಟ್ಟಣಗಳು, ನಗರಗಳಲ್ಲಿನ ಬ್ಯಾಕ್ಟೀರಿಯಾಗಳಿಂದ ತುಂಬಿರುವ ಚರಂಡಿಯ ನೀರನ್ನು ಗಂಗಾನದಿಗೆ ಬಿಡದಂತೆ ಎಚ್ಚರವಹಿಸಬೇಕು. ಕೃಷಿ ಭೂಮಿಯಿಂದ ಹರಿಯುವ ರಾಸಾಯನಿಕ/ಜೀವಾಣು ವಿಷಭರಿತ ನೀರು ಗಂಗೆಯ ಒಡಲನ್ನು ಸೇರದಂತೆ ತಡೆಗಟ್ಟಬೇಕು.

ಹಿಮಾಲಯದ ಗಂಗೋತ್ರಿಯ ಒಡಲಲ್ಲಿ ಉಗಮಿಸುವ ಗಂಗೆ ಹಿಮಾಲಯದಿಂದ ಬಂಗಾಳ ಕೊಲ್ಲಿಯವರೆಗೆ ೨೫೦೦ ಕಿಲೋಮೀಟರ್ ವ್ಯಾಪ್ತಿಯಲ್ಲಿ ನೂರಕ್ಕೂ ಹೆಚ್ಚು ಪಟ್ಟಣ/ನಗರಗಳನ್ನು ಕ್ರಮಿಸಿ ಹರಿಯುತ್ತದೆ. ಭಾರತೀಯ ಜನತೆ ಆಧ್ಯಾತ್ಮಿಕವಾಗಿ, ಭಾವನಾತ್ಮಕವಾಗಿ ಗಂಗೆಯೊಡನೆ ಅವಿನಾಭಾವ ಸಂಬಂಧವನ್ನು ಹೊಸೆದುಕೊಂಡಿದ್ದಾರೆ, ಬೆಸೆದುಕೊಂಡಿದ್ದಾರೆ. ೧೯೮೪ರ ಡಿಸೆಂಬರ್‌ನಲ್ಲಿ ಗಂಗಾ ಕಾರ್ಯಪಡೆ ಯೋಜನೆಯನ್ನು ಘೋಷಿಸಿ ೧೯೮೫ರ ಏಪ್ರಿಲ್ ತಿಂಗಳಲ್ಲಿ ಕೇಂದ್ರ ಸರ್ಕಾರ ಇಂತಹ ಪ್ರಾಯೋಜಿತ ಯೋಜನೆಗೆ ತನ್ನ ಅಂಗೀಕಾರ ನೀಡಿತ್ತು. ಗಂಗಾ ನದಿಯಲ್ಲಿನ ಮಾಲಿನ್ಯವನ್ನು ತಡೆಗಟ್ಟುವ ಮತ್ತು ಕಡಿಮೆ ಮಾಡುವ ಬೃಹತ್ ಯೋಜನೆ ಇದಾಗಿತ್ತು. ನಂತರ ಕೇಂದ್ರ ಸರಕಾರ ಗಂಗಾ ಪ್ರಾಧಿಕಾರವನ್ನು ಸ್ಥಾಪಿಸಿ ೧೯೮೫ರ ಸೆಪ್ಟೆಂಬರ್‌ನಲ್ಲಿ ಈ ಪ್ರಾಧಿಕಾರವನ್ನು ಪ್ರಧಾನ ಮಂತ್ರಿಗಳ ಘನ ಅಧ್ಯಕ್ಷತೆಯಲ್ಲಿ 'ರಾಷ್ಟ್ರೀಯ ಗಂಗಾ ಸಂರಕ್ಷಣಾ ಪ್ರಾಧಿಕಾರ' ಎಂದು ಪುನರ್‌ನಾಮಕರಣ ಮಾಡಿತ್ತು. ೧೯೮೫ರ ಜೂನ್‌ನಲ್ಲಿ ಕೇಂದ್ರ ಸರ್ಕಾರ ಗಂಗಾ ಯೋಜನಾ ನಿರ್ದೇಶನಾಲಯವನ್ನೂ ಸ್ಥಾಪಿಸಿತ್ತು. ಕೇಂದ್ರವು ಗಂಗಾ ಪ್ರಾಧಿಕಾರದ ಮೇಲ್ವಿಚಾರಣೆಯಲ್ಲಿ ಗಂಗಾ ಯೋಜನೆಯನ್ನು ಜಾರಿ ಗೊಳಿಸುವುದು ಈ ನಿರ್ದೇಶನಾಲಯದ ಆದ್ಯತೆಯಾಗಿತ್ತು. ನಂತರದಲ್ಲಿ ಗಂಗಾ ಯೋಜನಾ ನಿರ್ದೇಶನಾಲಯವನ್ನು ರಾಷ್ಟ್ರೀಯ ನದಿ ಸಂರಕ್ಷಣಾ ನಿರ್ದೇಶನಾಲಯ (ಎನ್‌ಆರ್‌ಸಿಡಿ) ಎಂದು ಮರುನಾಮಕರಣ ಮಾಡಲಾಯಿತು.

ಗಂಗಾ ಕಾರ್ಯಪಡೆ ಯೋಜನೆ ಒಂದನೆಯ ಹಂತದಲ್ಲಿ ಉತ್ತರ ಪ್ರದೇಶ, ಬಿಹಾರ ಮತ್ತು ಪಶ್ಚಿಮ ಬಂಗಾಲದ ೨೫ ಪ್ರಥಮ ದರ್ಜೆ ನಗರಗಳಿಂದ ವರ್ಜಿತವಾಗುವ ೧೩೨೪ ಎಂಎಲ್‌ಡಿ (ಒಂದು ದಿನದಲ್ಲಿ ದೊರೆಯುವ ದಶಲಕ್ಷ ಲೀಟರ್) ತ್ಯಾಜ್ಯ ನೀರನ್ನು ಸಂಗ್ರಹಿಸಿ ೮೮೨ ಎಂಎಲ್‌ಡಿ ನೀರನ್ನು ಸಂಸ್ಕರಿಸಲು ತೀರ್ಮಾನಿಸಲಾಗಿತ್ತು. ಈ ಯೋಜನೆಯನ್ನು ೧೯೯೦ರ ಮಾರ್ಚ್ ವೇಳೆಗೆ ಪೂರ್ಣಗೊಳಿಸಲು ಎನ್‌ಆರ್‌ಸಿಡಿ ನಿರ್ಧರಿಸಿದ್ದು ನಂತರ ಆ ಗಡುವನ್ನು ಮಾರ್ಚ್

(೬೧ನೇ ಪುಟಕ್ಕೆ )



ಕಾಳಿಂಗರಾಯರು ಕನ್ನಡ ಭಾವಗೀತೆಗಳನ್ನು ಹಾಡಲು ಅವರಿಗೆ ಪ್ರೇರಕ ಶಕ್ತಿಯಾಗಿದ್ದವರಲ್ಲಿ, ಅತಿ ಮುಖ್ಯರಾದವರೆಂದರೆ ಅ. ನ. ಕೃಷ್ಣರಾಯರು. ಮಿತ್ರರ ಒತ್ತಾಯಕ್ಕೆ ಮಣಿದು ೧೯೪೬ರಲ್ಲಿ ಹುಯಿಲಗೋಳ ನಾರಾಯಣರಾಯರ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬ ಗೀತೆಯನ್ನು ಸ್ವರ ಸಂಯೋಜಿಸಿ ಹಾಡಿಸಿದರು. ಕನ್ನಡ ರಾಜ್ಯೋತ್ಸವದ ನಂತರವೂ, ಈ ಹಾಡನ್ನು ಹಾಡುತ್ತಿದ್ದ ಕಾಳಿಂಗರಾಯರನ್ನು ಕರ್ನಾಟಕ ಸರ್ಕಾರ ಸನ್ಮಾನಿಸಿತು. 'ತೂಗಿರೇ ರನ್ನವಾ, ತೂಗಿರೇ ಚಿನ್ನವಾ', 'ಬಾರಯ್ಯ ಬೆಳದಿಂಗಳೇ', 'ಅಮ್ಮಕ ಜಮ್ಮಕದಿಂದ ಬರುತಾಳೆ ರತುನಾ', 'ಆಲಕ್ಕೆ ಹೂವಿಲ್ಲ', 'ಮೂಡಲ್ ಕುಣಿಗಲ್‌ಕೆರೆ', 'ಬೆಟ್ಟ ಬಿಟ್ಟಿಳಿಯುತ್ತ ಬಂದಾಳೆ ಚಾಮುಂಡಿ'... ಇಂತಹ ಜಾನಪದ ಗೀತೆಗಳು. ಒಂದೇ, ಎರಡೇ ? ಕಾಳಿಂಗರಾಯರು ಜಾನಪದ ಗೀತೆಗಳಿಗೆ ಒಂದು ಹೊಸತನವನ್ನು ತಂದುಕೊಟ್ಟ ಮಾಂತ್ರಿಕ. ಈ ಧ್ವನಿಮುದ್ರಿಕೆಗಳನ್ನು ಕೇಳಿದವರು ಮೈಮರೆಯುತ್ತಿದ್ದರು. ಹಾಡುವುದಿರಲಿ, ಓದುವುದಕ್ಕೂ ತೊಡಕೆನಿಸುತ್ತಿದ್ದ ಜಿ. ಪಿ. ರಾಜರತ್ನಂರವರ 'ರತ್ನನ ಪದಗಳನ್ನು' ಭಾವಪೂರ್ವಕವಾಗಿ ಹಾಡಬಹುದೆಂಬುದನ್ನು ತೋರಿಸಿಕೊಟ್ಟು ಹಾಡಿದ ಮೊಟ್ಟ ಮೊದಲಿಗರು ಕಾಳಿಂಗರಾಯರು.



# ಕಿನ್ನರ ಕಂಠದ ಕನ್ನಡ ಕೋಗಿಲೆ ಪಿ. ಕಾಳಿಂಗರಾವ್

ಯಾವುದೇ ಒಂದು ವ್ಯಕ್ತಿಯ ಹೆಸರು ಚರಿತ್ರೆಯ ಪುಟಗಳಲ್ಲಿ ನಿರಂತರವಾಗಿ ನಿಂತಿದೆಯೆಂದರೆ, ಆ ವ್ಯಕ್ತಿ ಯಾವುದಾದರೂ ರಂಗದಲ್ಲಿ ದಿವ್ಯಸಾಧಕನಾಗಿ ತನ್ನ ಹೆಜ್ಜೆಯ ಗುರುತುಗಳನ್ನು ಬಿಟ್ಟು ಹೋಗಿರುವುದಂತೂ ನಿಶ್ಚಯ. ಅಂತಹ ವ್ಯಕ್ತಿಗಳ ನೆನಪು ಎಂದೂ ಜನಮನಗಳಿಂದ ಮಾಸಿಹೋಗುವಂತಹುದಲ್ಲ. ಎಂದೆಂದೂ ಜನತೆಯ ಹೃದಯದಲ್ಲಿ ಹಚ್ಚಹಸುರಾಗಿ ನಿಂತುಬಿಡುತ್ತದೆ. ಅಂತಹ ವ್ಯಕ್ತಿಗಳ ಸಾಲಿನಲ್ಲಿ ಥಳಾಗಿ ಮಿನುಗುವ ಹೆಸರು ಪಿ. ಕಾಳಿಂಗರಾವ್.

ಇಂತಹ ಕಾಳಿಂಗರಾವ್ ಮನೆಮನೆಯನ್ನು ಮುಟ್ಟಿದ್ದು, ಮನಮನವನ್ನು ತಟ್ಟಿದ್ದು ಅತಿಶಯವೇನಲ್ಲ. ಅಂಥ ಮೇರುಕಲಾವಿದ ಕಾಳಿಂಗರಾವ್. ಅದಕ್ಕೊಂದು ಉದಾಹರಣೆಯನ್ನು ಕೊಡಬಹುದಾದರೆ, ಕಾಳಿಂಗರಾಯರು ಹಾಡಿರುವ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು." ಆ ಹಾಡಿಗೂ, ಅವರಿಗೂ ಏನೋ ಒಂದು ಅವಿನಾಭಾವ ಸಂಬಂಧವಿದ್ದಿರಬೇಕು. ಬಹಳಷ್ಟು ಕಾರ್ಯಕ್ರಮಗಳಲ್ಲಿ ಆ ಹಾಡನ್ನು ಕಾಳಿಂಗರಾಯರು ಹಾಡುತ್ತಿದ್ದರು. ಹುಯಿಲಗೋಳ ನಾರಾಯಣರಾಯರ ಆ ಸುಂದರ ಕವಿತೆ ಪಿ. ಕಾಳಿಂಗರಾಯರ ಸಿರಿಕಂಠದಲ್ಲಿ ಮೂಡಿಬಂದು ಮನೆಮನೆಯ ಅಂಗಳವನ್ನು ತಲುಪಿದ್ದರಲ್ಲಿ ಅಚ್ಚರಿಯೇನಿಲ್ಲ. ಮೈಸೂರಿನ ವುಡ್‌ಲ್ಯಾಂಡ್ಸ್ ಚಿತ್ರಮಂದಿರದಲ್ಲಿ ಪ್ರತಿದಿನ ಚಿತ್ರ ಶುರುವಾಗುವ ಮುನ್ನ ಹಾಕುತ್ತಿದ್ದ ನಾಂದಿಗೀತೆ ಪಿ. ಕಾಳಿಂಗರಾಯರು ಹಾಡಿದ, ಸಮಸ್ತ ಕನ್ನಡಿಗರ ಹೃದಯವನ್ನು ಗೆದ್ದಿದ್ದ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು." ಹಾಗಾಗಿ ಅವರ ಚಿರಪರಿಚಿತ ಕಂಠ, ಈ ಚಿರಪರಿಚಿತ ಹಾಡು, ನಿರಂತರ ಕೇಳ್ಮೆಯಿಂದ ಜನಮನದಲ್ಲಿ ಚಿರಸ್ಥಾಯಿಯಾಗಿ ನೆಲಸಿಬಿಟ್ಟಿವೆ.

ಕಾಳಿಂಗರಾಯರ ಜೇನದನಿಯಲ್ಲಿ ನಾನು ಮೊದಲ ಬಾರಿ ಕೇಳಿದ್ದು ರೇಡಿಯೋದಲ್ಲಿ. ನಂತರದ ದಿನಗಳಲ್ಲಿ ಅವರು ಜನಪದಗೀತೆಗಳು, ದೇವರನಾಮಗಳು, ವಚನಗಳು, ಭಾವಗೀತೆಗಳು. ಇಂತಹ ಸಾಹಿತ್ಯ ಪ್ರಕಾರಗಳಿಗೆ ತಮ್ಮನ್ನು ತಾವು ತೆರೆದುಕೊಂಡರು. ಹಾಗಾಗಿ ಇಂತಹ ಎಲ್ಲ ಪ್ರಕಾರಗಳೂ ಅವರ ಕಲ್ಪನಾ ಮೂಸೆಯಿಂದ ಜೀವತಳೆದು ಬಂದವು. ಹಾಡುತ್ತಿದ್ದ ಕ್ರಮವೂ ಅಷ್ಟೆ. ಅದರದರ ಶೈಲಿ ಅದರದರ ಸಾಹಿತ್ಯ ಸ್ವರೂಪಕ್ಕೆ ಸೂಕ್ತವಾಗಿತ್ತು. ಇಂತಹ ವೈವಿಧ್ಯತೆ ಕರತಲಾಮಲಕವಾಗುವುದು ಸಂಸ್ಕಾರ ಬಲದಿಂದಷ್ಟೆ. ಅಂಥವರಿಗೆ ಅವರ ಬಾಲ್ಯದ ದಿನಗಳಲ್ಲೇ ಗಾಯನಕಲೆ ಬಂದುಬಿಟ್ಟಿರುತ್ತದೆ.

ನಿಜ, ಆ ಪ್ರತಿಭಾವಂತ ಕಲಾವಿದನ ಎಲ್ಲ ಲಕ್ಷಣಗಳೂ ಪುಟ್ಟ ಮಗುವಾಗಿದ್ದಾಗಲೇ ಕಾಣಿಸಿಕೊಂಡಿದ್ದವು. ಮನೆಯ ಪರಿಸರವೂ ಅದಕ್ಕೆ ಪರಿಪೋಷಕವಾಗಿತ್ತು, ಪೂರಕವಾಗಿತ್ತು. ಕಲೆ ಕಾಳಿಂಗರಾಯರ ಧಮನಿ ಧಮನಿಯಲ್ಲಿ ಹರಿದುಬಂದಿತ್ತು.

ಯಕ್ಷಗಾನ ಕಲಾಕ್ಷೇತ್ರದ ಆಧಾರಸ್ತಂಭಗಳಲ್ಲಿ ಒಬ್ಬರಾಗಿದ್ದ, ಯಕ್ಷಗಾನ ಪ್ರವೀಣ ಹಾರಾಡಿ ರಾಮಗಾಣಿಗರ ಗುರುಗಳಾಗಿದ್ದ ದಿವಂಗತ ಪಾಂಡೇಶ್ವರ ಪುಟ್ಟಯ್ಯ ಹಾಗೂ ನಾಗರತ್ನಮ್ಮನವರ ಪುತ್ರನಾಗಿ ಪಾಂಡೇಶ್ವರ ಕಾಳಿಂಗರಾಯರು ಜನ್ಮತಾಳಿದ್ದು ೩೧.೦೮.೧೯೧೪ರಂದು.

ಕಿಶೋರಾವಸ್ಥೆಯಲ್ಲಿದ್ದಾಗಲೇ ಈ ಪುಟ್ಟ ಕಾಳಿಂಗನಿಗೆ ಕಲಾಪ್ರೇಮ ಮೈಗೂಡಿ, ಶಾಲಾದಿನಗಳಲ್ಲೇ, ಶಾಲಾ ರಂಗಭೂಮಿಯಿಂದಲೇ ನಾಟಕರಂಗಕ್ಕೆ ಪ್ರವೇಶ ದೊರೆಯಿತು. ಈ ಬಾಲಕನಲ್ಲಿದ್ದ ಸುಪ್ತಕಲೆಯ ವಿಕಾಸಕ್ಕೆ ನೆರವಾದವರು ಸೋದರಮಾವ ಸೂರಾಲ್ ಮಂಜಯ್ಯನವರು. ಬಾಲಕನಲ್ಲಿದ್ದ ಸಂಗೀತಾಸಕ್ತಿಯನ್ನು ಗುರುತಿಸಿ ಸಂಸ್ಕೃತ ಶ್ಲೋಕಗಳು, ದೇವರನಾಮಗಳು ಹಾಗೂ ಭಜನೆಗಳನ್ನು ದೇವರ ಸನ್ನಿಧಿಯಲ್ಲಿ ಕಲಿಸಿದರು. ಏಳು ವರ್ಷದ ಪುಟ್ಟ ಬಾಲಕ 'ಭಜಗೋವಿಂದಂ, ಭಜಗೋವಿಂದಂ ಮೂಢಮತೆ' ಶ್ಲೋಕವನ್ನು ತಂಬೂರಿ ಶ್ರುತಿಗೆ ಸೇರಿಸಿ, ತನ್ಮಯತೆಯಿಂದ ಹಾಡುತ್ತಿದ್ದರೆ, ಕೇಳುವವರ ಕಣ್ಣಲ್ಲಿ ಆನಂದಾಶ್ರುಗಳು ಉಕ್ಕುತ್ತಿದ್ದವು. ಭಕ್ತಿಪ್ರಧಾನವಾದ ಶ್ಲೋಕಗಳಿಂದ ರಾಯರ ಒಲವು ಶಾಸ್ತ್ರೀಯ ಸಂಗೀತದತ್ತ ಹೊರಳಿತು. ಸಂಗೀತ ಕಲೆಯ ಗೀಳಿನ ಜೊತೆ ಜೊತೆಗೇ ನಾಟಕದ ಗೀಳೂ ಅಂಟಿಕೊಂಡಿತು.

ಸಂಗೀತ, ನಾಟಕದೊಂದಿಗೆ ಸೂರಾಲ್ ಅರಮನೆಯ ಹುಡುಗರೊಂದಿಗೆ ರಾಯಲ್ ಸ್ಕೂಲಿನಲ್ಲಿ ವಿದ್ಯಾಭ್ಯಾಸ ಸಾಗಿತು. ಆದರೆ ಕಲೆಗೂ, ಶಾಲಾ ವಿದ್ಯೆಗೂ ನಡೆದ ಪಂದ್ಯದಲ್ಲಿ ಕಲೆ ಗೆದ್ದಿತು. ಹಾಗಾಗಿ, ಮೂರನೇ ತರಗತಿಯ ವಿದ್ಯಾಭ್ಯಾಸಕ್ಕೆ ಮಂಗಳ ಹಾಡಿ, ಸಂಗೀತದ ತೆರೆಯ ಪರದೆಯ ಮಹತ್ವವನ್ನು ಆಸೇತು

**ಎಚ್. ಆರ್. ಲೀಲಾವತಿ**



ಹಿಮಾಚಲದೆತ್ತರಕ್ಕೆ ಏರಿಸಿ ಹಾರಿಸಿದರು. ಕಾಳಿಂಗರಾಯರು ಶಾಲೆಯಲ್ಲಿ ಕಲಿತದ್ದು ಕಡಿಮೆಯಾದರೂ, ತಾರುಣ್ಯದಲ್ಲಿ ಅವರು ಓದಿದ ಕನ್ನಡ, ಇಂಗ್ಲಿಷ್ ಕಾದಂಬರಿಗಳಿಗೆ ಲೆಕ್ಕವಿಲ್ಲ. ಅವರಿಗಿದ್ದ ಕನ್ನಡ ಭಾಷೆಯ ಮೇಲಿನ ಅಪಾರ ಪ್ರೇಮ, ಕನ್ನಡ ಭಾಷೆಯ ಮೇಲಿದ್ದ ಹಿಡಿತ, ಸಾಹಿತ್ಯ ಶುದ್ಧಿ, ಅವರಿಗೆ ಬಾಲ್ಯದಿಂದಲೇ ಬಂದ ವರ ಎಂದರೆ ಅತಿಶಯೋಕ್ತಿಯಾಗಲಾರದು.

ಅದೊಂದು ದಿನ ಶಾಲೆಯ ವಾರ್ಷಿಕೋತ್ಸವ ಸಂದರ್ಭದಲ್ಲಿ ನಾಟಕ "ಚಂದ್ರಹಾಸ" ಏರ್ಪಾಡಾಗಿತ್ತು. ಶರೀರ ಹಾಗೂ ಶಾರೀರ ಎರಡೂ ಅದ್ವಿತೀಯವಾಗಿದ್ದ ಈ ಸುಂದರ ಕಾಳಿಂಗನೇ ಚಂದ್ರಹಾಸ ಪಾತ್ರಧಾರಿ. ಅಂದು ಆ ಕಾರ್ಯಕ್ರಮದ ಅಧ್ಯಕ್ಷರಾಗಿದ್ದವರು ಒಬ್ಬ ಬ್ರಿಟಿಷ್ ಅಧಿಕಾರಿ. ಚಂದ್ರಹಾಸನ ಪಾತ್ರದ ಅಭಿನಯಕ್ಕೆ ಮಾರುಹೋದ ಅವರು ಈ ಪುಟ್ಟ ಬಾಲಕನಿಗೆ ತಮ್ಮ ಮೆಚ್ಚುಗೆಯ ಕುರುಹಾಗಿ ಚಿನ್ನದ ಪದಕವನ್ನು ನೀಡಿ ಬೆನ್ನು ತಟ್ಟಿ ಪ್ರೋತ್ಸಾಹಿಸಿದರು. ಅಲ್ಲೇ ಇದ್ದ ರಂಗಭೂಮಿಯ ಸುಪ್ರಸಿದ್ಧ ನಟ ಮುಂಡಾಜೆ ರಂಗನಾಥ ಭಟ್ಟರ ಕಣ್ಣು ಆ ಬಾಲಕನ ಮೇಲೆ ಬಿತ್ತು. ಹಾಗಾಗಿ ಶಾಲಾರಂಗದಿಂದ ನಾಟಕರಂಗಕ್ಕೆ ಧುಮುಕಿದರು ಕಾಳಿಂಗರಾಯರು. ಭಟ್ಟರ 'ಅಂಬಾಪ್ರಸಾದಿತ ನಾಟಕ ಮಂಡಲಿ'ಯಲ್ಲಿ ಲೋಹಿತಾಶ್ವನಾಗಿ, ಧ್ರುವನಾಗಿ, ಕೃಷ್ಣನಾಗಿ ಬಾಲ ಪಾತ್ರಗಳಲ್ಲಿ ಮೆರೆದರು. ಅಭಿನಯದ ಜೊತೆಗೆ ಕಾಳಿಂಗರಾಯರಿಗೆ ಕರ್ನಾಟಕ ಸಂಗೀತ ಶಿಕ್ಷಣ ಪಡೆಯುವ ಭಾಗ್ಯ ಭಟ್ಟರಿಂದ ದೊರೆಯಿತು.

'ಅಂಬಾಪ್ರಸಾದಿತ ನಾಟಕ' ಕಂಪನಿಯಲ್ಲಿ ವೆಂಕಟರಾವ್ ರಾಮದುರ್ಗ ಹಾಗೂ ರಾಮಚಂದ್ರಬುವ ಮರೋಡ್‌ಕರ್ ಇಬ್ಬರೂ ಮುಖ್ಯ ಪಾತ್ರಧಾರಿಗಳಾಗಿದ್ದರು. ಅವರುಗಳಿಂದ ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತವನ್ನು ಕಲಿಯುವುದರ ಮೂಲಕ, ಕರ್ನಾಟಕ ಸಂಗೀತದ ರೆಂಬೆಯಿಂದ ಹಿಂದೂಸ್ಥಾನಿ ಸಂಗೀತದ ರೆಂಬೆಗೂ ಜಿಗಿದು, ಅಲ್ಲಿಯ ಸವಿಯನ್ನೂ ಉಂಡು ರಸಿಕರಿಗೆ ಉಣಬಡಿಸಿದರು. ಇದರ ಜೊತೆಗೆ ನಾಟಕಗಳಲ್ಲಿ ಸ್ತ್ರೀ ಪಾತ್ರಗಳಲ್ಲೂ ನಟಿಸಿ ಹೆಸರು ಮಾಡಿದರು. ಸ್ತ್ರೀ ಪಾತ್ರಗಳ ಅಭಿನಯದಿಂದ ಪ್ರೇಕ್ಷಕರ ಹೃದಯಕ್ಕೆ ಲಗ್ಗೆ ಹಾಕಿದರು. 'ರಾಯರ ಸೊಸೆ', ಆಜನ್ಮ ಕುಮಾರಿ', 'ಕಾಲಿಯ ಮರ್ದನ', 'ತುಳಸಿದಾಸ', 'ಮಿಸ್ ಮಾಧುರಿ', 'ವಿಕ್ರಮ', 'ಶಶಿಕಲಾ', ಮುಂತಾದ ನಾಟಕಗಳಲ್ಲಿ ಸ್ತ್ರೀ ಪಾತ್ರಧಾರಿಯಾಗಿ ಅಭಿನಯಿಸಿ ರಸಿಕರನ್ನು ರಂಜಿಸಿದರು.

ಹೊಸ ಹಾದಿಯನ್ನೇ ಹಿಡಿಯಬೇಕೆಂಬ ಹಂಬಲ, ಅದಮ್ಯ ಉತ್ಸಾಹ, ಎಡೆಬಿಡದ ಆಕಾಂಕ್ಷೆಗಳು ರಾಯರನ್ನು ನಾಟಕರಂಗದಲ್ಲಿಯೇ ಉಳಿಯಲು ಬಿಡಲಿಲ್ಲ. ಹಲವಾರು ನಾಟಕಗಳಲ್ಲಿ, ವಿಧವಿಧವಾದ ಪಾತ್ರಗಳಲ್ಲಿ ವೇಷ ಹಾಕಿ ಮೆರೆದಿದ್ದ ರಾಯರು ಚಲನಚಿತ್ರರಂಗದ ಭ್ರಮಾಲೋಕಕ್ಕೆ ಬೆರಗಾಗಿ ಮದ್ರಾಸಿನಲ್ಲಿ, ಅಂದರೆ ಇಂದಿನ ಚೆನ್ನೈನಲ್ಲಿ ಕಾಲಿಟ್ಟರು. ಆದರೆ ಅಲ್ಲಿ ಇವರ ಪ್ರಯೋಗಶೀಲತೆಗೆ ತಕ್ಕ ಪುರಸ್ಕಾರ ದೊರೆಯಲಿಲ್ಲವೆಂದೇ ಹೇಳಬೇಕು. 'ಪ್ರೇಮಸಾಗರ', 'ವಸಂತಸೇನಾ' ಮುಂತಾದ ಚಿತ್ರಗಳಿಗೆ ಸಂಗೀತ ನೀಡಿದರು. ಚಿತ್ರಗಳಲ್ಲಿ ಅಭಿನಯಿಸಿದರು ಕೂಡ. ಸಂಗೀತದ ಬಗ್ಗೆ ರಾಯರಿಗಿದ್ದ ಅಸಾಧಾರಣ ಪ್ರತಿಭೆಯನ್ನು ಗುರುತಿಸಿ, ದಕ್ಷಿಣ ಹಿಂದೀ ಪ್ರಚಾರ ಸಭೆಯವರು, ತಮ್ಮ ಹಿಂದಿ ಸಂಗೀತದ ಕಾಲೇಜಿಗೆ ಪ್ರಾಚಾರ್ಯರನ್ನಾಗಿ ನೇಮಿಸಿಕೊಂಡರು. ರಾಯರ ಕೀರ್ತಿ ಬೆಳೆದು, ಅದಕ್ಕೆ ತಕ್ಕಂತೆ ಅವರ ಶಿಷ್ಯವೃಂದವೂ ಬೆಳೆಯತೊಡಗಿತು. ಅವರಲ್ಲಿ ಮುಖ್ಯರಾದವರು ಜಯಲಕ್ಷ್ಮಿ ವರದಾಚಾರ್, ಸೋಹನ್‌ಕುಮಾರಿ, ಮೋಹನ್‌ಕುಮಾರಿಯವರು.

ಅಲ್ಲಿಂದ ಮುಂದೆ ಮದ್ರಾಸನ್ನು ಬಿಟ್ಟು ಹೊಸ ಅನ್ವೇಷಣೆಗಾಗಿ ಮೈಸೂರಿಗೆ ಬಂದರು. ಮೈಸೂರಿನ ನವಜ್ಯೋತಿ ಸ್ಟುಡಿಯೋದಲ್ಲಿ ತಯಾರಾದ ಮೊಟ್ಟಮೊದಲ ಚಿತ್ರ 'ಕೃಷ್ಣಲೀಲಾ'ಗೆ ಸಂಗೀತ ನೀಡಲು ಜಿ. ಆರ್. ರಾಮಯ್ಯನವರು ಕಾಳಿಂಗರಾಯರನ್ನು ನೇಮಿಸಿಕೊಂಡರು. ಮುಂದೆ 'ರಾಮದಾಸ' ಮೊದಲಾದ ಹಲವಾರು ಚಿತ್ರಗಳಲ್ಲಿ ಕೆಲಸ ಮಾಡಿದರು. ಆದರೆ ಇಲ್ಲೂ ಅಷ್ಟೇ. ಚಿತ್ರಬ್ರಹ್ಮರ ಅಪ್ಪಣೆಯ ಮೇರೆಗೆ ಟ್ಯೂನ್‌ಗಳನ್ನು ಸಿದ್ಧಪಡಿಸುವ ಕಾಯಕದಿಂದ ಬೇಸರಗೊಂಡರು. ಕಾಡಹಕ್ಕಿ ಸ್ವಾತಂತ್ರ್ಯ ಕಳೆದುಕೊಂಡು, ಪಂಜರದಲ್ಲಿ ಎಷ್ಟು ದಿನ ತಾನೇ ಉಳಿಯಲು ಸಾಧ್ಯ? ಕಾಳಿಂಗರಾಯರಿಗೆ ಯಾರೂ ತುಳಿಯದ ಹಾದಿಯಲ್ಲಿ ತನ್ನದೇ ಆದ ಹೊಚ್ಚ ಹೊಸತಾದ ಹೆಜ್ಜೆಯನ್ನು ಊರುವ ಆಸೆ. ಹಾಗಾಗಿ ಈ ಕಲಾತಪಸ್ವಿ ತನ್ನ ಜಾಡನ್ನು ಗುರುತಿಸಿಕೊಂಡು ಅದಕ್ಕೆಂದೇ ಕಂಡುಕೊಂಡ ವೈವಿಧ್ಯಮಯವಾದ ಸಂಗೀತ ಮತ್ತು ಸಾಹಿತ್ಯ ಪ್ರಕಾರಗಳು ಅಂದರೆ ಜಾನಪದಗೀತೆಗಳು, ವಚನ, ಲಾವಣಿ, ದೇವರನಾಮ, ಭಾವಗೀತೆಗಳು ಅವರ ಛಲದ ನಡೆಗೆ ನೆರವಾದವು. ಈ ನಿಟ್ಟಿನಲ್ಲಿ ಸಾಧನೆಯ ಜೊತೆಜೊತೆಗೆ ನಾವೀನ್ಯತೆಯ ಶೋಧನೆಯತ್ತ ದಾಪುಗಾಲು ಹಾಕಿದರು. ಇವು ಜನತೆಯ ನಾಡಿಯನ್ನು ಮಿಡಿಯಬಲ್ಲುದೆಂದು ಕಂಡುಕೊಂಡರು. ಈ ಎಲ್ಲ ಪ್ರಕಾರದ ಗೀತ ಸಾಹಿತ್ಯಗಳನ್ನು ಆಸ್ಥೆಯಿಂದ ಆಳವಾಗಿ ಅಭ್ಯಸಿಸಿದರು, ಮನನಮಾಡಿಕೊಂಡರು. ಚಿತ್ರಗೀತೆಗಳಿಗಿಂತ ತೀರಾ ಭಿನ್ನವಾದ ಪ್ರಕಾರಗಳಿವು ಎಂಬುದನ್ನು ಕಂಡುಕೊಂಡರು. ಇಲ್ಲಿ ಯಾರ ಅಂಕೆಗೂ ತಲೆಬಾಗುವಂಥ ಪ್ರಮೇಯವಿರಲಿಲ್ಲ. ಆಗಲೇ ಹೇಳಿದಂತೆ ಕಾಳಿಂಗರಾಯರಿಗೆ ಕನ್ನಡ ಭಾಷೆಯ ಮೇಲೆ ಅಸಾಧಾರಣ ಹಿಡಿತವಿತ್ತು. ಸಾಹಿತ್ಯಶುದ್ಧಿ ಅವರಿಗೆ ಬಾಲ್ಯದಿಂದಲೇ ಬಂದಿದ್ದ ಬಳುವಳಿ. ಇದರಿಂದ ಕನ್ನಡದ ಎಲ್ಲ ಪ್ರಕಾರದ ಸಾಹಿತ್ಯವೂ ರಾಗದುಡುಗೆ-ತೊಡುಗೆಯನ್ನು ತೊಟ್ಟು ಕಾಳಿಂಗರಾಯರ ನಾಲಗೆಯಲ್ಲಿ ಲಾಸ್ಯವಾಡಿದವು. ಈ ಮಾಂತ್ರಿಕನ ರಾಗದ ಮೋಡಿಗೆ ರಸಿಕರು ಕುಣಿದರು, ಕುಪ್ಪಳಿಸಿದರು, ತಲೆಬಾಗಿದರು, ಮೂಕವಿಸ್ಮಿತರಾದರು. ಅವರ ರಾಗದ ಮೋಡಿಗೆ, ಹಾಡಿಕೆಯ ಸೊಗಸಿಗೆ ಮರುಳಾದವರು ಹಲವರಾದರೆ, ಅವರ ಹಿಂದೆ ಬಿದ್ದವರು ಹಲವರು. ಅವರ ಸ್ನೇಹಕ್ಕಾಗಿ ಹಾತೊರೆದವರು ಹಲವರಾದರೆ ಅವರ ಶಿಷ್ಯರಾಗಲು ಹಲುಬಿದವರು ಅನೇಕರು. ಅದೇ ಕಾಳಿಂಗರಾಯರ ಮಧುರ ಗಾಯನದ ಮೋಡಿ.




ರಾಗವೂ ವೈವಿಧ್ಯಮಯವೇ, ಸಾಹಿತ್ಯವೂ ವೈವಿಧ್ಯಮಯವೇ. ಕಾಳಿಂಗರಾಯರು ಕರ್ನಾಟಕ, ಹಿಂದೂಸ್ಥಾನಿ ಶಾಸ್ತ್ರೀಯ ಸಂಗೀತದ ಜೊತೆಗೆ ಪಾಶ್ಚಾತ್ಯ ಸಂಗೀತದ ಪರಿಚಯವನ್ನೂ ಮಾಡಿಕೊಂಡಿದ್ದರು. ಆದ್ದರಿಂದ ಅವರು ಆಯ್ಕೆಮಾಡಿ ಹಾಡುತ್ತಿದ್ದ ಸಾಹಿತ್ಯವನ್ನು ಉತ್ತರ, ದಕ್ಷಿಣ, ಪೌರಸ್ತ್ಯ, ಪಾಶ್ಚಿಮಾತ್ಯ, ಜಾನಪದ ಹಾಗೂ ಶಾಸ್ತ್ರೀಯ ಸಂಗೀತದ ಉಡಿಗೆತೊಡಿಗೆಗಳಿಂದ ಅಲಂಕರಿಸಿ ಹಾಡಿದರು, ಜನರ ಹೃದಯವೀಣೆಯನ್ನು ಮೀಟಿದರು. ರಾಗ, ಅರ್ಥ, ರಸಬಂಧಗಳೊಂದಿಗೆ ಜನರ ಹೃದಯವನ್ನು ಗೆದ್ದು ಆ ಮೂಲಕ ಚಿರಸ್ಥಾಯಿಯಾಗಿ ಜನಮನದಲ್ಲಿ ಉಳಿಯಲಿದ್ದಾರೆ.

ಇವರ ಈ ಮಾಂತ್ರಿಕ ಶಕ್ತಿಯಿಂದ, ಇಡೀ ಕರ್ನಾಟಕದ ಕಲಾಭಿಮಾನಿಗಳು ಕಾಳಿಂಗರಾಯರ ಆರಾಧಕರಾದರು. ಕಾಳಿಂಗರಾಯರ ಕಛೇರಿಯೆಂದರೆ ಜನ ಹುಚ್ಚೆದ್ದು ಕುಣಿಯುತ್ತಿದ್ದರು. ಆ ಕಡೆ ಮೋಹನ, ಈ ಕಡೆ ಸೋಹನ, ಮಧ್ಯೆ ಈ ದಿವ್ಯ ಚೇತನ ಹಾಡುತ್ತಿದ್ದರೆ ಕುವೆಂಪುರವರ "ಕಲಿಯುಗ ದ್ವಾಪರ ವಾಗುವುದು, ಮಿಂಚಿನ ಹೊಳೆ ಹರಿಯುವುದು..." ಕವನ ನೆನಪಾಗುತ್ತಿತ್ತು.



ಕಾಳಿಂಗರಾಯರು ಕನ್ನಡ ಭಾವಗೀತೆಗಳನ್ನು ಹಾಡಲು ಅವರಿಗೆ ಪ್ರೇರಕ ಶಕ್ತಿಯಾಗಿದ್ದವರಲ್ಲಿ, ಅತಿ ಮುಖ್ಯರಾದವರೆಂದರೆ ಅ. ನ. ಕೃಷ್ಣರಾಯರು. ಮಿತ್ರರ ಒತ್ತಾಯಕ್ಕೆ ಮಣಿದು ೧೯೪೬ರಲ್ಲಿ ಹುಯಿಲಗೋಳ ನಾರಾಯಣರಾಯರ "ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು" ಎಂಬ ಗೀತೆಯನ್ನು ಸ್ವರ ಸಂಯೋಜಿಸಿ ಹಾಡಿಸಿದರು. ಕನ್ನಡ ರಾಜ್ಯೋತ್ಸವದ ನಂತರವೂ, ಈ ಹಾಡನ್ನು ಹಾಡುತ್ತಿದ್ದ ಕಾಳಿಂಗರಾಯರನ್ನು ಕರ್ನಾಟಕ ಸರ್ಕಾರ ಸನ್ಮಾನಿಸಿತು. 'ತೂಗಿರೇ ರನ್ನವಾ, ತೂಗಿರೇ ಚಿನ್ನವಾ', 'ಬಾರಯ್ಯ ಬೆಳದಿಂಗಳೇ', 'ಅಮ್ಮಕ ಜಮ್ಮಕದಿಂದ ಬರುತಾಳೆ ರತುನಾ', 'ಆಲಕ್ಕೆ ಹೂವಿಲ್ಲ', 'ಮೂಡಲ್ ಕುಣಿಗಲ್‌ಕೆರೆ', 'ಬೆಟ್ಟ ಬಿಟ್ಟಿಳಿಯುತ್ತ ಬಂದಾಳೆ ಚಾಮುಂಡಿ'... ಇಂತಹ ಜಾನಪದ ಗೀತೆಗಳು ಒಂದೇ, ಎರಡೇ? ಕಾಳಿಂಗರಾಯರು ಜಾನಪದ ಗೀತೆಗಳಿಗೆ ಒಂದು ಹೊಸತನವನ್ನು ತಂದುಕೊಟ್ಟ ಮಾಂತ್ರಿಕ. ಈ ಧ್ವನಿಮುದ್ರಿಕೆಗಳನ್ನು ಕೇಳಿದವರು ಮೈಮರೆಯುತ್ತಿದ್ದರು. ಹಾಡುವುದಿರಲಿ, ಓದುವುದಕ್ಕೂ ತೊಡಕೆನಿಸುತ್ತಿದ್ದ ಜಿ. ಪಿ. ರಾಜರತ್ನಂರವರ 'ರತ್ನನ ಪದಗಳನ್ನು' ಭಾವಪೂರ್ವಕವಾಗಿ ಹಾಡಬಹುದೆಂಬುದನ್ನು ತೋರಿಸಿಕೊಟ್ಟು ಹಾಡಿದ ಮೊಟ್ಟ ಮೊದಲಿಗರು ಕಾಳಿಂಗರಾಯರು. ಪುಸ್ತಕದಲ್ಲೇ ಉಳಿದಿದ್ದ 'ಬ್ರಹ್ಮಾ ನಿಂಗೆ ಜೋಡಿಸ್ತಿನಿ ಯೆಂಡಾ ಮುಟ್ಟಿದ ಕೈನಾ' ಎಂಬ ಪದ್ಯವನ್ನು ಹಾಡಿ ಜನಪ್ರಿಯಗೊಳಿಸಿದರು. ಅವರ ನಾಲಗೆಯಲ್ಲಿ ದಾಸರು ನಲಿದರು, ವಚನಕಾರರು ಕುಣಿದರು, ಯೆಂಡ್ಕುಡಕ್ ರತ್ನ ಮೆರೆದ, ಜನಪದರು ಉಕ್ಕಿ ಹರಿದರು, ಭಾವಗೀತಾಕಾರರು ಮಿಂಚಿದರು. 'ಎಲ್ಲಾದರೂ ಇರು, ಎಂತಾದರು ಇರು', 'ಏರಿಸಿ ಹಾರಿಸಿ ಕನ್ನಡದ ಬಾವುಟ', 'ಯಾರು ಹಿತವರು ನಿನಗೆ', 'ಮಾಡು ಸಿಕ್ಕದಲ್ಲ', 'ಮನವೆಂಬ ಸರಸಿಯಲಿ', 'ಪರಚಿಂತೆ ನಮಗೆ ಏಕೆ ಅಯ್ಯಾ', 'ಮಂಕುತಿಮ್ಮನ ಕಗ್ಗ', 'ದೇಶಭಕ್ತಿ ಗೀತೆಗಳು', 'ಹರಿಹರನ ರಗಳೆ', ಎಲ್ಲವನ್ನೂ ಹಾಡಿ ಸೈ ಎನಿಸಿಕೊಂಡರು. ಕರ್ನಾಟಕದಲ್ಲಿ ಮಾತ್ರವಲ್ಲದೆ ಡೆಲ್ಲಿ, ಕಲ್ಕತ್ತ, ಮದ್ರಾಸ್, ಪೂನಾ, ಮುಂಬೈ, ನಾಗಪುರ ಮುಂತಾದ ಕಡೆಗಳಲ್ಲಿ ಹಾಡಿ ಭಾರತದ ಉದ್ದಗಲಕ್ಕೂ ತಮ್ಮ ಇನಿದನಿಯ ಗಾನ ಸುಧೆಯನ್ನು ಹರಿಸಿ ಕೀರ್ತಿಯ ಶಿಖರವನ್ನೇರಿದರು. ಇವರ ಗಾಯನವನ್ನು ಧ್ವನಿಮುದ್ರಿಸಿಕೊಳ್ಳಲು ಎಚ್. ಎಂ. ವಿ. ಮತ್ತು ಸರಸ್ವತಿ ಸಂಸ್ಥೆಗಳು ಪೈಪೋಟಿಗಿಳಿದವು !

ಕಾಳಿಂಗರಾಯರು 'ಕಿತ್ತೂರು ಚೆನ್ನಮ್ಮ', 'ಅಬ್ಬಾ ಆ ಹುಡುಗಿ', 'ಅಣ್ಣ ತಂಗಿ', ಚಲನಚಿತ್ರಗಳಲ್ಲಿ ಹಾಡಿದ ಹಾಡುಗಳು ಜನರ ಮೆಚ್ಚುಗೆ ಗಳಿಸಿದವು. ಸಂಗೀತ ನಿರ್ದೇಶಕರಾಗಿ 'ನಟಶೇಖರ', 'ಅಬ್ಬಾ ಆ ಹುಡುಗಿ', 'ತರಂಗ', 'ಕೃಷ್ಣಲೀಲಾ', ಚಿತ್ರಗಳಿಗೆ ಸಂಗೀತ ನೀಡಿದರು. ಚಿತ್ರಗೀತೆಗಳಿಗಾಗಲೀ, ಸಭಾಕಾರ್ಯಕ್ರಮದಡಿ ಹಾಡುವ ಬಿಡಿ ಹಾಡುಗಳಿಗಾಗಲೀ, ಪಾಶ್ಚಾತ್ಯ ವಾದ್ಯಗಳನ್ನು ಬಳಸಿ ಯಶಸ್ವಿಯಾಗಿದ್ದಾರೆ ರಾಯರು. ಕ್ಲಾರಿಯೋನೆಟ್, ಗಿಟಾರ್, ಹವಾಯಿ ಗಿಟಾರ್, ಮ್ಯಾಂಡೊಲಿನ್ ಮುಂತಾದ ವಾದ್ಯಗಳ ಮಿಡಿತಗಳನ್ನು ಅಧ್ಯಯನ ಮಾಡಿ, ಎಲ್ಲೆಲ್ಲಿ ಯಾವ ವಾದ್ಯ ಬಳಸಬೇಕೆಂಬುದನ್ನು ಅರಿತುಕೊಂಡರು.

ಈ ಮಧ್ಯೆ ೧೯೫೫ರ ವೇಳೆಗೆ ಈ ರಾಗ ಜಾದೂಗಾರನ ಯೋಗ್ಯತೆಯನ್ನು ಗುರುತಿಸಿದ್ದ ನಾಟಕರತ್ನ ಗುಬ್ಬಿ ವೀರಣ್ಣನವರು ರಂಗಕ್ಕೆ ತಂದ "ದಶಾವತಾರ" ನಾಟಕಕ್ಕೆ ಸಂಗೀತ ನಿರ್ದೇಶನ ಮಾಡಲು ಕಾಳಿಂಗರಾಯರನ್ನು ನಿಯೋಜಿಸಿ ಕೊಂಡರು. ಗುಬ್ಬಿ ಕಂಪನಿಯಲ್ಲಿ ಕಾಳಿಂಗರಾಯರು ಸುಮಾರು ಐದಾರು ವರ್ಷ ಸಂಗೀತ ನಿರ್ದೇಶಕರಾಗಿ ದುಡಿದರು. ಆ ಕಂಪನಿಯ "ಲವ-ಕುಶ" ನಾಟಕಕ್ಕೂ ಕಾಳಿಂಗರಾಯರು ಸಂಗೀತ ನೀಡಿದರು. ರಂಗನಾಟಕಗಳಿಗೂ ವಿನೂತನ ಶೈಲಿಯ ಹೊಚ್ಚಹೊಸ ರಾಗರೂಪವನ್ನು ಕೊಟ್ಟು ಪ್ರಸಿದ್ಧರಾದರು.

ಕಾಳಿಂಗರಾಯರು ಆಕಾಶವಾಣಿ ಗಾಯಕರಾಗಿ ಅನಭಿಷಿಕ್ತ ದೊರೆಯಾಗಿಯೂ ಮೆರೆದರು. ಮತ್ತೊಂದು ವಿಶೇಷವೆಂದರೆ, ಭಾವಗೀತೆಗಳನ್ನು ಹಾಡಲು ಅವರು ಸಾಮಾನ್ಯವಾಗಿ ಕೆಲವು ಸಲ ಪೂರ್ವಸಿದ್ಧತೆಯನ್ನು ಮಾಡಿಕೊಂಡು ಬರುತ್ತಿರಲಿಲ್ಲ. ಆಕಾಶವಾಣಿಗೆ ಬರುತ್ತಿದ್ದ ಹಾಗೇ ಅಲ್ಲಿಯ ಪುಸ್ತಕ ಭಂಡಾರದಿಂದ ಪುಸ್ತಕ ತರಿಸಬೇಕು. ಹಾಗಾಗಿ ಪುಸ್ತಕ ಭಂಡಾರದಿಂದ ಅದಕ್ಕಾಗಿ ನಿಯೋಜಿತನಾಗಿದ್ದ ವ್ಯಕ್ತಿಯನ್ನು ಕರೆದು, "ಎಲ್ಲಿ ಶ್ರೀಶೈಲಂ, ಒಂದೆರಡು ಕುವೆಂಪು ಅವರ ಪುಸ್ತಕ ಗಳನ್ನು ತಂದುಕೊಡಿ" ಎಂದೋ, "ಬೇಂದ್ರೆಯವರ ಪುಸ್ತಕವನ್ನು ತಂದುಕೊಡಿ" ಎಂದೋ ಕೇಳಿ ಪಡೆಯುತ್ತಿದ್ದರು. ಗೋಡೆ ಕಡೆಗೆ ಮುಖ ಮಾಡಿಕೊಂಡು, ಪುಟ ತಿರುಗಿಸುತ್ತ ಒಂದರ್ಧ ಘಂಟೆಯಾದ ಮೇಲೆ "ನಾನು ರೆಡಿ ಸರ್. ರೆಕಾರ್ಡಿಂಗ್ ಶುರುಮಾಡಬಹುದು" ಅನ್ನುತ್ತಿದ್ದರು. ಈ ಅಪೂರ್ವ ಗಾಯಕ ಕೇವಲ ಅರ್ಧಘಂಟೆಯಲ್ಲಿ ಸ್ವರ ಸಂಯೋಜಿಸಿ ಹಾಡುತ್ತಿದ್ದ ಸೃಷ್ಟ್ಯಾತ್ಮಕ ಕಲಾವಿದನೂ ಹೌದು. ಇಂಥ ಹಿರಿಯ ಕಲಾವಿದನಿಗೆ, ಸಂಗೀತ ಸಂಯೋಜಕನಿಗೆ ತೆರೆದ ಮನಸ್ಸಿತ್ತು. ಅಷ್ಟು ಹಿರಿಯ ಕಲಾವಿದನಾಗಿಯೂ ಅನ್ಯ ನಿರ್ದೇಶಕರ ಹಾಡುಗಳನ್ನು ಮುಕ್ತ ಮನಸ್ಸಿನಿಂದ ಹಾಡುತ್ತಿದ್ದರು. ಹಾಗಾಗಿಯೇ ಮೈಸೂರು ಅನಂತಸ್ವಾಮಿಯವರ ಸ್ವರ ಸಂಯೋಜನೆಯ "ಇಳಿದು ಬಾ ತಾಯಿ ಇಳಿದು ಬಾ" ಕಾಳಿಂಗರಾಯರಿಗೆ ಅತ್ಯಂತ ಪ್ರಿಯವಾಗಿ, ತಮ್ಮೆಲ್ಲ ವೇದಿಕೆಯ ಕಾರ್ಯಕ್ರಮಗಳಲ್ಲೂ ಹಾಡುತ್ತಿದ್ದರು. ಪದ್ಮಚರಣರ ಸಂಗೀತ ನಿರ್ದೇಶನದ ಅನೇಕ ಕಾರ್ಯಕ್ರಮಗಳಲ್ಲಿಯೂ ಹಾಡಿದ್ದಾರೆ, ಅದೂ ಅಲ್ಲೇ ಆಗಲೇ ಕಲಿತು.

ಆಕಾಶವಾಣಿಯಲ್ಲಿ ಅಂಥ ಹಿರಿಯ ಕಲಾವಿದನೊಂದಿಗೆ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಯೋಗ ನನ್ನ ಪಾಲಿಗೆ ಬಂದದ್ದು ಹೆಮ್ಮೆಯ ಸಂಗತಿ. ಆಕಾಶವಾಣಿಯ ಆಹ್ವಾನಿತ ಶ್ರೋತೃಗಳ ಸಮ್ಮುಖದಲ್ಲಿ ನಡೆಯುತ್ತಿದ್ದ ಸುಗಮಸಂಗೀತ ಕಾರ್ಯಕ್ರಮಗಳಲ್ಲಿ ನೂರಕ್ಕೆ ತೊಂಬತ್ತೈದು ಕಾರ್ಯಕ್ರಮಗಳು ನಮ್ಮಿಬ್ಬರ ಪಾಲಿಗಿರುತ್ತಿದ್ದವು. ಅಲ್ಲದೆ ಸಂಗೀತರೂಪಕ 'ಅಕ್ಕಮಹಾದೇವಿ', 'ಗೆಲುವಿನ ಗುಡಿ', 'ಮೋಹನ ಮಂತ್ರ' ಇತ್ಯಾದಿಗಳಲ್ಲಿ ಕೂಡಿ ಹಾಡಿದ್ದೇವೆ. 'ಕಿತ್ತೂರಿ ಕೇಸರಣಿ', ಮಾಸ್ತಿಯವರ 'ತಾನ್‌ಸೇನ್', ಗೀತ ನಾಟಕಗಳಲ್ಲೂ ಮುಕ್ತವಾಗಿ ಹಾಡಿದ್ದಾರೆ. ಇವೆಲ್ಲದರ ಸಂಗೀತ ನಿರ್ದೇಶನ ಪದ್ಮಚರಣ್‌ರವರದು. ೧೯೬೪ರಲ್ಲಿ ಮದ್ರಾಸಿನಲ್ಲಿ ನಡೆದ ಸಂಗೀತ ಸಮ್ಮೇಳನದಲ್ಲೂ ನಾನೂ ಕಾಳಿಂಗರಾಯರಿಬ್ಬರೇ ಹಾಡಿದೆವು. ಕುವೆಂಪುರವರಿಗೂ ಕಾಳಿಂಗರಾಯರ ಹಾಡಿಕೆ ಅತ್ಯಂತ ಪ್ರಿಯವಾಗಿತ್ತು.

ಇನ್ನು ಸಾರ್ವಜನಿಕ ಕಾರ್ಯಕ್ರಮಗಳ ಬಗ್ಗೆ ಒಂದೆರಡು ಮಾತನ್ನು ಹೇಳಲೇಬೇಕು. ಅವರು ಹಾಡುಗಾರಿಕೆಯಲ್ಲಿ ಬಹಳ ಅಚ್ಚುಕಟ್ಟು. ಆದರೆ ಈ ಕಲಾವಿದನಿಗೆ ಇಂಥದೇ ಪಕ್ಕವಾದ್ಯಗಳು ಬೇಕೆಂಬ ಹಠವಿರಲಿಲ್ಲ. ಯಾವುದಾದರೂ ಸರಿಯೆ, ಅಷ್ಟು ನಂಬಿಕೆ ಅವರಿಗೆ ತಮ್ಮ ಕಂಠಸಿರಿಯ ಮೇಲೆ, ಅವರ ಪ್ರತಿಭೆಯ ಮೇಲೆ. ಒಳ್ಳೆ ಬೆಣ್ಣೆಯಂಥ ಮೃದುವಾದ ಕಂಠ. ಮೈಕಿಲ್ಲದೆ ಅವರ ಧ್ವನಿ ಕೇಳುವುದೇ ಇಲ್ಲವೇನೋ ಎನ್ನುವಷ್ಟು ನವಿರಾದ ಕಂಠ ಅವರದು. ಅವರು ರಂಗದ ಮೇಲೆ ಬಂದರೆ ಸಾಕು ವಿದ್ಯುತ್ ಸಂಚಾರವಾದಂತಾಗಿ, ಬೇರೆಯ ಲೋಕವೇ ಸೃಷ್ಟಿಯಾಗುತ್ತಿತ್ತು ಅವರ ಗಾಯನ ಸುಧೆಯಿಂದ. ಇಷ್ಟಿದ್ದೂ ರಾಯರಿಗೆ ಲವಲೇಶವೂ ಅಹಂಕಾರ ವಾಗಲೀ, ಗರ್ವವಾಗಲೀ ಇರಲಿಲ್ಲ. ಅವರದು ಹಾಲಿನಂಥ ನಿರ್ಮಲ ಮನಸ್ಸು.

ಕಾಳಿಂಗರಾಯರ ಹೃದಯವಂತಿಕೆಯೂ ಹಿರಿದೇ. ಒಮ್ಮೆ 'ಉಪಾಸನೆ' ಚಿತ್ರದಲ್ಲಿ ಒಂದು ಪುಟಾಣಿ ಹುಡುಗಿ (ಮೈಸೂರು ಎಸ್. ರಾಜಲಕ್ಷ್ಮಿ, ಈಗ ಮೈಸೂರು ಆಕಾಶವಾಣಿಯ ನಿಲಯದ ಕಲಾವಿದೆ) ವೀಣೆ ನುಡಿಸಿದಳು. ಅವರ ಮನೆಗೆ ಆಗಾಗ್ಗೆ ಕಾಳಿಂಗರಾಯರು ಹೋಗುತ್ತಿದ್ದರಂತೆ. ಹಾಗಾಗಿ ಆ ಪುಟಾಣಿ ಹುಡುಗಿಯನ್ನು, "ನನ್ನ ಕಾರ್ಯಕ್ರಮ ಟೌನ್‌ಹಾಲಿನಲ್ಲಿದೆ. ನೀನು ನನಗೆ ಹಿನ್ನೆಲೆ ಸಂಗೀತ ನುಡಿಸಬೇಕು" ಎಂದು ಹೇಳಿಬಿಟ್ಟರು. ಹುಡುಗಿ ಭಯದಿಂದಲೇ ವೇದಿಕೆಗೆ

# ಬೆಳಕೆಂಬ ಮಾಯೆ...! ಅರಿದರೆ ?




ಎಲ್ಲಿಗೂ ಹೋಗುವುದಿಲ್ಲ ...
ಮೇಲ್ಮೈ ಮನದ ಹುಂಬತನ
ಕಳಚಿ ಗೋಡೆಗಂಟಿಸಿ
ಅಲ್ಲೇ ಹಾಸಿಹೊದ್ದು
ಮಲಗಿಬಿಡುತ್ತೆ
ಸೊಳ್ಳೆ ಪರದೆ ಇಲ್ಲದೆ
ದೀಪವಾರಿದ ಬೆಳಕು !

ಎಲ್ಲಿಗಾದರೂ ಹೋಗಲಿ...
ಕೇಳಲೇ ಬಾರದೆಂಬ
ಮೊಂಡುತನದೆದುರು
ಬೆನ್ನುಹುರಿ ನಾಚಿ
ಬಾಗಲೇ ಇಲ್ಲ ಮತ್ತೆ
ತಲೆ ಬಾಗಿಲಲ್ಲಿ ತೂರಿ
ದಿವಾನದಲ್ಲಿ ಕಾಲು ಚಾಚಿ
ಕುಳಿತರೂ ತನಗೇನು ?
ನೇಸರ ಮುಳುಗಿ
ಉಳಿದ ಕತ್ತಲು !
ಎಲ್ಲಿಗೆಂದು ತಿಳಿದಿದೆ...

ಅಲ್ಪ ಸ್ವಲ್ಪ ತವಕ ತಲ್ಲಣ
ಸ್ವಪ್ನ ಕಳಚಿದ ಕಣ್ಣಿನ್ನೆ
ಭಾವ ಕ್ಷಮೆಯೊಳಗೆ ಬೆಂದು
ಹೇಳಲಾಗದೆ ಒದ್ದಾಡಿ ಮಿಂದು
ಎಲ್ಲಿಯವರೆಗೆಂದೂ ತಿಳಿದಿದೆ
ನಾಲ್ಕು ದಿನದ ಬಾಳಿಗೆ
ಮತ್ತೆ ಮರಳಿದೆ
ಹೃದಯ ಕಿಡಿ

ಎಲ್ಲಿಗೆಂದು ತಿಳಿದರೂ...
ಕೈ ಚೆಲ್ಲಿ ಕುಳಿತ ಕಣ್ಗಳು
ಬೆಳಕು ಚೆಲ್ಲಿ ಹರಡಿದರು
ಮೇಣದಂತೆ ಗೇಯ್ದು ಒಡಲು
ಹೋಗಿಯೂ ಹೋಗದಂತೆ
ಹೋದರೂ ಕಾಣದಂತೆ
ಲೀನಗೊಂಡು ಹೋಗೋ
ಮಬ್ಬಿನಲ್ಲೂ
ಕೆನೆಪದರದ ಬಿರುಕು
ಮೊಂಬತ್ತಿ ಬೆಳಕು

**ಸಂಗೀತ ರವಿರಾಜ್**
'ಹೊಸೂರು ಹೌಸ್', ಬಾಲಂಬಿ ಅಂಚೆ, ಚಂಬು ಹಳ್ಳಿ,
ಮಡಿಕೇರಿ, ಕೊಡಗು ಜಿಲ್ಲೆ – ೫೭೪ ೨೩೪

ಹೋದಳು. ಮೋಹನರಾಗದಲ್ಲಿ ಒಂದು ಗೀತೆಯನ್ನು ಹಾಡುತ್ತ, ಮಧ್ಯೆ ಹುಡುಗಿಯ ಕಡೆಗೆ ನೋಡಿದರಂತೆ ರಾಯರು. ಹುಡುಗಿ ಮಧ್ಯೆ ಬಂದ ಆ ಅಂತರವನ್ನು ಅಚ್ಚುಕಟ್ಟಾಗಿ ಧೈರ್ಯದಿಂದ ನುಡಿಸಿದಾಗ, ರಾಯರಿಗೆ ಅಪರಿಮಿತ ಸಂತೋಷವಾಗಿ, ಅಲ್ಲಿಗೇ ಹಾಡುವುದನ್ನು ನಿಲ್ಲಿಸಿ, ಆ ಹುಡುಗಿಯ ಕೈಗೆ ನೂರೊಂದು ರೂಪಾಯಿ ಕೊಟ್ಟು ಅವಳನ್ನು ಎತ್ತಿಹಿಡಿದು ತೋರಿಸಿದರಂತೆ.

ಮತ್ತೊಂದು ಘಟನೆ ಜರುಗಿದ್ದು ಬೆಂಗಳೂರು ಟೌನ್‌ಹಾಲಿನಲ್ಲಿ ರಾಯರು ಹಾಡುತ್ತಿದ್ದ ಸಂದರ್ಭದಲ್ಲಿ. ಅವರ ಅಭಿಮಾನಿ ಕಾಲೇಜು ಹುಡುಗನೊಬ್ಬ ಅವರ ಹಾಡು ಕೇಳುತ್ತ ಸ್ಟೇಜ್ ಹತ್ತಿರವೇ ನಿಂತಿದ್ದ. ಅವನು ಹಾಡುತ್ತಿದ್ದುದನ್ನೂ ರಾಯರು ಕೇಳಿದ್ದರು. ಹಾಗಾಗಿ ರಾಯರು ಅರ್ಧ ಹಾಡಿದ ಮೇಲೆ, "ಈಗ ನೀನೊಂದೆರಡು ಹಾಡು ಹಾಡು" ಎನ್ನುತ್ತ ಬೆನ್ನು ತಟ್ಟಿ ಹುಡುಗನನ್ನು ಸ್ಟೇಜಿಗೆ ಕರೆಸಿದರಂತೆ. ಆ ಹುಡುಗ ಬೇರೆ ಯಾರೂ ಅಲ್ಲ. ನನ್ನ ಪತಿ ಎಸ್. ಜಿ. ರಘುರಾಂ.

ಇಂಥ ಈ ಪ್ರತಿಭಾವಂತ ಗಾಯಕನಿಗೆ ಬಿರುದು ಬಾವಲಿಗಳ ಸರಮಾಲೆಯೇ ದೊರೆತದ್ದು ಆಶ್ಚರ್ಯದ ಸಂಗತಿಯಲ್ಲ. ಜಾನಪದ ಸಂಗೀತರತ್ನ, ಬಾಲಗಂಧರ್ವ, ಜಾನಪದ ಕಲಾಚಕ್ರವರ್ತಿ, ಗಾಯನ ಚಕ್ರವರ್ತಿ, ಗಾಯನ ಕಂಠೀರವ, ಕನ್ನಡ ಉದಯಗಾನ ಕೋಗಿಲೆ, ಸಂಗೀತ ರಸವಿಹಾರಿ ಎಲ್ಲವೂ ಜನರು ಮೆಚ್ಚಿ ಹೃದಯಪೂರ್ವಕವಾಗಿ ಕೊಟ್ಟ ಬಿರುದು ಬಾವಲಿಗಳೇ.

ಇಷ್ಟೆಲ್ಲಾ ಇದ್ದೂ ಕಾಳಿಂಗರಾಯರ ಬದುಕಿನ ಕೊನೆಯ ದಿನಗಳು ಅಷ್ಟು ಸುಖಕರವಾಗಿರಲಿಲ್ಲ. ಮನೆಯ ಮೆಟ್ಟಿಲೇರುವಾಗ, ಜಾರಿಬಿದ್ದು ಚೇತರಿಸಿ ಕೊಳ್ಳುವಷ್ಟರಲ್ಲಿ ಮತ್ತೆ ರಿಕ್ಷಾ ಬಡಿದು ಮೂಳೆ ಜಜ್ಜಿಹೋಯಿತು. ಅಂದಿನಿಂದ ಕಷ್ಟದ ದಿನಗಳು ಎದುರಾದವು. ತೀವ್ರ ಆರ್ಥಿಕ ಮುಗ್ಗಟ್ಟಿಗೆ ಸಿಲುಕಿಕೊಂಡರು. ಧೂಮಪಾನ, ಸೋಮಪಾನಗಳಿಂದಲೂ ಜೀವ ನಿತ್ರಾಣವಾಗಿಹೋಗಿತ್ತು.

ಆ ಸಂದರ್ಭದಲ್ಲಿ ನಾನು, ರಘುರಾಂ ಇಬ್ಬರೂ ಅವರನ್ನು ಕಾಣಲು ಹೋಗಿದ್ದೆವು. ಕೈಲಾಗದಿದ್ದರೂ ಏನೋ ಗುನುಗುವ ಪ್ರಯತ್ನದಲ್ಲಿದ್ದರು. ಕಾಳಿಂಗರಾಯರ ಆ ಸಂಗೀತದ ಗುಂಗನ್ನು ಗಮನಿಸಿ ನಾನೆಂದೆ : "ನೀವು ಬೇಗ ಚೇತರಿಸಿಕೊಂಡು, ಎಂದಿನಂತೆ ಹಾಡುವ ಹಾಗಾಗಬೇಕು" ಎಂದು. ಅದಕ್ಕೆ ಕಾಳಿಂಗರಾಯರು, "why not ? If I get a girl friend like you I will sing again, OK ?" ಎನ್ನುತ್ತ (ಅವರಿಗೆ ನನ್ನ ಹಾಡಿಕೆಯ ಬಗ್ಗೆ ಬಲು ಪ್ರೀತಿ, ಮೆಚ್ಚುಗೆ ಇತ್ತು. ಹಾಗೆಂದು ಹೇಳಿದ್ದರು ಕೂಡ) ಹಾಗೆಂದು ಹೇಳುತ್ತ ಕೋಲೂರಿಕೊಂಡು ಬಂದು ನನ್ನ ಕೈ ಹಿಡಿದುಕೊಂಡರು. ನನ್ನ ಕಣ್ಣಲ್ಲಿ ನೀರಾಡಿತು. ಆ ಮರೆಯಲಾಗದ ಘಟನೆ ಜರುಗಿದ ಕೆಲವೇ ದಿನಗಳ ನಂತರ, ಎಂದರೆ ೨೧.೦೯.೧೯೮೧ರಂದು ಅವರು ತೀರಿಕೊಂಡ ಸುದ್ದಿ ಕೇಳಿದೆ. ರಾಯರ ಪಾರ್ಥಿವ ಶರೀರವನ್ನು ಒಮ್ಮೆ ಸ್ಮಶಾನಕ್ಕೆ ಸಾಗಿಸಲಾದ ನಂತರವೂ ಅಪಾರ ಸಂಖ್ಯೆಯಲ್ಲಿ ನೆರೆದಿದ್ದ ಅವರ ಅಭಿಮಾನಿಗಳ ಬೇಡಿಕೆ, ಒತ್ತಡಗಳಿಗೆ ಓಗೊಟ್ಟು ಸಂಪಂಗಿರಾಮ ನಗರದಲ್ಲಿ ನಿರ್ಮಿಸಲಾಗಿದ್ದ ಸಾಂಸ್ಕೃತಿಕ ವೇದಿಕೆಯ ಮೇಲೆ ಮತ್ತೆ ಅದನ್ನು ತಂದು ಇರಿಸಲಾಯಿತು. ಹೀಗೆ ದಿವಂಗತರಿಗೆ ಅಭಿಮಾನಿಗಳು ಗೌರವಯುತ ವಿದಾಯ ಹೇಳಲು ಪಟ್ಟು ಹಿಡಿದು ತಮ್ಮ ಇಂಗಿತವನ್ನು ವ್ಯಕ್ತಪಡಿಸಿದ್ದು ಹಿಂದೆಂದೂ ನಡೆಯದ ಘಟನೆ ಎಂದರೆ ತಪ್ಪಾಗಲಾರದು. ಅದು ಈ ಮಹಾನ್ ಗಾಯಕ ಕನ್ನಡಿಗರ ಹೃದಯಕ್ಕೆ ಹತ್ತಿರವಾದ ಬಗೆ ಹಾಗೂ ಅವರ ಜನಪ್ರಿಯತೆಗೆ ಸಾಕ್ಷಿ . ಈಗ ಅಲ್ಲಿಯ ರಸ್ತೆಗೂ 'ಕಾಳಿಂಗರಾವ್ ರಸ್ತೆ' ಎಂದೇ ಹೆಸರಿಡಲಾಗಿದೆ.

ಆರೂರಿನಲ್ಲಿ ಹುಟ್ಟಿ, ನೂರೂರು ತಿರುಗಿ, ಸಾವಿರಾರು ಕಾರ್ಯಕ್ರಮಗಳನ್ನು ನೀಡಿ, ಲಕ್ಷಾಂತರ ಹೃದಯಗಳನ್ನು ಗೆದ್ದ ಕಿನ್ನರ ಕಂಠದ ಕನ್ನಡದ ಕೋಗಿಲೆ, ಭಾವಗೀತಾ ಗಾಯನ ಚತುರ, ಜಾನಪದ ಜಗತ್ತಿನ ಮೋಡಿಗಾರ, ದಾಸರ ಪದಗಳ ಸುಲಲಿತ ಹಾಡುಗಾರ, ವಚನವೈಭವದ ಸರದಾರ – ಇಂಥ ಇನ್ನೂ ಅನೇಕ ಗುಣವಾಚಕಗಳಿಗೆಲ್ಲ ಈತನೇ ವಾರಸುದಾರ. ಶರೀರವಳಿದರೂ ಅವರ ಶಾರೀರದ ಮಾಧುರ್ಯ ಚಿರಂತನವಾಗಿ ಜನತೆಗೆ, ಮುಖ್ಯವಾಗಿ ಮುಂದಿನ ಪೀಳಿಗೆಗೆ ಬಳುವಳಿಯಾಗಿ ಉಳಿದಿರುವುದೇ ನಮ್ಮೆಲ್ಲರ ಸೌಭಾಗ್ಯ.

**ಎಚ್. ಆರ್. ಲೀಲಾವತಿ**
'ಜಯಲತ', ನಂ. ೭೬, ಮಾರುತಿ ದೇವಸ್ಥಾನದ ರಸ್ತೆ
ಸರಸ್ವತಿಪುರಂ, ಕುವೆಂಪುನಗರ, ಮೈಸೂರು – ೫೭೦ ೦೧೯

# ಅಮೂಲ್ಯ ಪವಿತ್ರ ಉಡುಗೊರೆ




ಡಿಲ್ಲಿಂಗ್ ಹ್ಯಾಮ್ ಯಂಗ್ ದಂಪತಿಗೆ ಎರಡು ಆಸ್ತಿಗಳು ಇದ್ದವು. ಅವುಗಳ ಬಗ್ಗೆ ಇಬ್ಬರಿಗೂ ಅಗಾಧ ಹೆಮ್ಮೆ. ಒಂದು ತಲೆಮಾರಿನಿಂದ ಬಂದಿದ್ದ ಚಿನ್ನದ ಗಡಿಯಾರ. ಇನ್ನೊಂದು ಡೆಲ್ಲಾಳ ಗುಂಗುರು ಕೂದಲು. ಪಕ್ಕದ ಫ್ಲಾಟಿನಲ್ಲಿ ಷೀಬಾದ ರಾಣಿ ಇದ್ದಿದ್ದರೆ ಡೆಲ್ಲಾ ಕಿಟಕಿಯಿಂದ ತನ್ನ ಉದ್ದ ಕೂದಲನ್ನು ಒಣಗಿಸಿಕೊಳ್ಳುವ ನೆಪದಿಂದ ಕಿಟಕಿಯಿಂದ ತೂಗುಬಿಟ್ಟು ಅವಳ ಹೊಟ್ಟೆ ಉರಿಸುತ್ತಿದ್ದಳು. ರಾಣಿಯ ಆಭರಣಗಳು, ಅಲಂಕಾರಗಳು ಅದರ ಮುಂದೆ ಶೂನ್ಯ. ರಾಜ ಸಾಲೊಮನ್ನಿನ ಸಮಸ್ತ ಶ್ರೀಮಂತಿಕೆಗೆ ಎಲ್ಲವೂ ಚಿನ್ನದ ಗಡಿಯಾರದ ಎದುರು ಏನೂ ಇಲ್ಲ.

ಒಂದು ಡಾಲರ್ ಎಂಭತ್ತೇಳು ಸೆಂಟುಗಳು. ಎಲ್ಲವೂ ಅಷ್ಟೆ. ಅದರಲ್ಲಿ ಅರವತ್ತು ಸೆಂಟುಗಳು ಪೆನ್ನಿಗಳು. ಜಿನಸಿ, ತರಕಾರಿಗಳಲ್ಲಿ ಉಳಿಸಿ ಒಟ್ಟುಗೂಡಿಸಿದ ಹಣ. ಜುಗ್ಗುತನದ ಆಪಾದನೆಗೂ ಕಿವಿಗೊಡದೆ ಕಷ್ಟದಿಂದ ಕಾಪಾಡಿಟ್ಟ ಕಾಸು. ಡೆಲ್ಲಾ ಅವನ್ನು ಮೂರು ಬಾರಿ ಎಣಿಸಿದಳು. ಒಟ್ಟು ೧ ಡಾಲರ್ ಎಂಭತ್ತೇಳು ಸೆಂಟುಗಳು.

ಮರುದಿನವೇ ಕ್ರಿಸ್‌ಮಸ್ ಹಬ್ಬ. ಮುರುಕು ಮಂಚದ ಮೇಲೆ ಉರುಳಾಡುತ್ತಾ ಗಟ್ಟಿಯಾಗಿ ಕಿರುಚಾಡುವುದನ್ನು ಬಿಟ್ಟು ಬೇರೆ ಏನೂ ಕೆಲಸವಿಲ್ಲ. ಡೆಲ್ಲಾ ಮಾಡಿದ್ದು ಅಷ್ಟೆ. ಜೀವನ ಆನಂದಬಾಷ್ಪ, ಕಣ್ಣೀರುಗಳ ಸಂಗಮವೆಂಬುದೇ ಅದರ ನೈತಿಕ ಸಂದೇಶ. ಬಹುಪಾಲು ನಿಟ್ಟುಸಿರೇ ಪ್ರಾಪ್ತಿ.

ಮನೆಯ ಯಜಮಾನಿ ನಿಧಾನವಾಗಿ ಸುಧಾರಿಸಿಕೊಂಡು ಮನೆಯನ್ನು ವೀಕ್ಷಿಸಿದಳು. ತಿಂಗಳಿಗೆ ಎಂಟು ಡಾಲರ್ ಬಾಡಿಗೆಯ ಪೀಠೋಪಕರಣಗಳು. ತೀರಾ ನಿರ್ಗತಿಕ ಸ್ಥಿತಿಯಲ್ಲಿದ್ದರೂ ಯಾರೋ ದಾನಿಗಳ ಅನುಗ್ರಹದಿಂದ ಲಭಿಸಿದಂತಿದ್ದವು.

ಮುಂದಿನ ಬಾಗಿಲ ಬಳಿ ಒಂದು ಪತ್ರ-ಪೆಟ್ಟಿಗೆ ಜೋಡಿಸಲ್ಪಟ್ಟಿತ್ತು. ಒಳಗೆ ಪತ್ರಗಳು ಮಾತ್ರ ಇಲ್ಲ. ಒಂದು ಕರೆಗಂಟೆಯ ಸ್ವಿಚ್ ಇತ್ತು. ಯಾವ ಮಾನವ ಬೆರಳುಗಳೂ ಅದನ್ನು ಪ್ರಚೋದಿಸಲು ಸಾಧ್ಯವಿರಲಿಲ್ಲ. ಅಲ್ಲಿ 'ಮಿಸ್ಟರ್ ಜೇಮ್ಸ್ ಡಿಲ್ಲಿಂಗ್ ಹ್ಯಾಮ್ ಯಂಗ್' ಎಂಬ ನಾಮಾಂಕಿತದ ಪ್ರಕಟಣಾ ಹಲಗೆಯೊಂದಿತ್ತು. ಹಿಂದೆ ಆರ್ಥಿಕ ಅಭ್ಯುತೆಯಲ್ಲಿ ಝುಗಝುಗಿಸುತ್ತಿದ್ದ ನಾಮಫಲಕ ಅದು. ಇಂದು ಬಡಸ್ಥಿತಿಯಲ್ಲಿ ಮಬ್ಬಾಗಿತ್ತು. ಡಿಲ್ಲಿಂಗ್ ಹ್ಯಾಮ್ ಮನೆಗೆ ಹಿಂತಿರುಗಿದಾಗ ಅವನ ಪತ್ನಿ ಡೆಲ್ಲಾ ಅವನನ್ನೂ ಪ್ರೇಮಾಲಿಂಗನೆಯಲ್ಲಿ ಅವಚಿಕೊಳ್ಳುತ್ತಿದ್ದಳು. ಅವರದು ಅಮರಪ್ರೇಮ.

ಡೆಲ್ಲಾ ತನ್ನ ಅಳು ನಿಲ್ಲಿಸಿ ಗಲ್ಲವನ್ನು ಪೌಡರ್ ವಸ್ತ್ರದಿಂದ ಸ್ವಚ್ಛಗೊಳಿಸಿ ದರ್ಪಣದ ಎದುರು ನಿಂತುಕೊಂಡು ಉದಾಸೀನ ಭಾವದಿಂದ ಹೊರಗಿನ ಬೂದುಬಣ್ಣದ ಬೆಕ್ಕು ಬೂದು ಬಣ್ಣದ ಹಿತ್ತಲಿನ, ಬೂದು ಬಣ್ಣದ ಬೇಲಿ ಹಾದು ಹೋಗುತ್ತಿದ್ದುದನ್ನು ನೋಡಿದಳು. ನಾಳೆ ಕ್ರಿಸ್‌ಮಸ್ ಹಬ್ಬ. ಅವಳಲ್ಲಿರುವುದು ಕೇವಲ ಒಂದು ಡಾಲರ್, ಎಂಭತ್ತೇಳು ಸೆಂಟ್‌ಗಳು. ಅದರಲ್ಲಿ ಜಿಮ್‌ಗೆ ಕ್ರಿಸ್‌ಮಸ್ ಉಡುಗೊರೆ ತರಬೇಕು. ತಿಂಗಳುಗಟ್ಟಲೆ ಜಾಣತನದಿಂದ ಪ್ರತಿಪೆನ್ನಿಯನ್ನೂ ಕಾಪಾಡಿ ಇಟ್ಟಿದ್ದಳು. ತಿಂಗಳಿಗೆ ಇಪ್ಪತ್ತು ಡಾಲರಿನಲ್ಲಿ ಇನ್ನೆಷ್ಟು ಉಳಿಸಲು ಸಾಧ್ಯ? ಖರ್ಚೊ ದಿನದಿನಕ್ಕೂ ಗಗನಕ್ಕೇರುತ್ತಿತ್ತು. ಅದು ಇದ್ದದ್ದೇ. ತನ್ನ ಪ್ರಿಯತಮನ ಪ್ರೀತಿಯ ಉಡುಗೊರೆಯ ಬಗ್ಗೆ ಯೋಚಿಸುತ್ತಾ ಅನೇಕ ಸಂತಸದ ಘಂಟೆಗಳನ್ನು ಕಳೆದಿದ್ದಳು. ಅದು ಅತ್ಯಂತ ಅಪರೂಪದ್ದೂ ಹಾಗೂ ಸುಂದರವೂ ಆಗಿರಬೇಕು. ಜಿಮ್‌ನ ಯೋಗ್ಯತೆ ಹಾಗೂ ಅವರಿಬ್ಬರ ಪರಸ್ಪರ ಪ್ರೀತಿಯ ನೆನಪಾಗಿ ರಂಜಿಸಬೇಕು. ರೂಮಿನ ಕಿಟಕಿಗಳ ನಡುವೆ ಒಂದು ನೀಳ ಕನ್ನಡಿಯಿತ್ತು. ತೆಳ್ಳಗಿರುವ ಹಾಗೂ ಚುರುಕಾಗಿರುವ ಯಾವನೇ ಅಥವಾ ಯಾವಳೇ ಅದರ ಮೂಲಕ ತನ್ನ ಸ್ಪಷ್ಟ ಚೆಲುವಿನ ಅರಿವನ್ನು ಪಡೆಯಬಹುದು. ತೆಳುವಾಗಿದ್ದ ಡೆಲ್ಲಾ ಈ ಕಲೆಯಲ್ಲಿ

**ಮೂಲ (ಇಂಗ್ಲಿಷ್) : ಓ. ಹೆನ್ರಿ**

**ಕನ್ನಡಕ್ಕೆ : ಬಿ. ಆರ್. ಭೀಮಾಚಾರ್**

ಪಳಗಿದ್ದಳು. ಇದ್ದಕ್ಕಿದ್ದಂತೆಯೇ ಕಿಟಕಿಯ ಭಾಗದಿಂದ ಸುಂಟರಗಾಳಿಯಂತೆ ಹೊರಳಿ ಕನ್ನಡಿ ಎದುರು ನಿಂತುಕೊಂಡಳು. ಕಣ್ಣುಗಳು ಪ್ರಕಾಶಮಾನವಾಗಿ ಬೆಳಗುತ್ತಿದ್ದವು. ಮುಖ ಮಾತ್ರ ತನ್ನ ಹೊಳಪನ್ನು ಕಳೆದುಕೊಂಡಿತು.

ಈಗ ಡಿಲ್ಲಿಂಗ್ ಹ್ಯಾಮ್ ಯಂಗ್ ದಂಪತಿಗೆ ಎರಡು ಆಸ್ತಿಗಳು ಇದ್ದವು. ಅವುಗಳ ಬಗ್ಗೆ ಇಬ್ಬರಿಗೂ ಅಗಾಧ ಹೆಮ್ಮೆ. ಒಂದು ತಲೆಮಾರಿನಿಂದ ಬಂದಿದ್ದ ಚಿನ್ನದ ಗಡಿಯಾರ. ಇನ್ನೊಂದು ಡೆಲ್ಲಾಳ ಗುಂಗುರು ಕೂದಲು. ಪಕ್ಕದ ಫ್ಲಾಟಿನಲ್ಲಿ ಷೀಬಾದ ರಾಣಿ ಇದ್ದಿದ್ದರೆ ಡೆಲ್ಲಾ ಕಿಟಕಿಯಿಂದ ತನ್ನ ಉದ್ದ ಕೂದಲನ್ನು ಒಣಗಿಸಿಕೊಳ್ಳುವ ನೆಪದಿಂದ ಕಿಟಕಿಯಿಂದ ತೂಗುಬಿಟ್ಟು ಅವಳ ಹೊಟ್ಟೆ ಉರಿಸುತ್ತಿದ್ದಳು. ರಾಣಿಯ ಆಭರಣಗಳು, ಅಲಂಕಾರಗಳು ಅದರ ಮುಂದೆ ಶೂನ್ಯ. ರಾಜ ಸಾಲೊಮನ್ನಿನ ಸಮಸ್ತ ಶ್ರೀಮಂತಿಕೆಗೆ ಎಲ್ಲವೂ ಚಿನ್ನದ ಗಡಿಯಾರದ ಎದುರು ಏನೂ ಇಲ್ಲ. ಜಿಮ್ ಪ್ರತಿಬಾರಿಯೂ ತನ್ನ ಗಡಿಯಾರವನ್ನು ಅವನೆದುರು ಪ್ರದರ್ಶಿಸುತ್ತಾ ಹೊಟ್ಟೆಕಿಚ್ಚಿನಿಂದ ಗಡ್ಡ ಕಿತ್ತುಕೊಳ್ಳುವಂತೆ ಮಾಡುತ್ತಿದ್ದನೋ ಏನೋ ?

ಈಗ ಡೆಲ್ಲಾಳ ಸುಂದರ ಕೂದಲು ಅವಳ ಸುತ್ತಲೂ ಬೆಳಗುತ್ತಾ, ಸುರಳಿ ಸುರಳಿಯಾಗಿ ಉರುಳುತ್ತಾ ಕಂದು ನೀರಿನ ತುಂತುರು ಜಲಪಾತದಂತೆ ಬಳುಕುತ್ತಿತ್ತು. ಅದು ಅವಳ ಮೊಳಕಾಲಿನವರೆಗೂ ಇಳಿದು ಒಂದು ಆಭರಣದಂತೆಯೇ ಶೋಭಿಸುತ್ತಿತ್ತು. ನಂತರ ಅದನ್ನು ಕೂಡಲೇ ಮಾನಸಿಕ ನಿಮ್ನತೆಯಿಂದ ಮೇಲಕ್ಕೆ ಎಳೆದುಕೊಳ್ಳುತ್ತಿದ್ದಳು. ಒಂದು ಬಾರಿ ಅವಳು ಸ್ತಬ್ಧಳಾಗಿ ಒಂದೆರಡು ನಿಮಿಷ ನಿಂತಾಗ ಎರಡು ಮೂರು ಹನಿಗಳು ಸವೆದ ಕೆಂಪು ಜಮಖಾನೆಯ ಮೇಲೆ ಬಿದ್ದು ಹೊಳೆಯುತ್ತಿದ್ದವು.

ಕಂದು ಜಾಕೆಟ್, ಕಂದು ಹ್ಯಾಟ್ ಧರಿಸಿದಳು. ವಸ್ತ್ರಗಳನ್ನು ಧರಿಸಿದಳು. ವಸ್ತ್ರಗಳನ್ನು ಕುಣಿಸುತ್ತಾ, ಕಣ್ಣಿನಲ್ಲಿ ಹೊಳಪು ಚೆಲ್ಲುತ್ತಾ, ಮೆಟ್ಟಲುಗಳನ್ನಿಳಿದು ಬಾಗಿಲಿಂದಾಚೆ ಕುಣಿಯುತ್ತಾ ಪೇಟೆಗೆ ಹೊರಟಳು.

'ಮ್ಯಾಡಮ್ ಸೋಫ್ರೋನಿ, ಎಲ್ಲಾ ತರಹದ ಕೇಶ ವಿನ್ಯಾಸಗಳು' ಎಂಬ ನಾಮಾಂಕಿತ ಬೋರ್ಡ್ ಬಳಿ ನಿಂತಳು. ಡೆಲ್ಲಾ ಅಂಗಡಿಗೆ ಓಡಿದಳು. ಸುಧಾರಿಸಿಕೊಂಡಳು. ವಿಶಾಲ ಮೈಕಟ್ಟು, ಬಿಳಿ ಮೈನ ಮ್ಯಾಡಮ್ ಸೋಫ್ರೋನಿ ಕಠಿಣ ಸ್ವಭಾವದವಳಂತೆ ಕಂಡಳು.

ಡೆಲ್ಲಾ : "ನನ್ನ ಕೇಶವನ್ನು ಕೊಳ್ಳುವಿರಾ ?"

ಮ್ಯಾಡಮ್ : "ಆಗಲಿ, ಹ್ಯಾಟ್ ತೆಗೆಯಿರಿ, ಕೂದಲು ಹೇಗಿದೆ ? ನೋಡೋಣ." ಕಂದು ಕೂದಲಿನ ಜಲಪಾತ ಚಿಮ್ಮಿತು.

ಮ್ಯಾಡಮ್, "ಇಪ್ಪತ್ತು ಡಾಲರು" ಎಂದು ಕೂದಲನ್ನು ತನ್ನ ಕುಶಲ ಕೈಯಲ್ಲಿ ಎತ್ತುತ್ತಾ ನುಡಿದಳು. "ಬೇಗನೆ ಕೊಡಿ", ಎಂದಳು ಡೆಲ್ಲಾ.

ಮುಂದಿನ ಎರಡು ಗಂಟೆಗಳಲ್ಲಿ, ಎಲ್ಲಾ ಪ್ರಮುಖ ಅಂಗಡಿಗಳಿಗೂ ಭೇಟಿ ಕೊಟ್ಟಳು. ಜಿಮ್‌ಗೆ ಕೊಡುವ ಉಡುಗೊರೆಗಾಗಿ ಎಲ್ಲಾ ಸ್ಟೋರ್‌ಗಳಲ್ಲೂ ಹುಡುಕಿದಳು. ಕೊನೆಗೊಂದು ಸ್ಟೋರಿನಲ್ಲಿ ಸಿಕ್ಕಿತು. ಇನ್ನಾವ ಸ್ಟೋರಿನಲ್ಲೂ ಅಂತಹುದಿರಲಿಲ್ಲ. ಅದು ಜಿಮ್ಮಿಗೆಂದೇ ಸೃಷ್ಟಿಯಾದದ್ದು. ಅದರಲ್ಲಿ ಅತಿ ಆಡಂಬರವಿಲ್ಲ. ಪರಿಶುದ್ಧ, ಸರಳ ಶ್ರೇಷ್ಠತೆ. ಅದು ಅವನಂತೆಯೇ. ಶಾಂತತೆ, ಶ್ರೇಷ್ಠತೆ ಪರಸ್ಪರ ಹೊಂದಿಕೊಂಡಿದ್ದವು. ಅದು ಪ್ಲಾಟಿನಂ ಚೈನು, ವಾಚಿನದು. ಅವರು ಅವಳಿಂದ ಇಪ್ಪತ್ತೊಂದು ಡಾಲರ್ ಪಡೆದರು. ಉಳಿದ ಎಂಭತ್ತೇಳು ಸೆಂಟುಗಳೊಂದಿಗೆ ಮನೆಗೆ ಓಡಿದಳು.

ಜಿಮ್ ಗಡಿಯಾರದ ಯೋಗ್ಯತೆಗೆ ಸರಿಸಮನಾದದ್ದು ಆ ಪ್ಲಾಟಿನಂ ಚೈನು. ಜನಗಳೊಂದಿಗಿದ್ದಾಗ ಪದೇ ಪದೇ ಕಾಲ ನೋಡಿಕೊಳ್ಳುವ ಬಗ್ಗೆ ಕುತೂಹಲ ಹೊಂದಿರುವುದರಲ್ಲಿ ಯಾವ ಅನುಮಾನವೂ ಇಲ್ಲ. ವೇಳೆಯನ್ನು ಅರಿಯುವುದಕ್ಕಿಂತ ಅದರ ಪ್ರದರ್ಶನವೇ ಆಂತರಿಕ ಒತ್ತಾಸೆಯಾಗಿರುತ್ತದೆ. ಗಡಿಯಾರವೇನೋ ಅತ್ಯಮೂಲ್ಯ. ಅದರೊಂದಿಗಿನ ಹಳೆಯ ಚರ್ಮದ ಪಟ್ಟಿ ಯಾವಾಗಲೂ ಅವನ ಚಿಂತೆಗೆ ಕಾರಣವಾಗಿತ್ತು. ಅಂತಹ ಗಡಿಯಾರಕ್ಕೆ ಒಪ್ಪುವ ಚೈನಿಲ್ಲದಿರುವುದು ಎಂತಹ ವಿಪರ್ಯಾಸ! ಡೆಲ್ಲಾ ಮನೆ ತಲುಪಿದಾಗ ಅವಳ ಆಸೆಯ ಉದ್ರೇಕ ಅಡಗಿ ವಾಸ್ತವಿಕತೆ ಹಾಗೂ ತಾರ್ಕಿಕತೆಗೆ ಪರಿವರ್ತಿಸಲ್ಪಟ್ಟಿತ್ತು. ದೀಪ ಹಚ್ಚಿದಳು. ಪ್ರೀತಿ, ಉದಾರತೆಗಳ ಅನಾಹುತವನ್ನು ಸರಿಪಡಿಸಿಕೊಳ್ಳಲು ತಕ್ಷಣ ನಿರತಳಾದಳು.

ಅದೊಂದು ಅದ್ಭುತ ಪ್ರಬಲ ಸಾಹಸವಲ್ಲವೇ ? ನಲವತ್ತು ನಿಮಿಷಗಳಲ್ಲಿ ಅವಳ ತಲೆ ಚಿಕ್ಕ ಚಿಕ್ಕ ಗುಂಗುರು ಕೂದಲಿನಿಂದ ಆವೃತವಾಗಿ ತುಂಟ ಶಾಲಾ ಬಾಲಕನಂತೆ ಕಾಣಿಸುತ್ತಿದ್ದಳು. ಮತ್ತೆ ಮತ್ತೆ ನೀಳ ಕನ್ನಡಿಯ ಮುಂದೆ ನಿಂತು ತನ್ನ ಪ್ರತಿಬಿಂಬವನ್ನು ಎಚ್ಚರಿಕೆಯಿಂದ ಹಾಗೂ ವಿಮರ್ಶಾತ್ಮಕವಾಗಿ ನೋಡಿಕೊಳ್ಳುತ್ತಿದ್ದಳು.

"ಜಿಮ್, ನನ್ನನ್ನು ಕೊಲ್ಲದಿದ್ದರೆ ಸಾಕು, ಕೋನಿ ದ್ವೀಪದ 'ಕೋರಸ್ ಗರ್ಲ್'ನಂತೆ ಕಾಣುತ್ತೀಯ ಎಂದು ಹೇಳಬಹುದು. ನಾನೇನು ಮಾಡಲಿ ? ಒಂದು ಡಾಲರ್ ಎಂಭತ್ತೇಳು ಪೈಸೆಗಳಿಂದ ಇನ್ನೇನು ಸಾಧ್ಯ ?"

ಬೆಳಿಗ್ಗೆ ಏಳು ಗಂಟೆ. ಕಾಫಿ ರೆಡಿಯಾಗಿದೆ. ತಿಂಡಿಯನ್ನು ಬಿಸಿ ಮಾಡುವ ಒಲೆ ಬಾಟಲಿಗಳು ಸಿದ್ಧವಾಗಿವೆ.

ಜಿಮ್ ಯಾವಾಗಲೂ ಹೊತ್ತು ಮಾಡುವವನಲ್ಲ. ಡೆಲ್ಲಾ ಚೈನನ್ನು ತಿರುಗಿಸುತ್ತಾ ಅವನ ನಿರೀಕ್ಷಣೆಯಲ್ಲಿ ಬಾಗಿಲಿನ ಪಕ್ಕದ ಮೇಜಿನ ಮೂಲೆಯಲ್ಲಿ ಕುಳಿತಳು. ಹೆಜ್ಜೆಯ ಸಪ್ಪಳ ವೃದ್ಧಿಯಾಗುತ್ತಿದೆ. ಒಂದು ಕ್ಷಣ ಬೆಳ್ಳಗಾದಳು. ಸೂಕ್ಷ್ಮ ವಿಚಾರಗಳಿಗೂ ಮೌನ ಪ್ರಾರ್ಥನೆ ಸಲ್ಲಿಸುವುದು ಅವಳ ಸ್ವಭಾವ.

ತನ್ನಲ್ಲಿ ತಾನೇ, "ದಯಾಮಯ ಭಗವಂತ, ನಾನು ಈಗಲೂ ಸುಂದರಳಾಗಿದ್ದೇನೆಂಬ ಭಾವನೆಯನ್ನುಂಟುಮಾಡು" ಎಂದು ಪ್ರಾರ್ಥಿಸಿದಳು.

ಬಾಗಿಲು ತೆರೆಯಿತು. ಜಿಮ್ ಪ್ರವೇಶಿಸಿದ. ಬಾಗಿಲನ್ನು ಮುಚ್ಚಿದ. ತೆಳುವಾಗಿರುವಂತೆ ಹಾಗೂ ಯಾವುದೋ ಗಂಭೀರ ಆಲೋಚನೆಯಲ್ಲಿ ಮುಳುಗಿರುವಂತೆ ಕಂಡ. ಬಡಪ್ರಾಣಿ, ಇನ್ನೂ ಇಪ್ಪತ್ತೆರಡೇ ವರ್ಷ ವಯಸ್ಸು. ಈಗಲೇ ಸಂಸಾರದ ಭಾರ ಹೊತ್ತಿದ್ದಾನೆ. ಅವನಿಗೆ ಹೊಸ ಹೊರಕೋಟು, ಹಾಗೂ ಹೊಸ ಗ್ಲೋವುಗಳ ಅವಶ್ಯಕತೆ ಇದೆ.

ಜಿಮ್ ರೂಮಿನೊಳಗೆ ಡೆಲ್ಲಾಳನ್ನೇ ದಿಟ್ಟಿಸಿನೋಡುತ್ತಾ ಏನೋ ವಿಚಿತ್ರ ಅಸ್ಪಷ್ಟ ಆಲೋಚನೆಯಲ್ಲಿ ಮುಳುಗಿದ್ದ. ಅವಳ ಬಗ್ಗೆ ನೋವೋ, ಅಚ್ಚರಿಯೋ, ತಿರಸ್ಕಾರವೋ ಅಥವಾ ಅನುಕಂಪವೋ ? ಏನೂ ಗೊತ್ತಾಗುತ್ತಿಲ್ಲ, ಅಂತೂ ದೃಷ್ಟಿಯಲ್ಲಿ ವಿಚಿತ್ರ ನೋಟ ವ್ಯಕ್ತವಾಗಿತ್ತು.

ಡೆಲ್ಲಾ ನಡುಗುತ್ತಾ ಅವನನ್ನು ಸಮೀಪಿಸಿದಳು.

"ಪ್ರಿಯತಮ ಜಿಮ್..." ಕಣ್ಣೀರು ಸುರಿಸಿದಳು.

"ನನ್ನನ್ನು ಹಾಗೆ ನೋಡಬೇಡ" ಎಂದು ಗೋಗರೆದಳು. "ನಾನು ನನ್ನ ಕೂದಲನ್ನು ವಿಸರ್ಜಿಸಿ ಮಾರಿದ್ದೇನೆ. ನಿನಗೆ ಕ್ರಿಸ್‌ಮಸ್ ಗಿಫ್ಟ್ ಕೊಡದೆ ಹೇಗೆ ಬದುಕಿರಲಿ ? ಅದು ಶೀಘ್ರವಾಗಿ ಮತ್ತೆ ಬೆಳೆಯುತ್ತದೆ. ಯೋಚನೆ ಮಾಡಬೇಡ. ಮೊದಲಿನಂತೆಯೇ ಆಗುತ್ತೇನೆ. ದಯವಿಟ್ಟು ಒಪ್ಪಿಕೋ. 'ಮೆರಿ ಕ್ರಿಸ್‌ಮಸ್' ಎಂದು ಉಚ್ಚರಿಸು. ನಾವು ಸುಖವಾಗಿರೋಣ. ನಾನು ಎಂತಹ ಅಮೂಲ್ಯ ಉಡುಗೊರೆ ತಂದಿದ್ದೇನೆ, ಗೊತ್ತಾ ?" ಎಂದು ಕಣ್ಣೀರು ಸುರಿಸಿದಳು.

"ಕೂದಲನ್ನು ಕತ್ತರಿಸಿಕೊಂಡುಬಿಟ್ಟೆಯಾ ?" ಎಂದು ಈವರೆಗೂ ಆ ವಿಷಯದ ಬಗ್ಗೆ ಯಾವ ಮಾನಸಿಕ ಪ್ರಯತ್ನವನ್ನೂ ಮಾಡದವನಂತೆ ಕೇಳಿದ.

"ತೆಗೆಸಿದ್ದೂ ಆಯಿತು. ಮಾರಿದ್ದೂ ಆಯಿತು. ನೀವು ನನ್ನನ್ನು ಮೊದಲಿನಂತೆಯೇ ಪ್ರೀತಿಸುವುದಿಲ್ಲವೇ ?"

ಜಿಮ್, ರೂಮನ್ನು ಕುತೂಹಲದಿಂದ ವೀಕ್ಷಿಸಿದ.

"ನೀನು ನಿನ್ನ ಕೂದಲು ಹೊರಟುಹೋಗಿದೆ ಎಂದು ಹೇಳುತ್ತೀಯಾ ?" ಮೂರ್ಖನಂತೆ ಕೇಳಿದ. ಡೆಲ್ಲಾ, "ನೀನು ಹುಡುಕಬೇಕಾದ್ದಿಲ್ಲ. ಅದು ಇನ್ನಿಲ್ಲ. ಮಾರಿದ್ದೇನೆ. ಮಾರಿದ್ದೇನೆ. ಕ್ರಿಸ್‌ಮಸ್ ಹಬ್ಬ. ಕೃಪೆಯಿರಲಿ, ನಿನಗೋಸ್ಕರ ಅದು ಮಾಯವಾಗಿದೆ. ನಮ್ಮ ಪ್ರೀತಿಯ ಮೌಲ್ಯವನ್ನು ಯಾರೂ ಅಳೆಯಲಾರರು." ಎಂದು ಸಿಹಿ ನುಡಿ ನುಡಿದಳು.

ಕ್ಷಣದಲ್ಲಿ ಜಿಮ್ ಕಲ್ಪನಾ ಪ್ರಪಂಚದಿಂದ ವಾಸ್ತವ ಪ್ರಪಂಚಕ್ಕೆ ಧುಮುಕಿದ. ಪ್ರೀತಿಯ ಡೆಲ್ಲಾ ಕೈಗಳನ್ನು ಹಿಡಿದುಕೊಂಡ.

---

## ಬದುಕು

ಹೆಂಡತಿಯೆಂದಳು
ಸಾಕಾಗಿದೆ ಬದುಕು

ಮಕ್ಕಳೆಂದರು
ಬದುಕೆಂದರೇನು ?

ಮೊಮ್ಮಕ್ಕಳೆಂದರು
ತಾತಾ
ನಾವು ಬದುಕಬೇಕಾ ?

ನಾನೆಂದೆ
ಬಸವಳಿದಿದ್ದೇನೆ.

**ದ್ವಾರನಕುಂಟೆ ಪಾತಣ್ಣ**
ನಾಗಸಂದ್ರ ಅಂಚೆ
ಬೆಂಗಳೂರು – ೭೩

---

"ಹತ್ತು ನಿಮಿಷ ನಾವಿಬ್ಬರೂ ಈ ಕ್ಷುಲ್ಲಕ ವಿಷಯದ ವಿಮರ್ಶೆ ಮರೆತು, ಬೇರೆ ದಿಕ್ಕಿನಲ್ಲಿ ಯೋಚಿಸೋಣ."

ವಾರಕ್ಕೆ ೮ ಡಾಲರೋ ಅಥವಾ ವರ್ಷಕ್ಕೆ ಒಂದು ಮಿಲಿಯನ್ನೋ–ಏನು ವ್ಯತ್ಯಾಸ ?

ಒಬ್ಬ ಗಣಿತಜ್ಞ ಅಥವಾ ಜಾಣ ಈ ಪ್ರಶ್ನೆಗೆ ತಪ್ಪು ಉತ್ತರ ಕೊಡಬಹುದು. ಮೆಜೈ ಅತ್ಯುತ್ತಮ ಉಡುಗೊರೆಗಳನ್ನು ತಂದರು. ಅದು ಅವರವರಲ್ಲೇ ಅಲ್ಲ. ಇದರ ಅರ್ಥ ಮುಂದೆ ಗೊತ್ತಾಗುತ್ತದೆ.

ಜಿಮ್ ಹೊರಕೋಟಿನಿಂದ ಒಂದು ಪೊಟ್ಟಣ ತೆಗೆದು ಮೇಜಿನ ಮೇಲೆ ಎಸೆದ.

"ಡೆಲ್, ನನ್ನ ವಿಷಯದಲ್ಲಿ ಯಾವ ತಪ್ಪನ್ನೂ ತಿಳಿದುಕೊಳ್ಳಬೇಡ. ಕೂದಲ ವಿಸರ್ಜನೆ, ಶಾಂಪೂ ಇತ್ಯಾದಿ ವಿಷಯಗಳು ನನ್ನ ಹುಡುಗಿಯನ್ನು ಕಡಿಮೆ ಪ್ರೀತಿಸುವಂತೆ ನನ್ನನ್ನು ಮಾಡಲಾರದು. ನೀನು ಪ್ಯಾಕೆಟನ್ನು ತೆರೆದಲ್ಲಿ ನಾನು ಮೊದಲು ಹೋಗುವಂತೆ ಮಾಡಿದೆ ಎಂದು ನಿನಗೇ ಗೊತ್ತಾಗುತ್ತದೆ. ಬಿಳುಪಾದ ಚುರುಕು ಬೆರಳುಗಳು ಪ್ಯಾಕೆಟ್ಟಿನ ದಾರ–ಕಾಗದಗಳನ್ನು ಹರಿದವು.

ನಂತರ ಸಂತೋಷೋದ್ರೇಕದ ಕೂಗು ! ನಂತರ ಅಯ್ಯೋ ! ಹೆಣ್ಣಿನ ಹುಚ್ಚು ಕಣ್ಣೀರು, ರೋದನಗಳು ಮನೆಯ ಯಜಮಾನನ ತಕ್ಷಣದ ಸಮಾಧಾನಕರ ಸಾಮರ್ಥ್ಯದ ಪ್ರಯತ್ನಕ್ಕೆ ಪ್ರಚ್ಛನ್ನತೆ ನೀಡಿತು. ಕಾರಣ ಹಣಿಗೆಗಳ ರಾಶಿ ಬ್ರಾಡ್‌ವೇ ಕಿಟಕಿಯಲ್ಲಿ. ಡೆಲ್ಲಾ ಬಹುದಿನಗಳಿಂದ ಅವನ್ನು ಪಡೆಯಲು ಪೂಜಿಸುತ್ತಿದ್ದವಳು. ಆಕರ್ಷಣೀಯ ಸುಂದರ ಹಣಿಗೆಗಳು. ಆಮೆಯ ಚಿಪ್ಪಿನ ಹಣಿಗೆಗಳು. ಅಂಚಿನಲ್ಲಿ ಆಭರಣ



ಗಳಿಂದ (ಹರಳುಗಳಿಂದ) ಅಲಂಕರಿಸಲ್ಪಟ್ಟವು. ಬಹು ಬೆಲೆಬಾಳುವ ಹಣಿಗೆಗಳು. ಅವಳಿಗೆ ಅವು ಪ್ರಾಣ. ಅದು ಕೇವಲ ಆಸ್ತಿಯ ಮೇಲಿನ ವ್ಯಾಮೋಹವಲ್ಲ. ಅವು ಪ್ರೀತಿಯ ಸಂಕೇತಗಳು. ಈಗ ಅವೆಲ್ಲಾ ಅವಳದೇ. ಆದರೆ ಅವುಗಳಿಂದ ಅಲಂಕರಿಸುವ ಜಡೆಯೇ ಇಲ್ಲ. ಎಲ್ಲವನ್ನೂ ಎದೆಗೆ ಅಪ್ಪಿಕೊಂಡಳು. ಮಬ್ಬು ಕಣ್ಣುಗಳಿಂದ ವೀಕ್ಷಿಸಿ ನಕ್ಕು, "ಜಿಮ್, ನನ್ನ ಕೂದಲು ಬೇಗ ಬೆಳೆಯುತ್ತದೆ." ನಂತರ ಡೆಲ್ಲಾ ಬೆನ್ನಿಗೆ ಬೆಂಕಿ ತಾಕಿದ ಬೆಕ್ಕಿನಂತೆ ಜಿಗಿದು ಕುಪ್ಪಳಿಸಿ, "ಅಯ್ಯೋ ಅಯ್ಯೋ !" ಎಂದು ಕಣ್ಣೀರು ಸುರಿಸಿದಳು.

ಜಿಮ್, ಡೆಲ್ಲಾ ತಂದ ವಿಸ್ಮಯಕಾರಿ ಕೊಡುಗೆಯನ್ನು ಇನ್ನೂ ನೋಡಿಲ್ಲ. ಅದನ್ನು ಅವಳು ತನ್ನ ಅಂಗೈಯಲ್ಲಿ ಕುತೂಹಲ ಕೆರಳಿಸುತ್ತಾ ಮುಚ್ಚಿಟ್ಟು ಕೊಂಡಿದ್ದಳು. ಕೈ ಸಡಿಲವಾದಾಗ ಆಗಾಗ ಹೊಳೆಯುತ್ತಿತ್ತು. ಅದು ಅವಳ ಪ್ರಕಾಶಮಾನ ಪ್ರೀತಿಯ ಹೃದಯದ ಆಕಾಂಕ್ಷೆಯ ಪ್ರತಿಬಿಂಬ. "ಚೆನ್ನಾಗಿಲ್ಲವೇ ? ಜಿಮ್, ಪಟ್ಟಣದ ಅಂಗಡಿಗಳಲ್ಲೆಲ್ಲಾ ಬೇಟೆ ಮಾಡಿ ತಂದೆ. ನೀನು ದಿನಕ್ಕೆ ನೂರು ಬಾರಿ 'ಟೈಮ್' ನೋಡಿಕೊಳ್ಳಬೇಕಾಗುವುದು. ನಿನ್ನ ವಾಚನ್ನು ಕೊಡು. ಅದು ಹೇಗೆ ಕಾಣುತ್ತದೆ ಎಂಬುದನ್ನು ನಾನು ನೋಡಬೇಕು."

ಜಿಮ್, "ಡೆಲ್, ನಾವು ಈ ಕ್ರಿಸ್‌ಮಸ್ ಉಡುಗೊರೆಗಳನ್ನು ತಕ್ಷಣ ಉಪಯೋಗಿಸಲಾಗದ ಅತ್ಯಮೂಲ್ಯ ವಸ್ತುಗಳು. ನಾನು ವಾಚನ್ನು ಮಾರಿ ಕೂಂಬ್‌ಗಳನ್ನು ತಂದೆ. ಈಗ ಹೊಟ್ಟೆಯ ಬಗ್ಗೆ ಚಿಂತಿಸೋಣವೇ ?"

ಮೆಜೈ ನಿಮಗೆ ಗೊತ್ತು. ಅವರು ಪೂರ್ವ ದಿಕ್ಕಿನಿಂದ ಬಂದ ತುಂಬ ಜಾಣರು. ಬೇಬಿ ಕ್ರೈಸ್ಟ್‌ಗೆ ಉಡುಗೊರೆಗಳನ್ನು ತಂದವರು. ಕ್ರಿಸ್‌ಮಸ್ ಉಡುಗೊರೆಗಳ ಕಲೆ ಪ್ರಾರಂಭವಾದುದೇ ಅವರಿಂದ. ಅವರು ಎಷ್ಟು ಜಾಣರೋ ಅವರ ಬಹುಮಾನಗಳೂ ಅಂತೆಯೇ. ಒಂದರ ನಕಲು ಇನ್ನೊಂದಾದಾಗ ಪರಸ್ಪರ ಬದಲಾಯಿಸಿಕೊಳ್ಳಬಹುದಾದ ವಿಸ್ಮಯವನ್ನು ಒಳಗೊಂಡಿರುತ್ತವೆ. ಈಗ ಇಲ್ಲಿ ನಾನು, ತಮ್ಮ ಮನೆಯ ಅತ್ಯಂತ ಅಮೂಲ್ಯ ಆಸ್ತಿಗಳನ್ನು ಅವಿವೇಕದಿಂದ ತ್ಯಾಗ ಮಾಡಿಕೊಂಡಿರುವ ಇಬ್ಬರು ಮೂರ್ಖ ಮಕ್ಕಳ, ಅಷ್ಟೇನೂ ಮುಖ್ಯವಲ್ಲದ ವೃತ್ತಾಂತವನ್ನು ನನ್ನ ಮಂದ ಬುದ್ಧಿಯಿಂದ ವಿವರಿಸಿದ್ದೇನೆ.

ಈಗಿನ ಜಾಣರಿಗೆ ನನ್ನದೊಂದು ಕೊನೆಯ ಕಿವಿ ನುಡಿ.

"ಉಡುಗೊರೆ ಅರ್ಪಿಸುವ ಎಲ್ಲರಲ್ಲೂ ಈ ಇಬ್ಬರೇ ಅತ್ಯಂತ ಜಾಣರು. ಉಡುಗೊರೆಯನ್ನು ಒಬ್ಬರಿಂದಿನ್ನಿಬ್ಬರು ಹಂಚಿಕೊಳ್ಳುವುದರಲ್ಲೂ ಇವರೇ ಜಾಣರಲ್ಲಿ ಜಾಣರು."

**(ಇಂಗ್ಲಿಷ್ ಮೂಲ : ದ ಗಿಫ್ಟ್ ಆಫ್ ದ ಮ್ಯಾಗಿ – ಓ ಹೆನ್ರಿ)**

ಕನ್ನಡಕ್ಕೆ : **ಬಿ. ಆರ್. ಭೀಮಾಚಾರ್**
ಕೇರಾಫ್ : ವಿ. ಗಣೇಶ, ನಂ. ೫೬, ಚಾಮರಾಜಪೇಟೆ,
ಸಾಗರ – ೫೭೭ ೪೦೧, ಶಿವಮೊಗ್ಗ ಜಿಲ್ಲೆ

*(೫೪ನೇ ಪುಟದಿಂದ)*

೨೦೦೦ದವರೆಗೆ ವಿಸ್ತರಿಸಲಾಗಿತ್ತು. ಗಂಗಾ ಕಾರ್ಯಪಡೆ ಯೋಜನೆಯ ಮೊದಲ ಹಂತ ಜಾರಿಯಲ್ಲಿರುವಾಗಲೇ ಕೇಂದ್ರ ಗಂಗಾ ಪ್ರಾಧಿಕಾರ (ಸಿಜಿಎ) ಫೆಬ್ರವರಿ ೧೯೯೧ರಲ್ಲಿ ಗಂಗಾ ಕಾರ್ಯಪಡೆ ಯೋಜನೆಯ ಎರಡನೆಯ ಹಂತವನ್ನು ಜಾರಿಗೊಳಿಸಲು ನಿರ್ಧರಿಸಿತ್ತು. ಈ ಹಂತದಲ್ಲಿ ಈ ಕೆಲವು ಪ್ರದೇಶಗಳಲ್ಲಿ ಮಾಲಿನ್ಯ ನಿವಾರಣೆಯ ಉದ್ದೇಶ ಹೊಂದಲಾಗಿತ್ತು. (ಎ) ಗಂಗಾ ನದಿಯ ಉಪನದಿಗಳಾದ ಯಮುನಾ, ದಾಮೋದರ್ ಮತ್ತು ಗೋಮತಿ ನದಿಗಳು, (ಬಿ) ಮೊದಲ ಹಂತದಲ್ಲಿ ಕೈಬಿಡಲಾಗಿದ್ದ ೨೫ ಪ್ರಥಮ ದರ್ಜೆ ನಗರಗಳು, (ಸಿ) ನದಿಯ ತೀರದ ಇತರ ಮಾಲಿನ್ಯ ಉಂಟುಮಾಡುವ ಪಟ್ಟಣಗಳು. ಏಪ್ರಿಲ್ ೧೯೯೩ರಿಂದ ಅಕ್ಟೋಬರ್ ೧೯೯೬ರ ಅವಧಿಯಲ್ಲಿ ಗಂಗಾ ಕಾರ್ಯಪಡೆ ಯೋಜನೆಯ ಎರಡನೆ ಹಂತವನ್ನು ವಿವಿಧ ಹಂತಗಳಲ್ಲಿ ಆರ್ಥಿಕ ವ್ಯವಹಾರಗಳ ಸಂಸದೀಯ ಸಮಿತಿ ಅಂಗೀಕರಿಸಿತ್ತು.

ಗಂಗಾ ಕಾರ್ಯಪಡೆ ಯೋಜನೆಯ ಮೊದಲನೆ ಹಂತದಲ್ಲಿ ೨೭೯೪ ಎಂಎಲ್‌ಡಿ ಚರಂಡಿ ನೀರನ್ನು ಸಂಸ್ಕರಿಸಲು ನಿರ್ಧರಿಸಲಾಗಿತ್ತು. ಮೊದಲನೆಯ ಹಂತದಲ್ಲಿ ೮೮೨ ಎಂಎಲ್‌ಡಿ, ಎರಡನೆಯ ಹಂತದಲ್ಲಿ ೧೯೧೨ ಎಂಎಲ್‌ಡಿ ಗಂಗಾ ನದಿ ಮತ್ತು ಅದರ ಉಪನದಿಗಳ ಆಸುಪಾಸಿನ ಪಟ್ಟಣಗಳಲ್ಲಿ ಉತ್ಪತ್ತಿಯಾಗುವ ಚರಂಡಿ ತ್ಯಾಜ್ಯದ ಪ್ರಮಾಣ ೫೦೪೪ ಎಂಎಲ್‌ಡಿ ಇರಬಹುದು ಎಂದು ಎನ್‌ಆರ್‌ಸಿಡಿ ಸಂಸ್ಥೆಯ ಸಮೀಕ್ಷೆ ಹೇಳುತ್ತದೆ. ಇದರಲ್ಲಿ ದೆಹಲಿಯೇ ೨೨೭೦ ಎಂಎಲ್‌ಡಿ ಪೂರೈಸುತ್ತದೆ. ೧೯೯೩–೯೪ರಿಂದ ೧೯೯೯–೨೦೦೦ದ ಅವಧಿಯಲ್ಲಿ ಗಂಗಾ ಕಾರ್ಯಪಡೆ ಯೋಜನೆಯ ಮೊದಲನೆಯ ಹಂತದಲ್ಲಿ ಅಡ್ಡಗಟ್ಟುವ ಮತ್ತು ದಿಕ್ಕು ಚ್ಯುತಿಯ ಯೋಜನೆಗಳಿಗೆ ಹಾಗೂ ಚರಂಡಿ ತ್ಯಾಜ್ಯ ನಿರ್ವಹಣಾ ಘಟಕಗಳಿಗೆ ೬೫೫ ಕೋಟಿ ರೂಪಾಯಿಗಳನ್ನು ಖರ್ಚು ಮಾಡಲಾಗಿತ್ತು. ಕಡಿಮೆ ವೆಚ್ಚದ ಶೌಚಾಲಯ ಯೋಜನೆ, ನದಿ ಮುಂಚೂಣಿಯ ಅಭಿವೃದ್ಧಿ ಯೋಜನೆಗಳು, ವಿದ್ಯುತ್ ಮತ್ತು ಸುಧಾರಿತ ಉರುವಲು ಬಳಸುವ ಶವಾಗಾರಗಳು ಮತ್ತು ಅಳತೆ ಮಾಡಲಾಗದ ಮಾಲಿನ್ಯಗಳಾದ ಘನತ್ಯಾಜ್ಯದ ಸಂಗ್ರಹ, ಮುಕ್ತ ಶೌಚಾಲಯದ ತ್ಯಾಜ್ಯ, ಅರೆಸುಟ್ಟ, ಸುಡದ ಮೃತದೇಹಗಳ ಸಂಗ್ರಹ ಇವುಗಳನ್ನು ಜಾರಿಗೊಳಿಸಲು ಈ ಮೊತ್ತವನ್ನು ಬಳಸಲಾಗಿತ್ತು.

೧೯೯೪–೨೦೦೦ದ ಅವಧಿಯ ಸಿ. ಎ. ಜಿ. ವರದಿಯನ್ವಯ (ವರದಿ ೫–ಎ) ಭಾರತ ಸರ್ಕಾರದ ವಿಜ್ಞಾನ ವಿಭಾಗಗಳು ಗಂಗಾ ಕಾರ್ಯಪಡೆ ಯೋಜನೆಗಳ ಆಳವಾದ ಅಧ್ಯಯನ ನಡೆಸಿದ್ದು, ಸಾವಿರ ಕೋಟಿಗಿಂತಲೂ ಹೆಚ್ಚು ಹಣ ಖರ್ಚು ಮಾಡಿರುವ ಯೋಜನೆಗಳ ಲೆಕ್ಕ ಪರಿಶೋಧನೆ ನಡೆಸಿವೆ (ಗಂಗಾ ಶುದ್ಧೀಕರಣ ಮತ್ತಿತರ ಯೋಜನೆಗಳಿಗೆ ಸರ್ಕಾರದ ಬೊಕ್ಕಸದಿಂದ ಎಷ್ಟು ಹಣ ಖರ್ಚಾಗಿದೆ ಎಂಬ ಮಾಹಿತಿ ಎಲ್ಲಿಯೂ ಲಭ್ಯವಿಲ್ಲ). ಪವಿತ್ರ ಗಂಗೆಯಲ್ಲಿರುವ ಕೊಳಕು ನೀರನ್ನು ಶುದ್ಧೀಕರಿಸುವ ಸಾಹಸಕ್ಕೆ ಕೈ ಹಾಕುವ ಮುನ್ನ ಸಿ. ಎ. ಜಿ. ತನ್ನ ಲೆಕ್ಕಪರಿಶೋಧನಾ ವರದಿಯಲ್ಲಿ ನೀಡಿರುವ ಕೆಲವು ಸೂಚನೆಗಳನ್ನು, ಅಭಿಪ್ರಾಯಗಳನ್ನು ಗಂಭೀರವಾಗಿ ಪರಿಶೀಲಿಸುವ ಅಗತ್ಯವಿದೆ.

ಆಧಾರ : ಸಿ. ಎ. ಜಿ.ಯವರ ವರದಿ

**ವಸಂತ್ ಕುಮಾರ್, ಮೈಸೂರುಮಠ್**
ಕನ್ನಡಕ್ಕೆ : **ನಾ. ದಿವಾಕರ**
ಮನೆ ಸಂಖ್ಯೆ : ೫೮, ಬ್ಲಾಕ್ ೨೨, ಮಧುವನ
ಶ್ರೀರಾಂಪುರ ೨ನೇ ಹಂತ, ಮೈಸೂರು – ೫೭೦ ೦೨೩

# ಸಹವಾಸ



ಪತಂಗವು ಕೆಲವು ಗಂಟೆಗಳ, ಕೆಲವು ದಿನಗಳ ಮಟ್ಟಿಗೆ ಮಾತ್ರ ಬದುಕುತ್ತದೆ. ಆದರೂ ಅದರ ಜೀವನ ಮಧುರ ಮಧುರವಾಗಿದೆ. ಅದೇ ಮನುಷ್ಯ ಗಂಟೆ ಗಂಟೆಯಲ್ಲ, ದಿನ ದಿನವಲ್ಲ, ವರುಷಗಟ್ಟಲೆ ಬದುಕುತ್ತಾನೆ. ಆದರೆ ಅವನ ಬದುಕಿನಲ್ಲಿ ಆ ಪತಂಗದ ಬದುಕಿನ ಮಧುರತೆ ಇಲ್ಲ. ಹುಳಿ ಇದೆ. ವಿಷ ಇದೆ. ಕಾರಣವಿಷ್ಟೆ : ಪತಂಗ ಕಣ್ಣು ಬಿಟ್ಟಾಗಿನಿಂದ ಜೀವನಪರ್ಯಂತ ಹೂವಿನ ಸಹವಾಸ ಮಾತ್ರ ಮಾಡುತ್ತದೆ. ಅದು ಹೀರುವುದು ಕೂಡ ಹೂವಿನ ಮಕರಂದವನ್ನೇ. ಅಂತೆಯೇ ಅದರ ಜೀವನ ಅಲ್ಪಕಾಲದ್ದಾದರೂ ಜೇನಿನಂತೆ ಸಿಹಿ ಸಿಹಿಯಾಗಿದೆ.

'ಸಹವಾಸ' ಎಂಬುದು ಒಂದು ಸಮಾಸಪದ. ಸಹ ಮತ್ತು ವಾಸ ಎಂಬ ಪದಗಳಿಂದ ಅದು ಸಿದ್ಧವಾಗಿದೆ. 'ಸಹ' ಎಂದರೆ ಒಡನೆ, ಜೊತೆ, ಸಂಗಡ ಎಂದರ್ಥ. ಅದೇ ರೀತಿ 'ವಾಸ' ಎಂಬುದು ವಾಸಿಸು, ಜೀವಿಸು, ಇರು ಎಂಬ ಅರ್ಥಗಳನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ 'ಸಹವಾಸ' ಎಂದರೆ ಕೂಡಿ ಇರು, ಜೊತೆಯಾಗಿರು, ಕೂಡಿ ವಾಸಿಸು, ಕೂಡಿ ಬದುಕು, ಜೊತೆಗೂಡಿ ಬಾಳು, ಸ್ನೇಹ, ಗೆಳೆತನ, ಸಂಪರ್ಕ, ಸಂಗ ಎಂಬಿತ್ಯಾದಿ ಅರ್ಥಗಳಾಗುತ್ತವೆ.

ಸಹವಾಸ ಈ ಸೃಷ್ಟಿಯ ಪ್ರಧಾನ ಲಕ್ಷಣಗಳಲ್ಲಿ ಒಂದು. ಖ್ಯಾತ ಜಾನಪದ ವಿದ್ವಾಂಸ ಗೊರುಚ ಅವರು ಹೇಳುವಂತೆ 'ಸಹವಾಸವಿಲ್ಲದೆ ಒಂದು ಜೀವಿಯೂ ಈ ಸೃಷ್ಟಿಯಲ್ಲಿಲ್ಲ. ಸಹವಾಸ ತಪ್ಪಿದರೆ ಏನೂ ಇಲ್ಲ. ಪ್ರಕೃತಿಗೆ ಸ್ಪಂದಿಸುವ ಜೀವಿ ಪ್ರಾಣಿ ಇರಲಿ, ಮಾನವನಿರಲಿ ಸಹವಾಸ ಅನಿವಾರ್ಯ, ಈ ಸೃಷ್ಟಿಯ ಬೆಡಗಿರುವುದೇ ಸಹವಾಸದಲ್ಲಿ.' ಹೀಗಾಗಿ ಈ ಸೃಷ್ಟಿಯ ಎಲ್ಲ ಜೀವಿಗಳ ಜೀವನ ನಿಂತಿರುವುದು ಸಹವಾಸದ ಮೇಲೆ. ಸಹವಾಸ ಅವೆಲ್ಲವುಗಳ ಜೀವಸಂಜೀವಿನಿ. ಬೆಳೆಯುವ ಸಸಿಗೆ ನೀರು, ಗೊಬ್ಬರ, ಬೆಳಕು ಗಾಳಿಯ ಸಹವಾಸದ ಜೊತೆಗೆ ರೈತನ ಒಡನಾಟದ ಅಗತ್ಯವೂ ಇದೆ. ಹಾಗೆಯೇ ಮನುಷ್ಯನ ಜೀವನ ಕೂಡ. ಸಹವಾಸವಿಲ್ಲದೆ ಅವನಿಗೆ ಬದುಕುವುದು ಸಾಧ್ಯವೇ ಇಲ್ಲ. ಗಾಳಿ, ಬೆಂಕಿ, ನೀರು, ಭೂಮಿಯಂಥ ನಿಸರ್ಗಸಹಜ ವಸ್ತುಗಳ ಸಹವಾಸದ ಜೊತೆಗೆ ಸಾರ್ವಜನಿಕರ ಸಂಪರ್ಕವೂ ಅವನಿಗೆ ಬೇಕೇಬೇಕು. ಅಂತೆಯೇ ಅವನನ್ನು ಸಮಾಜಜೀವಿ, ಸಂಘಜೀವಿ ಎನ್ನಲಾಗುತ್ತದೆ.

ಸಹವಾಸಗಳು ಹಲವಾರಿದ್ದಂತೆ, ಅವುಗಳ ಸ್ವರೂಪ, ಸಂಬಂಧ, ಅನುಭವ, ಉದ್ದೇಶ, ಪರಿಣಾಮಗಳಲ್ಲೂ ಭಿನ್ನತೆ ಉಂಟು. ಅದೇನೇ ಇದ್ದರೂ ಒಟ್ಟು ಸಹವಾಸಗಳನ್ನು ನಾವು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಒಂದು, ಉತ್ತಮ ಸಹವಾಸಗಳು. ಮತ್ತೊಂದು, ಕೆಟ್ಟ ಸಹವಾಸಗಳು. ಯಾವ ಸಹವಾಸದಿಂದ ವ್ಯಕ್ತಿಯ ಮೇಲೆ ಒಳ್ಳೆಯ ಪರಿಣಾಮವಾಗಿ ಅವನ ಬದುಕು ಉಜ್ವಲವಾಗುವುದೋ ಅದು ಉತ್ತಮ ಸಹವಾಸ. ಅದೇ ರೀತಿ ಯಾವುದರಿಂದ ಅವನು ಕೆಟ್ಟು, ಅವನ ಬಾಳು ಬರಡಾಗಿ ಹೋಗುವುದೋ ಅದು ಕೆಟ್ಟ ಸಹವಾಸ. ಒಟ್ಟಿನಲ್ಲಿ ಮಾನವನ ಬದುಕಿನ ಸಾರ್ಥಕತೆ ಮತ್ತು ನಿರರ್ಥಕತೆಗಳೆರಡೂ ಸಹವಾಸವನ್ನೇ ಅವಲಂಬಿಸಿವೆ.

ಪತಂಗವು ಕೆಲವು ಗಂಟೆಗಳ, ಕೆಲವು ದಿನಗಳ ಮಟ್ಟಿಗೆ ಮಾತ್ರ ಬದುಕುತ್ತದೆ. ಆದರೂ ಅದರ ಜೀವನ ಮಧುರ ಮಧುರವಾಗಿದೆ. ಅದೇ ಮನುಷ್ಯ ಗಂಟೆ ಗಂಟೆಯಲ್ಲ, ದಿನ ದಿನವಲ್ಲ, ವರುಷಗಟ್ಟಲೆ ಬದುಕುತ್ತಾನೆ. ಆದರೆ ಅವನ ಬದುಕಿನಲ್ಲಿ ಆ ಪತಂಗದ ಬದುಕಿನ ಮಧುರತೆ ಇಲ್ಲ. ಹುಳಿ ಇದೆ. ವಿಷ ಇದೆ. ಕಾರಣವಿಷ್ಟೆ : ಪತಂಗ ಕಣ್ಣು ಬಿಟ್ಟಾಗಿನಿಂದ ಜೀವನಪರ್ಯಂತ ಹೂವಿನ ಸಹವಾಸ ಮಾತ್ರ ಮಾಡುತ್ತದೆ. ಅದು ಹೀರುವುದು ಕೂಡ ಹೂವಿನ ಮಕರಂದವನ್ನೇ. ಅಂತೆಯೇ ಅದರ ಜೀವನ ಅಲ್ಪಕಾಲದ್ದಾದರೂ ಜೇನಿನಂತೆ ಸಿಹಿ ಸಿಹಿಯಾಗಿದೆ.

ಶರಣರು – ಸಂತರು – ಅನುಭಾವಿಗಳು ಬದುಕಿನ ಸಾರ್ಥಕತೆಗೆ ಸಜ್ಜನರ ಸಹವಾಸಕ್ಕೆ ಕರೆ ನೀಡಿದ್ದಾರೆ. ಉತ್ತಮ ಹಾಗೂ ಕೆಟ್ಟ ಸಹವಾಸಗಳ ಸ್ವರೂಪ – ಪರಿಣಾಮ ಕುರಿತು ತಿಳಿಸಿ ಹೇಳಿದ್ದಾರೆ.

*ಸಜ್ಜನರ ಸಂಗ ಹೆಜ್ಜೇನು ಸವಿದಂತೆ*
*ದುರ್ಜನರ ಸಂಗವದು ಬಚ್ಚಲಿನಾ*
*ರೊಚ್ಚಿನಂತಿಕ್ಕು ಸರ್ವಜ್ಞ*

– ಎಂದು ಸರ್ವಜ್ಞ ಮನವರಿಕೆ ಮಾಡಿಕೊಟ್ಟಿದ್ದರೆ, ಬಸವಣ್ಣನವರು :

*ಸಾರ ಸಜ್ಜನರ ಸಂಗವದು ಲೇಸು ಕಂಡಯ್ಯ*
*ದೂರ ದುರ್ಜನರ ಸಂಗ ಬೇಡವಯ್ಯ*
*ಆವ ಹಾವಾದರೇನು ವಿಷವೊಂದೇ*
*ಅಂತವರ ಸಂಗ ಬೇಡವಯ್ಯ*
*ಅಂತರಂಗ ಶುದ್ಧವಿಲ್ಲದವರ ಸಂಗ*
*ಸಿಂಗಿಕಾಳಕೂಟ ವಿಷವೋ ಕೂಡಲ ಸಂಗಮದೇವಾ*

– ಎಂದು ಸಾರಿ ಸಾರಿ ಹೇಳಿದ್ದಾರೆ. ಕನಕದಾಸರಂತೂ 'ಉತ್ತಮರ ಸಂಗದಿಂದ ಧರ್ಮವುಂಟೇ ?, ಸತ್ಯವಂತರ ಸಂಗವಿರಲು ತೀರ್ಥವೇತಕೆ ?' ಎಂದು ಪ್ರಶ್ನಿಸಿದ್ದಾರೆ. ಜನಪದ ಗರತಿಯೋರ್ವಳು 'ಉತ್ತಮರ ಗೆಳೆತನ ಮುತ್ತಳಿ ಬಂಗಾರ' ಎಂದು ಬಣ್ಣಿಸಿದ್ದಾಳೆ. ೧೨ನೇ ಶತಮಾನದಲ್ಲಿ ಅಕ್ಕಮಹಾದೇವಿ ಉತ್ತಮರ ಸಹವಾಸಕ್ಕಾಗಿ ಹುಟ್ಟಿದ ಊರು ಹಾಗೂ ಹಡೆದ ತಂದೆ – ತಾಯಿಯರನ್ನೇ ಬಿಟ್ಟು ದೂರದ ಕಲ್ಯಾಣಕ್ಕೆ ಬಂದಳು. ಅಂತೆಯೇ ಆಕೆಯ ಜೀವನ ದಿವ್ಯಜ್ಯೋತಿಯಾಗಿ ಬೆಳಗಿತು. ಅದೇ ಕೌಶಿಕ ಪ್ರೇಮ – ಕಾಮದ ಸಹವಾಸಕ್ಕೆ ಹಪಹಪಿಸಿ ಹಾಳಾಗಿಹೋದ. ಅಕ್ಕಮಹಾದೇವಿ ಇಂದು ನಮ್ಮ ನಡುವೆ ಇಲ್ಲವಾದರೂ ಆಕೆ ಅಂದು ಬೆಳಗಿದ ಆ ದಿವ್ಯಜ್ಯೋತಿ ಇಂದಿಗೂ ಲೋಕವನ್ನು ಬೆಳಗುತ್ತಿದೆ. ಆದ್ದರಿಂದ ಬದುಕಿನ ಪರಿಶುದ್ಧತೆಗೆ ನಾವು ಉತ್ತಮ ಸಹವಾಸಗಳನ್ನು ಆಯ್ಕೆಮಾಡಿಕೊಳ್ಳುವುದು ಒಳ್ಳೆಯದು. ಪಾಶ್ಚಾತ್ಯ ಸಂಸ್ಕೃತಿಯ ಸಹವಾಸದ ಪರಿಣಾಮದಿಂದ ಗಬ್ಬೆದ್ದು ನಾರುತ್ತಿರುವ ಇಂದಿನ ನಮ್ಮ ಬದುಕಿಗೆ ಉತ್ತಮ ಸಹವಾಸದ ಅಗತ್ಯತೆ ಇನ್ನಷ್ಟು ತೀವ್ರವಾಗಿದೆ.

**ಡಾ॥ ಗುರುಲಿಂಗಪ್ಪ ಧಬಾಲೆ**
ಮುಖ್ಯಸ್ಥರು, ಕನ್ನಡ ವಿಭಾಗ, ಸಿ. ಬಿ. ಖೇಡಗಿ ಮಹಾವಿದ್ಯಾಲಯ
ಅಕ್ಕಲಕೋಟ – ೪೧೩ ೨೧೬, ಸೊಲ್ಲಾಪುರ ಜಿಲ್ಲೆ (ಮಹಾರಾಷ್ಟ್ರ)













## ಹೊಸತನ್ನು ಕಲಿಯುವ ಹಂಬಲವಿರುವ ಗ್ರಾಫಿಕ್ ಕಲಾವಿದ

# ಸೂರಜ್ ಎಸ್. ವಶಿಷ್ಠ

**ಬೆಂ**ಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ 2005ರಲ್ಲಿ ಬಿ.ಎಫ್.ಎ. ಪದವಿ ಪಡೆದು ಹೊರಬಂದ ಸೂರಜ್ ವಶಿಷ್ಠ ಮೂಲತಃ ಗ್ರಾಫಿಕ್ ಕಲಾವಿದರು. ಇವರು ಚಿತ್ರಕಲಾ ಪರಿಷತ್ತಿಗೆ ಸೇರಿದ್ದು ಅನಿರೀಕ್ಷಿತ. ಸಂಗೀತ, ಕಲೆ, ರಂಗಭೂಮಿ, ಸಿನಿಮಾದಲ್ಲಿ ಆಸಕ್ತಿಯಿದ್ದ ಕುಟುಂಬದ ವಾತಾವರಣ ಇವರಿಗೆ ಚಿತ್ರಕಲೆಯಲ್ಲಿ ವಿಶೇಷ ಆಸಕ್ತಿಯನ್ನು ರೂಢಿಸಿಕೊಳ್ಳಲು ನೆರವಾಯಿತು. ಆಧುನಿಕ ಚಿತ್ರಕಲೆ, ಅದರಲ್ಲೂ ವಿಶೇಷವಾಗಿ ಬಂಗಾಲದ ಪುನರುತ್ಥಾನದ ಅವಧಿಯಲ್ಲಿ ಅರಳಿದ ಪ್ರಬುದ್ಧ ಚಿತ್ರ ಕಲಾವಿದರ ಕೃತಿಗಳ ಗಾಢ ಪರಿಣಾಮದಿಂದ ಕಲೆಯಲ್ಲಿ ತೊಡಗಿಕೊಂಡಿರುವ ಸೂರಜ್ ನಂದಲಾಲ್ ಬೋಸ್, ಬಿನೋದ್ ಬಿಹಾರಿ ಮುಖರ್ಜಿ, ರವೀಂದ್ರನಾಥ್ ಟ್ಯಾಗೂರ್, ಕೆ. ಕೆ. ಹೆಬ್ಬಾರ್ ಅವರಂತಹ ಮಹಾನ್ ಕಲಾವಿದರಿಂದ ಸ್ಫೂರ್ತಿ ಪಡೆದಿದ್ದಾರೆ. ಶಾಯಿ, ಪೆನ್ಸಿಲ್, ಚಾರ್‌ಕೋಲ್ ಮಾಧ್ಯಮ ಇವರಿಗೆ ಒಗ್ಗಿರುವ ಸಾಧನಗಳು. ರೇಖೆಗಳು, ಕಪ್ಪು–ಬಿಳುಪು, ಏಕವರ್ಣ ಚಿತ್ರಗಳ ಪರಿಭಾಷೆ ಇವರಿಗೆ ಅಭಿವ್ಯಕ್ತಿಗೆ ಪೂರಕವಾದ ವ್ಯಾಕರಣ ಒದಗಿಸಿದೆ. ಈ ಪರಿಭಾಷೆಯ ಅನನ್ಯ ಸಾಧ್ಯತೆಗಳು ಇವರನ್ನು ಪ್ರಯೋಗದತ್ತ ಸೆಳೆದಿವೆ.

ವ್ಯಂಗ್ಯಚಿತ್ರಗಳು, ರೇಖಾಚಿತ್ರ ಕಲೆ, ಡೂಡಲ್ಸ್, ಚಾರ್‌ಕೋಲ್ ಚಿತ್ರಗಳನ್ನು ಬಿಡಿಸುವುದರಲ್ಲಿ ಮತ್ತು ಹೊಸ ಅಲೆಯ ಸಿನಿಮಾ ಹಾಗೂ ಸಾಹಿತ್ಯದಲ್ಲಿ ವಿಶೇಷ ಆಸಕ್ತಿ.

ಇವರು ವೃತ್ತಿಯಿಂದ ಗ್ರಾಫಿಕ್ ಕಲಾವಿದ. ಸ್ವಂತ ಅಭಿವ್ಯಕ್ತಿಗೆ ಬಿಡುವಿನ ಸಮಯ ಮೀಸಲು. ಮುಂದೆ ಪೂರ್ಣ ಸಮಯ ಚಿತ್ರಕಲೆಯಲ್ಲಿ ತೊಡಗಿಕೊಳ್ಳುವ ಹಂಬಲ.







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bengaluru- 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bengaluru - 560 001, Editor : Dr. Siddanagouda Patil

